# ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರ ಪುರಾಣ

ಸಂಪಾದಕರು :

ಡಾ. ಮ. ಗು. ಬಿರಾದಾರ,
ಎಂ.ಎ.,ಪಿಎಚ್.ಡಿ.

ಡಾ. ವ್ಹಿ. ಜಿ. ಪೂಜಾರ,
ಎಂ.ಎ.,ಪಿಎಚ್.ಡಿ.

೧೯೮೮

ಶ್ರೀ ಶರಣ ಶಿವಲಿಂಗೇಶ್ವರ ಸಂಸ್ಥೆ, ಮಾದನ ಹಿಪ್ಪರಗಾ
(ತಾ. ಆಳಂದ, ಜಿ. ಗುಲಬರ್ಗಾ)

"Sri Sadguru Sharana Shivalingeshwar Purana"

Edited by : Dr. M. G. Biradar, Professor & Head and Dr. V. G. Pujar, Reader, Institute of Kannada Studies, Gulbarga University, Gulbarga.

Published by : Sri Sharana Shivalingeshwar Samsthe, Madana Hipparaga, Tq. Aland, Dt. Gulbarga.

ಪ್ರಥಮ ಮುದ್ರಣ : ೧೯೮೮

೧೦೦೦ ಪ್ರತಿಗಳು





ಬೆಲೆ : ರೂ. ೫೧-೦೦

ಮುಖಪುಟ : ಶ್ರೀ ನಾರಾಯಣ ಚೀಲಾಪೂರ, ಗದಗ



ಮುದ್ರಣ :

ಪ್ರಭು ಪ್ರಿಂಟಿಂಗ ಪ್ರೆಸ್,
ಜ. ತೋಂಟದಾರ್ಯಮಠದ ಹತ್ತಿರ, ಗದಗ
ದೂರವಾಣಿ : ೮೧೮೧



ಲೇಖಕರು :

**ಕನ್ನಡದ ಕವಿರತ್ನ ವೇದಮೂರ್ತಿ ಶ್ರೀ ಮಡಿವಾಳರು, ರೋಡಗಿ**

ತಾ. ಇಂಡಿ, ಜಿ. ವಿಜಾಪೂರ



ಸದ್ಗುರು ಶ್ರೀ ಶಿವಶರಣಾನಂದ ಸಾಧುಮಹಾರಾಜ,
ಸುಕ್ಷೇತ್ರ ಬ್ರಹ್ಮಗದ್ದಿಮಠ, ಮುಧೋಳ ಅವರ

## ಆಶೀರ್ವಚನ

ಶ್ರೀಗುರು ಶರಣ ಶಿವಲಿಂಗೇಶ್ವರ ಪುರಾಣ ಪ್ರಕಟಣೆಯ ವಿಷಯವನ್ನು ಕೇಳಿದುದು ಎನಗೆ ಸಂತೋಷವನ್ನುಂಟುಮಾಡಿತು. ಹನ್ನೆರಡನೆಯ ಶತಮಾನದಲ್ಲಿಯ ಬಸವಣ್ಣನವರ ಸಮಕಾಲೀನರಲ್ಲಿದ್ದ ಶರಣರು ಲೋಕ ಕಲ್ಯಾಣಾರ್ಥವಾಗಿ ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಿದಂತೆ 'ಆಗಿದ್ದ ಶರಣರು ಈಗಿಲ್ಲವೇನು' ಎಂಬ ನಾಣ್ನುಡಿಯಂತೆ, ಶರಣರ ನಿಲಯವಾದ ಕಲಬುರ್ಗಿ ಜಿಲ್ಲೆಯ ಆಳಂದ ತಾಲೂಕಿನ ಮೂಲೆಯ ಪಕ್ಕದಲ್ಲಿರುವ ಮಾದನ ಹಿಪ್ಪರಗಿಯೆಂಬ ಹಳ್ಳಿಯಲ್ಲಿ, ನಂದಿಧ್ವಜದವರ ಮನೆತನದಲ್ಲಿ ವೀರಶೈವ ಅಷ್ಟಾವರಣ ಷಟಸ್ಥಲ ಸಂಪನ್ನರಾದಂತ ಮಲ್ಲಿಕಾರ್ಜುನ, ಸುವಿಚಾರಿ ಸುಗುಣಿ ಭಾವಭಕ್ತಿ ಸಂಪನ್ನಳಾದಂತ ಬಂಗಾರೆಮ್ಮ ದಂಪತಿಗಳ ಉದರದಲ್ಲಿ ಲೋಕ ಪಾವನಮೂರ್ತಿ ಶರಣ ಶಿವಲಿಂಗೇಶ್ವರರು ಜನಿಸಿದರು. ಬಾಲ್ಯತ್ವದಲ್ಲಿ ಶಿಲೆ ತಾಳಂ ಹಿಡಿದು ಬಸವಾ ಬಸವಾ ಎಂದು ಭಜಿಸುತ್ತಿದ್ದರು. ಪ್ರಾಯಕ್ಕೆ ಬರಲು ಕಾಯಾ ವಾಚಾ ಮನಸ್ಸಿನಿಂದ ಅಷ್ಟಾವರ್ಣ ಷಟಸ್ಥಲ ಸಂಪನ್ನರಾಗಿ ಲಿಂಗಾಂಗ ಸಾಮರಸ್ಯವನ್ನು ಅರಿಯುತ್ತ, ಕಾಯಕವೇ ಕೈಲಾಸವೆಂಬಂತೆ ಪ್ರತಿನಿತ್ಯವೂ ಕಾಯಕ ಮಾಡುತ್ತ ಜಂಗಮ ಆರಾಧನೆಯನ್ನು ಗೈಯುತ್ತ, ಬಂದ ಅತಿಥಿಗಳಿಗೆ ದಾಸೋಹಂ ನೀಡುತ್ತ, ಶರಣಸ್ಥಲದ ನಡೆಯಂತೆ ನಡೆಯುತ್ತ, ನುಡಿಯುತ್ತ, ಪಡೆಯುತ್ತ ಮಾನವರನ್ನು ಉದ್ಧಾರ ಮಾಡುವ ಕಾರ್ಯವನ್ನು ಕೈಕೊಂಡರು. ತಮ್ಮ ಜೀವನದಲ್ಲಿ ಭೂತ, ಭವಿಷ್ಯ, ವರ್ತಮಾನದ ಸಂಗತಿಯನ್ನು ಭಕ್ತಾದಿಗಳಿಗೆ ಆಗಾಗ ತಿಳಿಸುತ್ತಿದ್ದರು.

ತಿಳಿಸಿದಾಗ ಅಜ್ಞಾನ ಅಂಧಃಕಾರದಲ್ಲಿ ತೊಳಲಿ ಬಳಲುತ್ತಿರುವ ಕುಟಿಲ ಕುಪಕ ಜನರು ನಿಂದೆಯನ್ನು ಮಾಡುತ್ತಿರುವದನ್ನು ಕಂಡು ತಾಯಿ ದುಃಖಿಸುತ್ತಿದ್ದಳು. ಆಗ ಶರಣರು ತಾಯಿ ಬಂಗಾರೆಮ್ಮಳಿಗೆ ಹೇಳುತ್ತಿದ್ದರು "ಅಮ್ಮಾ ನಿಂದೆಯು ತನ್ನಿಂದ ತಾನೇ ಬಂದರೆ ಆನಂದಿಸುವದು ಬಲು ಪಾಡಮ್ಮಾ" ಎಂದು ಹೇಳಿ ತಾಯಿಗೆ ಸಮಾಧಾನ ಪಡಿಸಿದರು. ಮುಂದೆ ಭೂತ ಭವಿಷ್ಯ ವರ್ತಮಾನದ ವಾಣಿಯು ಸಿದ್ಧಮಾಡಿ ಜನಕ್ಕೆ ತೋರಿಸಿದರು. ನಿಂದಕರು ಬಂದು ಶರಣರ ಪಾದಕ್ಕೆ ವಂದನೆಯನ್ನು ಮಾಡಿದರು.

ಹೀಗಿರುತ್ತಿರಲು ಶರಣರು ನಂದಿಧ್ವಜದವರ ಮನೆತನದಲ್ಲಿ ಜನ್ಮಿಸಿದ್ದಕ್ಕಾಗಿ ನಂದಿಯನ್ನು ಸ್ಥಾಪನೆ ಮಾಡಬೇಕೆಂಬ ಸಂಕಲ್ಪವು ಬಹುದಿನಗಳಿಂದ ಮನದಲ್ಲಿ ನಡೆದಾಗ ಅನಾಯಾಸವಾಗಿ ಕಮರೀಮಠ ಲಚ್ಯಾಣದ ಶ್ರೀ ಸಿದ್ಧಲಿಂಗ ಮಹಾಋಷಿಗಳು ಮಾದನ ಹಿಪ್ಪರಗಿ ಗ್ರಾಮಕ್ಕೆ ಆಗಮಿಸಿರುವದು ಶರಣರಿಗೆ ತಿಳಿಯಿತು. ಆಗ ಸಿದ್ಧಲಿಂಗರನ್ನು ಮಠಕ್ಕೆ ಬರಮಾಡಿಕೊಳ್ಳಬೇಕೆಂಬ ಸದಿಚ್ಛೆಯು ಉತ್ಪನ್ನವಾಯಿತು. ತಕ್ಷಣದಲ್ಲಿ ತಮ್ಮ ಶಿಷ್ಯಂದಿರಾದ ಗುರುಮೂರ್ತೆಪ್ಪಾ ಆಲ್ಮದ ಮತ್ತು ಮಹಾಂತಪ್ಪ ಸಿಂಗಶೆಟ್ಟಿ ಈರ್ವರನ್ನು ಬರಮಾಡಿಕೊಂಡು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಲಿಂಗವಿಲ್ಲದ ಭವಿಯ ಮುಖವೂ ಸಹ ತಾವು ನೋಡಬಾರದೆಂದು ಮಹಾಂತಪ್ಪನು ಎದುರುತ್ತರಿಸಿದನು. ಈ ವಿಚಾರಕ್ಕೆ ಗುರುಮೂರ್ತಿಯು ಒಪ್ಪಲಿಲ್ಲ. ಆಗ ಶರಣರೆನ್ನುತ್ತಾರೆ "ಶರೀರವೇ ಲಿಂಗಮಯವಾದಂತ ಸಿದ್ಧಲಿಂಗರನ್ನು ಭೆಟ್ಟಿಯಾಗಿ ಬರಮಾಡಿಕೊಂಡರೆ ಆಗುವ ತಪ್ಪೇನು" ಎಂದು ನುಡಿದರು. ಉಭಯ ಶಿಷ್ಯರು ಉತ್ತರಿಸದೆ ಸ್ತಬ್ಧರಾದರು. ಆ ದಿವಸ ಶರಣರು ತಮ್ಮ ಸಂಕಲ್ಪದ ಚಿಂತನದಲ್ಲಿ ಮಗ್ನರಾಗಿ ವಿಶ್ರಮಿಸಿದಾಗ ಬೆಳಗಿನ ಜಾವದಲ್ಲಿ ಸಿದ್ಧಲಿಂಗ ಮಹಾಋಷಿಗಳವರು ಶರಣರಿಗೆ ದರ್ಶನ ಕೊಟ್ಟರು. ತಕ್ಷಣ ಎಚ್ಚತ್ತು ಗುರುಮೂರ್ತೆಪ್ಪನನ್ನು ಬರಮಾಡಿಕೊಂಡು "ಮಗು ಈಗ್ಗೆ ಸಿದ್ಧಲಿಂಗರು ನನಗೆ ದರ್ಶನ ಕೊಟ್ಟರು, ಸಧ್ಯದಲ್ಲಿಯೇ ಆ ಮಹಾತ್ಮರನ್ನು ಇಲ್ಲಿಗೆ ಬರಮಾಡಿಕೊಳ್ಳಬೇಕಾಗಿದೆ. ಅದಕ್ಕಾಗಿ ನೋಡಿಕೊಂಡು ಬರಬೇಕೆ"ಂದು ಗುರುಮೂರ್ತೆಪ್ಪನಿಗೆ ಹೇಳಿ ಕಳುಹಿಸಿದರು. ಅಷ್ಟರೊಳಗಾಗಿ ಸಿದ್ಧಲಿಂಗ ಮಹಾರಾಜರು ಚಿಕ್ಕಳ್ಳಿ ಗ್ರಾಮಕ್ಕೆ ಅಶ್ವಾರೂಢರಾಗಿ ತೆರಳಿರುವ ಸಂಗತಿ ಮರಳಿ ಬಂದು ಗುರುಮೂರ್ತಿಯು ತಿಳಿಸಿದಾಗ ಶರಣರು ಅಸಂತೋಷಿತರಾದರು. ಅಂದಿನಿಂದ ಘನ ಸಂಕಲ್ಪವು ತೀವ್ರವಾಗಿ ಪೂರ್ಣಗೊಳ್ಳಬೇಕೆಂದು ತನ್ನ ಆರಾಧ್ಯ ದೇವತೆ ಆದಂತಹ ನಂದೀಕೇಶ್ವರನ ಧ್ಯಾನದಲ್ಲಿ ಕಾಲಕಳೆಯುತ್ತಿದ್ದರು. ಮತ್ತು ಆಗಾಗ ಶರಣರು ಕಾಳಿಕಾ ಭವಾನಿ ಗುಡ್ಡಕ್ಕೆ ಹೋಗಿ ಆ ಮಹಾತಾಯಿಯ ದರ್ಶನ, ಸ್ಪರ್ಶನ, ಸಂಭಾಷಣೆಯನ್ನು ಮಾಡಿ ಬರುತ್ತಿದ್ದರು. ಮುಂದೆ ಕೆಲವು ದಿವಸಗಳು ಗತಿಸಿದವು. ಒಂದಾನೊಂದು ದಿವಸ ನಂದಿಕೇಶ್ವರನನ್ನು ಸ್ಥಾಪಿಸಲು ನಿಶ್ಚಯ ಮಾಡಿ ಲಚ್ಯಾಣದ ಸಿದ್ಧಲಿಂಗ ಮಹಾಋಷಿಗಳಿಗೆ ಆಮಂತ್ರಣ ಕೊಟ್ಟು ಬರಲು ತನ್ನ ಮುದ್ದು ಶಿಷ್ಯರಾದ ಗುರುಮೂರ್ತೆಪ್ಪನನ್ನು

ಕಳುಹಿಸಿಕೊಟ್ಟರು. ಶರಣರ ಆಮಂತ್ರಣಕ್ಕೆ ಸಿದ್ಧಲಿಂಗರು ಒಪ್ಪಿಕೊಂಡರು. ಮುಂದೆ ಒಂದು ವಾರದಲ್ಲಿ ಶುಭತಿಥಿ, ಶುಭನಕ್ಷತ್ರ, ಶುಭಯೋಗ, ಶುಭಕರಣ, ಅಮೃತ ಸಿದ್ಧಿಯೋಗದಲ್ಲಿ ವೀರಶೈವ ಅಷ್ಟಾವರಣ ಷಟಸ್ಥಲ ಸಂಪನ್ನವಿಧಿಪೂರ್ವಕವಾಗಿ ಸೋಮವಾರ ಬ್ರಹ್ಮೀಮುಹೂರ್ತದಲ್ಲಿ ಶ್ರೀ ಸಿದ್ಧಲಿಂಗ ಋಷಿಗಳ ಅಮೃತ ಹಸ್ತದಿಂದ ನಂದಿಕೇಶ್ವರನ ಸ್ಥಾಪನೆ ಗೈದರು. ಜಯನಮಃ ಪಾರ್ವತೀಪತೆ ಶಿವಹರಹರ ಮಹಾದೇವ.

ತದನಂತರ ಶರಣರಿಗೆ ಭಕ್ತಾದಿಗಳು ಬಂದು ಬೇಡಿಕೆಗಳನ್ನು ಕೇಳುತ್ತಿರುವಾಗ ಎದುರಿಗಿರುವ ನಂದಿಕೇಶ್ವರನನ್ನು ಭಕ್ತಿಭಾವದಿಂದ ನಡೆದುಕೊಂಡಿದ್ದಾದರೆ ನೀವು ಬೇಡಿದ ಇಷ್ಟಾರ್ಥಗಳನ್ನು ನಂದಿಕೇಶ್ವರನು ಪೂರೈಸುವನೆಂದು ಹೇಳುತ್ತ ಆಶೀರ್ವದಿಸುತ್ತಿದ್ದರು.

ಆ ನಂತರ ಗ್ರಾಮದ ಪಕ್ಕದಲ್ಲಿರುವ ಚಿಕ್ಕಗುಡ್ಡದಲ್ಲಿ ಗುಂಡ ತೋಡುವ ಸಂಕಲ್ಪವನ್ನು ಮಾಡಿಕೊಂಡು ನಂದೀಕೇಶ್ವರನನ್ನು ಪೂಜಿಸಿ, ಸ್ಮರಿಸಿ, ಧ್ಯಾನಿಸಿ ತೀರ್ಥವನ್ನು ತೆಗೆದುಕೊಂಡು ಹೋಗಿ ಗುಂಡ ತೋಡುವ ಸ್ಥಳದಲ್ಲಿ ಪ್ರೋಕ್ಷಾಲನೆಯನ್ನು ಮಾಡಿ, ಗುಂಡತೆಗೆಯುವ ಕಾರ್ಯ ಆರಂಭಿಸಿದರು. ಕೆಲವು ದಿವಸಗಳು ಗತಿಸಿದವು. ನಂತರ ಗುಂಡವು ಆಳಕ್ಕೆ ಹೋಯಿತು. ನೀರಿನ ಸೆಲೆಯು ತಿಳಿಯದಾಯಿತು. ಆಗ ಶರಣರು ಚಿಂತಾಕ್ರಾಂತರಾಗಿ ಬನ್ನಿಗಿಡದ ಬುಡದಲ್ಲಿ ವಿಶ್ರಮಿಸಿದಾಗ 'ನಾಳಿನ ದಿವಸದಲ್ಲಿ ಗುಂಡದಲ್ಲಿ ಗಂಗಾಮಾತೆ ಉದ್ಭವಿಸುವಳು' ಎಂದು ವಾಣಿಯಾಯಿತು. ಝುಗ್ಗನೆ ಎಚ್ಚತ್ತು ತನ್ನ ಆರಾಧ್ಯ ದೇವತೆಯಾದ ಶ್ರೀ ಕಾಳಿಕಾಂಬೆಯನ್ನು ನೆನೆಸಿದರು. ಮಾರನೆಯ ದಿವಸ ಶರಣರು ತಮ್ಮ ಪೂಜಾದಿಗಳನ್ನು ಮುಗಿಸಿಕೊಂಡು ಗುಡ್ಡಕ್ಕೆ ತೆರಳಿ ಆಳವಾದ ಗುಂಡದಲ್ಲಿ ಇಳಿದು ಮಾತೆಯನ್ನು ಸ್ಮರಿಸಿ ತಮ್ಮ ಹಸ್ತದಿಂದ ಹಾರಿ ಹೊಡೆದಾಗ ಗಂಗಾಮಾತೆಯು ಹರಿದಳು. ಗುಂಡವು ತುಂಬಿತು. ನೆರೆದವರೆಲ್ಲರೂ ಸಂತೋಷದಿಂದ ಆಶ್ಚರ್ಯಚಕಿತರಾಗಿ ಜಯಜಯಕಾರ ಮಾಡಿದರು. ಮಂಗಲಾತ್ಮಕ ಶರಣರ ಅಂಗೈಯೊಳಗಿನ ಲಿಂಗದ ತೀರ್ಥವಾಗಿ ಇಂದಿಗೂ ಆ ಗುಂಡದ ನೀರು ಭೂತ ಪ್ರೇತ ಪಿಶಾಚಾದಿಗಳು ಬಡಿದವರೆಲ್ಲರೂ ಹಾಗೂ ಶರೀರದಲ್ಲಿಯ ವ್ಯಾಧಿಗಳಾದವರೆಲ್ಲರೂ ಸೇವಿಸಿದರೆ ಎಲ್ಲ ಭೂತಪ್ರೇತಗಳು, ವ್ಯಾಧಿಗಳು ತೊಲಗುವವೆಂದು ನಿಃಸಂದೇಹವಾಗಿ ಹೇಳಲಾಗುತ್ತದೆ.

ಖಟ್ಟೆ ಸಿದ್ಧರಾಮ ಶಿವಯೋಗಿಗಳು ಶರಣರ ಜೀವನಚರಿತ್ರೆಯನ್ನೆಲ್ಲ ಕೇಳಿ ಕಂಡುಉಂಡು ಶರಣರನ್ನು ಸ್ಮರಿಸುತ್ತಿದ್ದರು. ಮುಂದೆ ಕೆಲವೇ ದಿವಸಗಳಲ್ಲಿ ಶರಣರು ತಮ್ಮ ಆರಾಧ್ಯ ದೇವತೆಯನ್ನು ಸ್ಮರಿಸುತ್ತ ಶಿವಸಾಯುಜ್ಯವನ್ನು ಹೊಂದಿದರು. ಆನಂತರ ಸಿದ್ಧರಾಮ ಶಿವಯೋಗಿಗಳು ಪ್ರಾಯಕ್ಕೆ ಬಂದಾಗ ಕಮರೀಮಠದ ಶ್ರೀ ಸಿದ್ಧಲಿಂಗ ಮಹಾರಾಜರ ಉಪದೇಶವನ್ನು ಪಡೆದುಕೊಂಡು, ಶರಣರ ಸ್ಥಳದಲ್ಲಿ ನೆಲೆಸಿ ತಮ್ಮ

ಜೀವನವ ಗುರಿಯನ್ನು ಸಾಧಿಸುತ್ತ, ಶರಣರ ಚರಿತ್ರೆಯನ್ನು, ಪವಾಡಗಳನ್ನು ಬಂದಂಥ ಭಕ್ತಾದಿಗಳಿಗೆ ಹೇಳುತ್ತ, ಭಕ್ತರಿಗೆ ಭಕ್ತಿಯನ್ನು ಹುಟ್ಟಿಸಿ, ಭಕ್ತಿಪಥದ ಮಾರ್ಗವನ್ನು ಶರಣರು ತೋರಿಸಿದಂತೆ ತಾವೂ ಕೂಡಾ ತೋರಿಸುತ್ತ, ಶರಣರ ಮಹತ್ಕಾರ್ಯವನ್ನು ಕೈಕೊಂಡರು. ಶರಣರ ಸ್ಥಳದಲ್ಲಿ ಗುರುಮಠ, ದಾಸೋಹಮನೆ, ಮಹಾದ್ವಾರ, ಶರಣ ಮಂಟಪ ಮುಂತಾದವುಗಳನ್ನು ನಿರ್ಮಿಸಿದರು.

ಮುಂದೆ ಪ್ರತಿವರ್ಷ ಶ್ರಾವಣ ಮಾಸದಲ್ಲಿ ತಮ್ಮ ಅಮೃತವಾಣಿಯಿಂದ ಪುರಾಣ ವನ್ನು ಸಾಗಿಸುತ್ತಿದ್ದರು. ಹಾಗೂ ಶ್ರಾವಣದ ಕೊನೆಗೆ ಅಡ್ಡಪಲ್ಲಕ್ಕಿ ಮಹೋತ್ಸವ ಮತ್ತು ಚೈತ್ರದಲ್ಲಿ ಶರಣರ ರಥೋತ್ಸವವನ್ನು ನಡೆಸುವ ಸಂಪ್ರದಾಯವನ್ನು ಗ್ರಾಮದ ಸದ್ಭಕ್ತಾದಿಗಳಿಗೆ ಹಾಕಿಕೊಟ್ಟರು. ಈ ಕಾರ್ಯಗಳು ಇಂದಿಗೂ ಸಾಗುತ್ತ ಬಂದಿವೆ.

ತದನಂತರ ಸಿದ್ಧರಾಮ ಶಿವಯೋಗಿಗಳು ಶರಣರ ಪುರಾಣವನ್ನು ರಚಿಸಬೇಕೆಂಬ ದಿವ್ಯ ಸಂಕಲ್ಪವನ್ನು ಮಾಡಿಕೊಂಡು ಕನ್ನಡದ ಕವಿರತ್ನರಾದ ವೇದಮೂರ್ತಿಗಳಾದಂತ ಮಡಿವಾಳ ಸ್ವಾಮಿಗಳು, ರೋಡಗಿ ಇವರನ್ನು ಕರೆಯಿಸಿ ಪುರಾಣ ಬರೆಯಲು ಸೂಚಿಸಿ ದರು. ವಿಷಯ ಸಂಗ್ರಹ ಮಾಡಿಕೊಟ್ಟರು. ಶುಭಮುಹೂರ್ತದಲ್ಲಿ ಪುರಾಣ ಬರೆಯಲು ಪ್ರಾರಂಭಿಸಿದರು. ಸ್ವಾಮಿಗಳಿಗಾಗಿದ್ದ ಮಹಾರೋಗವು ತಟಸ್ಥವಾಯಿತು. 'ನೀನೊಲಿದರೆ ಕೊರಡು ಕೊನರುವದಯ್ಯಾ' ಎಂಬ ನುಡಿಯಂತೆ ಮಡಿವಾಳರ ಬೆರಳು ಗಳು ಚಿಗುರೊಡೆದು ಮೊದಲಿನಂತಾದವು. ಪುರಾಣ ಬರೆಯುವದು ಮುಂದೊರೆದಂತೆ ಸ್ವಾಮಿಗಳಿಗೆ ಶರಣರ ಮಹಿಮೆಯು ತೋರುತ್ತ ನಡೆಯಿತು. ಕೆಲವೇ ದಿವಸಗಳಲ್ಲಿ ಅವರ ಧರ್ಮಪತ್ನಿಯು ಗರ್ಭವತಿಯಾಗಿ ಪುತ್ರರತ್ನ ಪಡೆದಳು. ನುಡಿ ಪ್ರಾಸ್, ಆಡಿಪ್ರಾಸ್, ಕಡೀಪ್ರಾಸ್ ಛಂದಸ್ಸುಗಳಿಂದ ಭಾಮಿನಿ ಷಟ್ಪದಿಯಲ್ಲಿ ಒಳ್ಳೇ ಸುಂದರ ವಾಗಿ ಬರೆದು ಪುರಾಣವು ಪೂರ್ತಿಗೊಳಿಸಿದರು. ಇದನ್ನು ನೋಡಿ ಸಿದ್ಧರಾಮ ಶಿವಯೋಗಿಗಳ ಜೀವನದಲ್ಲಿ ತಮ್ಮ ಅಮೃತವಾಣಿಯಿಂದ ಶರಣರ ಪುರಾಣವನ್ನು ಭಕ್ತರಿಗೆ ಹೇಳಿ, ಮಹದಾನಂದಪಟ್ಟರು. ಆಗ ಅವರು ಮಹಾತ್ಮರಾದ ಶರಣರ ಚರಿತ್ರೆಯನ್ನು ಸಕಲರ ಮನದಲ್ಲಿ, ಮನೆಯಲ್ಲಿ ನೆಲೆಸಬೇಕೆಂಬ ದಿವ್ಯ ಸಂಕಲ್ಪವನ್ನು ಮಾಡಿಕೊಂಡಿದ್ದರು. ಅಂದಿನ ಸಂಕಲ್ಪವು ೧೯೮೮ ನೇ ಇಸ್ವಿ ಇಂದು ಶರಣ ಸಂಘದವರು ಪುರಾಣವನ್ನು ಪ್ರಕಟಿಸಿ, ಸಿದ್ಧರಾಮ ಶಿವಯೋಗಿಗಳವರ ದಿವ್ಯ ಸಂಕಲ್ಪವನ್ನು ಪೂರ್ಣ ಮಾಡಿದ್ದಾರೆ.

ಶ್ರೀ ಶರಣ ಶಿವಲಿಂಗೇಶ್ವರ ದಿವ್ಯ ಚರಿತ್ರೆಯನ್ನು ಶುದ್ಧವಾದ ಭಾವನೆ, ದೃಢವಾದ ಭಕ್ತಿಯಿಂದ, ವಿಧಿಪೂರ್ವಕವಾಗಿ ಪೂಜಿಸಿ, ಶರಣರನ್ನು ಸ್ಮರಿಸಿ, ಪುರಾಣವನ್ನು ಪಠಿಸಿ ದ್ದಾದರೆ ಭೂತಪ್ರೇತ, ಪಿಶಾಚಾದಿಗಳೆಲ್ಲವೂ ಓಡಿಹೋಗುವವು ಹಾಗು ಮನದ ಬಯಕೆಗಳು ಈಡೇರುವವು. ಇಹದಲ್ಲಿ ಅಷ್ಟ ಐಶ್ವರ್ಯ ಸುಖಸಂಪತ್ತಾಭಿವೃದ್ಧಿಯಿಂದ ಮನೆಯು ಬೆಳೆಯುವದು. ಪರದಲ್ಲಿ ಸದ್ಗತಿಯನ್ನು ಹೊಂದುವರು.

ಈ ಚರಿತಾಮೃತವನ್ನು ಮಾದನ ಹಿಪ್ಪರಗಾ ಗ್ರಾಮದ ಸದ್ಭಕ್ತಾದಿಗಳೆಲ್ಲರೂ ಹಾಗು ಪಕ್ಕದಲ್ಲಿರುವ ಶರಣ ಸಂಪ್ರದಾಯದವರೆಲ್ಲರೂ ಕೂಡಿಕೊಂಡು ಮಹಾಮಹಿಮರಾದಂತ ಶರಣಶಿವಲಿಂಗೇಶ್ವರ ಸಾಧು ಮಹಾರಾಜರ ಪುರಾಣ ಗ್ರಂಥವನ್ನು ಸಕಲ ಜನರ ಉದ್ಧಾರಾರ್ಥವನ್ನು ಬಯಸಿ ಅತೀ ಬೇಗದಿಂದ ಪ್ರಕಟಿಸಿದ ಮಹನೀಯರೆಲ್ಲರಿಗೂ ಮತ್ತು ಈ ಪುರಾಣದ ಸಂಪಾದನೆಯ ಕಾರ್ಯವನ್ನು ಕೈಕೊಂಡಂತ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಮ. ಗು. ಬಿರಾದಾರ ಹಾಗು ಕನ್ನಡ ವಿಭಾಗದಲ್ಲಿ ಪ್ರವಾಚಕರಾದ ಡಾ. ವ್ಹಿ. ಜಿ. ಪೂಜಾರ ಅವರಿಗೂ, ಹಾಗು ಸರಕಾರಿ ಮಹಾವಿದ್ಯಾಲಯದಲ್ಲಿ ರಸಾಯನ ಶಾಸ್ತ್ರ ಪ್ರವಾಚಕರಾದ ಡಾ. ಬಿ. ಎಸ್. ಹಾದಿಮನಿಯವರಿಗೂ, ಪುರಾಣಕ್ಕೆ ಭಕ್ತಿಭಾವದಿಂದ ಧನವನ್ನು ಅರ್ಪಿಸಿದಂತ ಎಲ್ಲ ಸದ್ಭಕ್ತಾದಿಗಳಿಗೂ, ಇನ್ನುಳಿದ ಯಾವತ್ತು ಮಾನವ ಜನಾಂಗಕ್ಕ ಈ ಗ್ರಂಥವು ಕಲ್ಯಾಣವನ್ನುಂಟುಮಾಡಲೆಂದು ಹಾರೈಸಿ, ಮಂಗಲಾಶೀರ್ವಾದ ಮಾಡುತ್ತೇವೆ.

ಇತೀ ಶುಭಂ ಭವತು

ಓಂ ಶಾಂತಿಃ ಶಾಂತಿಃ ಪರಮ ಶಾಂತಿಃ

ಶ್ರೀ ರಸ್ತು

೧೦-೭-೧೯೮೮

# ಪ್ರಕಾಶಕರ ನುಡಿ

ನಮ್ಮ ದೇಶ ಆರ್ಥಿಕವಾಗಿ ಅಷ್ಟಾಗಿ ಪ್ರಗತಿಯನ್ನು ಸಾಧಿಸಿರದಿದ್ದರೂ ಧಾರ್ಮಿಕ ಮತ್ತು ಆಧ್ಯಾತ್ಮಿಕ ರಂಗದಲ್ಲಿ ಜಗತ್ತಿನ ಇನ್ನುಳಿದ ದೇಶಗಳಿಗಿಂತ ಉನ್ನತ ಸ್ಥಾನದಲ್ಲಿದೆ. ಇಲ್ಲಿ ಅನೇಕ ಮತ-ಧರ್ಮದ ಜನ ಒಟ್ಟಾಗಿ ಬಾಳುತ್ತಿರುವುದು ಒಂದು ವೈಶಿಷ್ಟ್ಯ. ಅನೇಕತೆಯಲ್ಲಿ ಏಕತೆಯನ್ನು ಸಾಧಿಸಿರುವುದೇ ನಮ್ಮ ದೇಶದ ಸಾಧನೆ. ಕೆಲವರು ತಮ್ಮ ಸ್ವಾರ್ಥಕ್ಕಾಗಿ ಧರ್ಮವನ್ನು ಬಳಸಿಕೊಂಡುದೂ ಉಂಟು. ಆದರೂ ನಮ್ಮ ದೇಶ ಧಾರ್ಮಿಕ ರಂಗದಲ್ಲಿ, ಆಧ್ಯಾತ್ಮಿಕ ಪ್ರಪಂಚದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ಧರ್ಮದ ನೆಲೆವೀಡಾದ ಈ ದೇಶದ ಉದ್ದಗಲಕ್ಕೂ ಅನೇಕ ಮಠ ಮಾನ್ಯಗಳಿವೆ. ಇವು ಜನಸಾಮಾನ್ಯರ ಧಾರ್ಮಿಕ, ಬೌದ್ಧಿಕ ಹಸಿವನ್ನು ಹಿಂಗಿಸಲೆತ್ನಿಸುತ್ತಿರುವುದನ್ನು ಕಾಣುವೆವು. ಕರ್ನಾಟಕದಲ್ಲಂತೂ ಅನೇಕ ಗುರು ಹಾಗೂ ವಿರಕ್ತಮಠಗಳು ಅನ್ನ ಹಾಗೂ ಜ್ಞಾನ ದಾಸೋಹ ಕಾರ್ಯದಲ್ಲಿ ನಿರತವಾಗಿರುವುದನ್ನು ಇಂದೂ ಕಾಣಬಹುದಾಗಿದೆ. ಇಂಥ ಮಠಗಳು ಜನಸಾಮಾನ್ಯರ ಬದುಕನ್ನು ನಿರ್ಮಲಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಇಂಥ ಮಠ ಮಾನ್ಯಗಳಲ್ಲಿದ್ದ ಸ್ವಾಮಿ, ಸಾಧು-ಸಂತರು 'ಕಾಯಕ ತತ್ವಕ್ಕೆ' ಮಹತ್ವವಿತ್ತು, ನಿಷ್ಕಾಮ ಕರ್ಮದಿಂದ ದಾಸೋಹ ಗೈಯುತ ಜನಹಿತಕ್ಕಾಗಿ ಬಾಳಿದುದನ್ನು ಇತಿಹಾಸ ತಿಳಿಯಪಡಿಸುತ್ತದೆ. ಈ ಪರಂಪರೆಯಲ್ಲಿ ಮಾದನ ಹಿಪ್ಪರಗಿಯ ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರರೂ ಒಬ್ಬರು. ಇವರು ಬಡವ-ಬಲ್ಲಿದ, ಉಚ್ಚ, ನೀಚ – ಇವಾವುದರ ಭೇದವಿಲ್ಲದೆ ಸರ್ವರನ್ನು ಸಮಾನ ದೃಷ್ಟಿಯಿಂದ ಕಂಡವರು. ರಕ್ತ ಮಾಂಸದ ದೇಹತೊಟ್ಟು ಬದುಕಿನ ಸಂತೆಯಲ್ಲಿ ನಿಂತು ತನು-ಮನ-ಧನಗಳನ್ನು ಶಿವಾರ್ಪಣ ಗೈದವರು. ಲೋಕವೇ ನನ್ನ ಮನೆ, ಸಕಲ ಮಾನವರೇ ನನ್ನ ಕುಟುಂಬ ವೆಂದು ಬಗೆದವರು. ಜಾತಿಯ ಕೋತಿಯಾಟಕ್ಕೆಳಸಿದವರಲ್ಲ. ಮನುಕುಲದ ಕಲ್ಯಾಣ ಬಯಸಿದವರು.

ಇವರು ಸುಮಾರು ಒಂದುನೂರು ವರ್ಷಗಳ ಹಿಂದೆ ಬಾಳಿದವರು. ಕೇವಲ ತಮ್ಮ ಮೂವತ್ತು ವರ್ಷದ ಆಯುಷ್ಯದಲ್ಲಿ ಅನೇಕ ಮಹಿಮೆಗಳನ್ನು ತೋರಿದರು. ಇವರ ಬದುಕು ಚೊಕ್ಕ ಚಿನ್ನ. ನಿಸ್ವಾರ್ಥದಿಂದ ಜನಸೇವೆಗೈದು, ಅವರನ್ನು ಧರ್ಮ ಮಾರ್ಗದಲ್ಲಿ ಮುನ್ನಡೆಸಲೆತ್ನಿಸಿದರು. ಇಂಥ ಮಹಾನುಭಾವರ ಪುಣ್ಯ ಚರಿತ್ರೆ ಮುಂಬರುವ ಜನಾಂಗಕ್ಕೆ ಮಾರ್ಗದರ್ಶಿಯಾಗಲಿ ಎಂಬ ಸದುದ್ದೇಶದಿಂದ ಶ್ರೀ ಸಿದ್ಧ ರಾಮ ಶಿವಯೋಗಿಗಳು ಪ್ರಯತ್ನಪಟ್ಟು ಕವಿರತ್ನ, ಶಿವಕವಿ ಮಡಿವಾಳ ಸ್ವಾಮಿಗಳಿಂದ ಅವರ ಪುರಾಣವನ್ನು ಬರೆಯಿಸಿದರು. ಇದು ಇಂದಿಗೂ ಸಂಸ್ಥೆಯಲ್ಲಿ ಸುರಕ್ಷಿತವಾಗಿದೆ.

ಈಗ ಸಕಲ ಭಕ್ತರ ಸಹಾಯ ಸಹಕಾರದಿಂದ ಪ್ರಕಟಗೊಳ್ಳುವುದು ಸಂತೋಷದ ಸಂಗತಿಯಾಗಿದೆ.

ಪುರಾಣ ಸಂಪಾದನೆಯ ಗುರುತರ ಕಾರ್ಯವನ್ನು ಅಲ್ಪಾವಧಿಯಲ್ಲಿ ಪೂರೈಸಿ ಕೊಟ್ಟವರು ಕಲಬುರ್ಗಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರು ಮತ್ತು ಪ್ರಾಧ್ಯಾಪಕರು ಆದ ಡಾ. ಮ. ಗು. ಬಿರಾದಾರ ಅವರು ಮತ್ತು ಪ್ರವಾಚಕ ರಾದ ಡಾ. ವ್ಹಿ. ಜಿ. ಪೂಜಾರ ಅವರು. ಇವರೀರ್ವರಿಗೂ ಸಂಸ್ಥೆಯು ಚಿರಋಣಿ ಯಾಗಿರುತ್ತದೆ.

ಪುರಾಣ ಪ್ರಕಟಣೆಯ ಕಾರ್ಯದಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಆಶೀರ್ವದಿಸಿದ ತಪೋನಿಧಿ ಶ್ರೀ ಸದ್ಗುರು ಶಿವಶರಣಾನಂದ ಸಾಧು ಮಹಾರಾಜರು ಸುಕ್ಷೇತ್ರ ಬ್ರಹ್ಮಗಡ್ಡಿ ಮಠ, ಮುಧೋಳ ಇವರ ಅಡಿಗಳಲ್ಲಿ ಭಕ್ತಿಯಿಂದ ದೀರ್ಘದಂಡ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ಪುರಾಣವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಪ್ರಭು ಪ್ರಿಂಟಿಂಗ ಪ್ರೆಸ್, ಗದಗ ಇವರಿಗೂ ಕೃತಜ್ಞತೆಗಳು. ಪುರಾಣ ಪ್ರಕಟಣೆಯ ಕಾರ್ಯದಲ್ಲಿ ಅನೇಕರು ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ತನು, ಮನ, ಧನದಿಂದ ಸಹಾಯ ಸಲ್ಲಿಸಿದ್ದಾರೆ. ಇವರೆಲ್ಲರಿಗೂ ಕೃತಜ್ಞತೆಗಳನ್ನು ಸಲ್ಲಿಸುವುದರೊಂದಿಗೆ ಸದ್ಗುರುಗಳು ಆಯುರಾರೋಗ್ಯ ಭಾಗ್ಯವನಿತ್ತು ಕಾಪಾಡಲೆಂದು ಆಶಿಸುತ್ತೇವೆ.

— ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರ ಸಂಸ್ಥೆ,
ಮಾದನ ಹಿಪ್ಪರಗಾ

೧೦–೮–೧೯೮೮

# ಪ್ರಸ್ತಾವನೆ

ವೇದ, ಆಗಮ, ಉಪನಿಷತ್ತು, ಸ್ಮೃತಿ ಮತ್ತು ಪುರಾಣಗಳು ನಮ್ಮ ದೇಶದ ಸಂಪತ್ತು ಎನ್ನುವಂತೆ ಮಾನ್ಯತೆ ಪಡೆದಿವೆ. ಇವುಗಳ ಅಧ್ಯಯನ ಭಾರತೀಯ ಎಲ್ಲ ಭಾಷೆಗಳಲ್ಲೂ ಒಂದಿಲ್ಲೊಂದು ರೀತಿಯಲ್ಲಿ ನಡೆಯುತ್ತ ಬಂದುದನ್ನು ಇತಿಹಾಸ ತಿಳಿಸುತ್ತದೆ. ಪುರಾಣಗಳಂತೂ ನಮ್ಮ ಸಂಸ್ಕೃತಿಯ ಪಳೆಯುಳಿಕೆಗಳೋಪಾದಿಯಲ್ಲಿ ಉಳಿದುಕೊಂಡು ಬಂದಿವೆ. ಅಷ್ಟಾದಶ ಪುರಾಣಗಳು ಧರ್ಮ, ನೀತಿ, ತತ್ವ, ತ್ಯಾಗ, ಸತ್ಯ, ದಯೆ, ಪ್ರೇಮ, ನಿಸ್ವಾರ್ಥ, ಕರುಣೆ, ಸಹನೆ, ಆದರ್ಶ ಮುಂತಾದ ಮಾನವೀಯ ಮೌಲ್ಯಗಳನ್ನು, ಜೀವನೋಪಯೋಗಿ ಸಂಗತಿಗಳನ್ನು ಬಿತ್ತರಿಸುತ್ತ ಅನೇಕ ಹೊಸ ಹೊಸ ಪುರಾಣಗಳ ಹುಟ್ಟಿಗೆ ಪ್ರೇರಣೆ ನೀಡುತ್ತ ಚೇತೋಹಾರಿಯಾಗಿ ನಿಂತಿವೆ.

ಪುರಾಣಗಳೆಂದರೇನೇ ಕೆಲವರಿಗೆ ಅಲರ್ಜಿ. ಇನ್ನು ಕೆಲವರಿಗೆ ಅವು ಹಳೆಯವು, ಉಪಯೋಗಕ್ಕೆ ಬಾರದ ಕಾಲ್ಪನಿಕ ವಿಷಯಗಳನ್ನೊಳಗೊಂಡಂಥವು ಮತ್ತು ಭ್ರಮಾಲೋಕದತ್ತ ಒಯ್ಯುವಂಥವು, ಧರ್ಮ, ಆಧ್ಯಾತ್ಮ ನೀತಿ ಬೋಧೆ ಮಾಡಿ ಜನತೆಯಲ್ಲಿನ ಕರ್ತೃತ್ವ ಶಕ್ತಿಯನ್ನೇ ಹ್ರಾಸಗೊಳಿಸುವಂತಹವು ಎಂಬ ಅಭಿಪ್ರಾಯ ತಾಳಿರುವರು. ಇದು ಅವರ ವೈಯಕ್ತಿಕ ಅಭಿಪ್ರಾಯವೇ ಹೊರತು ಸಾರ್ವತ್ರಿಕ ಸತ್ಯವಾದುದೇನೂ ಅಲ್ಲ. ಪುರಾಣಗಳು ಶ್ರೀಸಾಮಾನ್ಯರಿಗೆ ಮಾನವೀಯ ಮೌಲ್ಯಗಳನ್ನು ಪರಿಚಯಮಾಡಿಕೊಟ್ಟು ಅವರ ಬಾಳನ್ನು ಶುಚಿಯಾಗಿಸುವವು. ಅವರನ್ನು ಆದರ್ಶ ಜೀವಿಗಳನ್ನಾಗಿ, ನೀತಿವಿದರನ್ನಾಗಿಸುವುದೇ ಅವುಗಳ ಪರಮ ಧ್ಯೇಯ. ಪುರಾಣ ಪಠಣ ಹಾಗೂ ಶ್ರವಣ ಪದ್ಧತಿ ಇಂದಿಗೂ ನಮ್ಮ ದೇಶದ ಉದ್ದಗಲಕ್ಕೂ ಗ್ರಾಮೀಣ ಜನ ಸಮುದಾಯದಲ್ಲಿ ಕಟ್ಟುನಿಟ್ಟಾಗಿ ನಡೆದುಕೊಂಡು ಬಂದುದನ್ನು ಕಾಣುವೆವು. ಇದು ಒಂದು ರೀತಿಯಲ್ಲಿ ಶಿಕ್ಷಣವೇ ಇದ್ದಂತೆ. ನಮ್ಮ ದೇಶದಲ್ಲಿ ಓದು ಬರಹ ಬಾರದವರೇ ಹೆಚ್ಚಾಗಿರುವುದರಿಂದ ಇಂಥವರಿಗೆ ಪುರಾಣಗಳೇ ಧಾರ್ಮಿಕ ಹಾಗೂ ನೈತಿಕ ಶಿಕ್ಷಣವನ್ನು ನೀಡುವವು. ಜನ ಪುರಾಣ ಶ್ರವಣದಿಂದ ಮನಶ್ಶಾಂತಿ ಪಡೆಯುವುದಲ್ಲದೆ ಧರ್ಮ, ನೀತಿ ಮುಂತಾದ ಜೀವನಾದರ್ಶಗಳನ್ನು ಅರಿತುಕೊಳ್ಳುವರು. ಅವುಗಳಲ್ಲಿ ಅವರದು ಅಚಲ ವಿಶ್ವಾಸ. ಶ್ರೀಸಾಮಾನ್ಯರ ನಂಬಿಕೆಯ ಮೇಲೆಯೇ ಪುರಾಣಗಳು ಗಟ್ಟಿಯಾಗಿ ಬೇರುಬಿಟ್ಟು ಬೆಳೆದಿವೆ. ಅವು ತೋರಿಕೆಗೆ ಕವಿಯೊಬ್ಬನ ಸೃಷ್ಟಿ ಎನ್ನಿಸಿದರೂ ಸಮಷ್ಟಿ ಪ್ರಜ್ಞೆಯ ಸೃಷ್ಟಿಯೇ ಆಗಿವೆ.

ಸಮಷ್ಟಿ ಪ್ರಜ್ಞೆಯ ಮುದ್ರೆಯನ್ನೊತ್ತಿಸಿಕೊಂಡೇ ಚಲಾವಣೆಯಲ್ಲಿ ಬಂದಂಥವು. ಒಬ್ಬನೇ ಕವಿ ಪುರಾಣ ಬರೆದರೂ ಆತ ಒಂದು ಗುಂಪಿನ, ಇಲ್ಲವೆ ಒಂದು ಧರ್ಮದ

ಸಮಸ್ತ ಜನತೆಯ ರೀತಿ, ನೀತಿ, ನಡೆವಳಿ, ಆಶೋತ್ತರ ಮುಂತಾದ ಆದರ್ಶಗಳನ್ನೆಲ್ಲ ಅವರೆಲ್ಲರ ಪ್ರತಿನಿಧಿಯಾಗಿ ಸಂಗ್ರಹಿಸಿ ಸರ್ವರಿಗೂ ಒಪ್ಪಿತವಾಗುವ ರೀತಿಯಲ್ಲಿ ರಚಿಸ ಬೇಕಾಗುವುದು. ಆದುದರಿಂದ ಪುರಾಣಗಳು ಯಾರೊಬ್ಬರಿಗೆ ಸೇರಿದ ಆಸ್ತಿಗಳಲ್ಲ. ಅವು ಸಮಗ್ರ ಮನುಕುಲಕ್ಕೇ ಸೇರಿದಂಥವು. ಜನತೆ ಪುರಾಣಗಳನ್ನು ಬಹುವಾಗಿ ನಂಬಿ ನಡೆಯುವುದುಂಟು. ಈ ನಂಬುಗೆಯೇ ಅವರಿಗೆ ಊರುಗೋಲು. ಜನತೆಯಲ್ಲಿನ ದುರ್ಗುಣಗಳನ್ನು ನಿರ್ಮೂಲನಗೊಳಿಸಿ ಅವರನ್ನು ಸುಗುಣಿಗಳನ್ನಾಗಿಸಿ ಸನ್ಮಾರ್ಗದಲ್ಲಿ ಮುನ್ನಡೆಸುವ ಮಾಂತ್ರಿಕ ಶಕ್ತಿ ಪುರಾಣಗಳಲ್ಲಿದೆಯೆಂದರೆ ಅತಿಶಯೋಕ್ತಿಯೇನಲ್ಲ. ಪುರಾಣ ಪುಣ್ಯಕಥೆಗಳನ್ನು ಕೇಳಿ ಪರಿವರ್ತನೆ ಹೊಂದಿ ತಮ್ಮ ಬದುಕನ್ನು ಹಸನಾಗಿಸಿ ಕೊಂಡ ಲಕ್ಷಾವಧಿ ಭಕ್ತರು ನಮ್ಮ ದೇಶದಲ್ಲಿರುವರು. ಕದಡಿದ ಮನಸ್ಸನ್ನು ತಿಳಿಗೊಳಿಸಿ ಅವರಲ್ಲಿ ಶಾಂತಿ ನೆಲೆಯೂರುವಂತೆ ಮಾಡುವ ಗಾರುಡಿಗತನ ಪುರಾಣಗಳಿಗಿದೆ. ಈ ಮಾತು ಕೇವಲ ಹಿಂದೂಧರ್ಮದ ಪುರಾಣಗಳಿಗಷ್ಟೇ ಅನ್ವಯಿಸದು. ಎಲ್ಲ ಧಾರ್ಮಿಕ ಕೃತಿಗಳಿಗೂ ಅನ್ವಯಿಸುವಂಥದು. ಜಗತ್ತಿನಲ್ಲಿ ಪೂಜನೀಯ ಗ್ರಂಥಗಳೆನಿಸಿಕೊಂಡ ಬೈಬಲ್, ಕುರಾನ್ ಮುಂತಾದುವೂ ಸಹಿತ ಪುರಾಣ ಲಕ್ಷಣಗಳನ್ನು ಒಳಗೊಂಡಂಥವೇ ಆಗಿವೆ. ಇವೂ ಒಂದರ್ಥದಲ್ಲಿ ಪುರಾಣಗಳು. ನಮ್ಮ ದೇಶದ ಎಷ್ಟೋ ಹಳ್ಳಿಗಳಲ್ಲಿ ಪುರಾಣ ಪಠಣ ಹಾಗೂ ಶ್ರವಣ ಇಂದೂ ನಿರಂತರವಾಗಿ ನಡೆದುಕೊಂಡು ಬರುತ್ತಿರುವು ದನ್ನು ಕಾಣುವೆವು.

ಸಾಮಾನ್ಯವಾಗಿ ಭಾರತೀಯ ಎಲ್ಲ ಭಾಷಾ ಸಾಹಿತ್ಯಗಳಲ್ಲೂ ಪುರಾಣಗಳು ಹುಟ್ಟಿ ಕೊಂಡಿವೆ. ಇದಕ್ಕೆ ಕನ್ನಡವೂ ಹೊರತಾಗಿಲ್ಲ. ಕನ್ನಡದಲ್ಲಿ ಪ್ರಮುಖವಾಗಿ ಜೈನ, ವೀರಶೈವ ಮತ್ತು ಬ್ರಾಹ್ಮಣ ಮತದ ಕವಿಗಳು ಪುರಾಣಗಳನ್ನು ರಚಿಸಿದ್ದಾರೆ. ಜೈನ ಕವಿಗಳು ತೀರ್ಥಂಕರರನ್ನು, ಬ್ರಾಹ್ಮಣ ಕವಿಗಳು ಶ್ರೀಕೃಷ್ಣನನ್ನು ಹಾಗೂ ವೀರಶೈವ ಕವಿಗಳು ಹನ್ನೆರಡನೆ ಶತಮಾನದಲ್ಲಿ ಬಾಳಿಹೋದ ಐತಿಹಾಸಿಕ ವ್ಯಕ್ತಿ ಗಳಾದ ಶಿವಶರಣರನ್ನು ತಮ್ಮ ಪುರಾಣಗಳಿಗೆ ಮಹಾಪುರುಷರನ್ನಾಗಿಸಿಕೊಂಡಿದ್ದಾರೆ. ವೀರಶೈವ ಪುರಾಣ ಪರಂಪರೆ ಜೈನ ಹಾಗೂ ಬ್ರಾಹ್ಮಣ ಪುರಾಣ ಪರಂಪರೆಗಿಂತ ಭಿನ್ನವೂ ವೈಶಿಷ್ಟ್ಯಪೂರ್ಣವೂ ಆಗಿದೆ. ಜೈನ, ಬ್ರಾಹ್ಮಣ ಕವಿಗಳು ತೀರ್ಥಂಕರ ಹಾಗೂ ದೇವನೇ ಆದ ಶ್ರೀಕೃಷ್ಣನನ್ನು ಕಥಾನಾಯಕರುಗಳನ್ನಾಗಿಸಿಕೊಂಡರೆ ವೀರಶೈವ ಕವಿಗಳು ಸಾಮಾನ್ಯರಂತೆಯೇ ಬಾಳಿಹೋದ ಶಿವಶರಣರನ್ನು ತಮ್ಮ ಪುರಾಣಗಳಿಗೆ ಆಯ್ದುಕೊಂಡುದೊಂದು ವಿಶೇಷ. ಮತ್ತು ಇವುಗಳಲ್ಲಿ ಕಾಲ್ಪನಿಕ ಸಂಗತಿಗಳಿಲ್ಲ. ಅಷ್ಟಾದಶ ವರ್ಣನೆಗಳಿಲ್ಲ, ಶೃಂಗಾರಕ್ಕೂ ಅಷ್ಟೊಂದು ಪ್ರಾಶಸ್ತ್ಯವಿಲ್ಲ. ಶರಣರ ಸಾತ್ವಿಕ ಜೀವನವೇ ಇಲ್ಲಿ ಪ್ರಮುಖಪಾತ್ರ ಪಡೆದಿದೆ. ನೇರವಾಗಿ ಶರಣರ ಚರಿತ್ರೆ – ವೀರಶೈವ ಧರ್ಮ ತತ್ವಗಳ ನಿರೂಪಣೆ ಹಾಗೂ ಅವುಗಳ ಆಚರಣೆಯ ಮಹತಿ ಸಾಮಾನ್ಯ ಜನರಿಗೆ ತಿಳಿಯುವ ಹಾಗೆ ವರ್ಣಿತವಾದುದನ್ನು ಕಾಣುವೆವು.

ಶರಣರ ಚರಿತ್ರೆಯನ್ನು ಪುರಾಣ ರೂಪದಲ್ಲಿ ಮೊದಲು ಬರೆದವರು ಹರಿಹರ ಹಾಗೂ ರಾಘವಾಂಕರು. ಇವರ ಉದ್ದೇಶ ಸಾಹಿತ್ಯವನ್ನು ಸಾರ್ವತ್ರಿಕಗೊಳಿಸಿ ಜನಸಾಮಾನ್ಯರಿಗೆ ಮುಟ್ಟಿಸುವುದೇ ಆಗಿದೆ. ಜನ ಬದುಕಲೆಂದೇ ಸಾಹಿತ್ಯ ಕೃಷಿಗಿಳಿದ ಇವರು ತಮ್ಮ ಕೃತಿಗಳಲ್ಲಿ ಜನಸಮ್ಮುಖವಾದ ವಿಚಾರಗಳನ್ನು ಅಭಿವ್ಯಕ್ತಪಡಿಸಿದುದನ್ನು ಕಾಣುವೆವು. ಶರಣರೇ ಇವರ ಕಾವ್ಯಗಳ ವಸ್ತು. ಶರಣರ ಚರಿತ್ರೆ ವೀರಶೈವ ತತ್ವಗಳ ನಿರೂಪಣೆಯನ್ನು ಪ್ರಮುಖವಾಗಿ ಇವರ ಕೃತಿಗಳಲ್ಲಿ ಕಾಣುವೆವು. ಹರಿಹರ ಸಾವವರನ್ನು, ಕೆಡುವವರನ್ನು ಇಂದ್ರ, ಚಂದ್ರ, ದಧೀಚಿ ಎಂದು ಹೊಗಳಿ ವ್ಯರ್ಥ ಕೆಡಬೇಡಿರಿ. ನಿತ್ಯಮುಕ್ತರಾದ ಶರಣರನ್ನು ಕುರಿತು ಕಾವ್ಯ ರಚಿಸಿರೆಂದು ಕವಿಗಳಿಗೆ ಕಿವಿಮಾತು ಹೇಳಿದ. ಮತ್ತು ಶಿವ ಹಾಗೂ ಶಿವಶರಣರನ್ನೇ ಕುರಿತು ಕಾವ್ಯ ರಚಿಸುವೆನೆಂದೂ, ಪ್ರೀತಿಯಿಂದ ತನ್ನ ನಾಲಗೆಯನ್ನು ಅವರಿಗೆ ಮಾರುಗೊಟ್ಟೆನೆಂದೂ ಹೇಳುವನು. ಈತನ ಹೇಳಿಕೆಯನ್ನು ಮುಂಬಂದ ಬಹುಪಾಲು ವೀರಶೈವ ಕವಿಗಳು ಅನುಸರಿಸಿದುದನ್ನು ಕಾಣುವೆವು. ಈತ ಒಂದು ಮಾರ್ಗವನ್ನು ಹಾಕಿಕೊಟ್ಟ. ಈತನ ತರುವಾಯ ಬಂದ ತೆಲುಗು ಕವಿ ಪಾಲ್ಕುರಿಕೆ ಸೋಮನಾಥನೆಂಬುವವ ದ್ವಿಪದಿ ಛಂದಸ್ಸಿನಲ್ಲಿ 'ಬಸವ ಪುರಾಣಮು' ಎಂಬ ಬೃಹದ್ಗ್ರಂಥ ರಚಿಸಿ ವೀರಶೈವ ಪುರಾಣ ಪರಂಪರೆಗೆ ಬುನಾದಿ ಹಾಕಿದ. ಈತನ ಕೃತಿಯನ್ನೇ ಭಾಮಿನಿ ಷಟ್ಪದಿಯಲ್ಲಿ ಭೀಮಕವಿ 'ಬಸವ ಪುರಾಣ' ಎಂಬ ಹೆಸರಿನಲ್ಲಿ ಕನ್ನಡಿಸಿದ. ಈ ಪುರಾಣ ಜನತೆಯನ್ನು ಬಹುವಾಗಿ ಆಕರ್ಷಿಸಿತು. ಸಾಕಷ್ಟು ಜನಪ್ರಿಯತೆಯನ್ನು ಪಡೆಯಿತು. ಇದರಲ್ಲಿ ಶರಣರ ಚರಿತೆ ಮತ್ತು ಆದಿಗಣ ಚರಿತೆ ಹಾಸುಹೊಕ್ಕಾಗಿ ಬೆರೆತು ವರ್ಣಿತವಾದುದನ್ನು ವೀರಶೈವ ತತ್ವ ಕಥೋಪಕಥೆಗಳ ಮೂಲಕ ಬಿತ್ತರಗೊಂಡುದುದನ್ನು ಕಾಣುವೆವು. ವೀರಶೈವ ಪುರಾಣ ಪದ್ಧತಿಗೆ ಇದೇ ಆದಿ ಮತ್ತು ಆದರ್ಶವಾಯಿತೆನ್ನಬಹುದು. ಇದರ ತರುವಾಯ 'ಪದ್ಮರಾಜ ಪುರಾಣ', 'ಶಿವತತ್ವ ಚಿಂತಾಮಣಿ', 'ಸಿಂಗಿರಾಜ ಪುರಾಣ', 'ಪ್ರೌಢರಾಯನ ಕಾವ್ಯ', 'ವೀರಶೈವಾಮೃತ ಮಹಾಪುರಾಣ', 'ಗುರುರಾಜ ಚಾರಿತ್ರ', 'ರಾಘವಾಂಕ ಚರಿತ್ರೆ', 'ಚೆನ್ನಬಸವ ಪುರಾಣ', 'ಶರಣ ಲೀಲಾಮೃತ' ಮುಂತಾದ ಪುರಾಣಗಳು ರಚನೆಯಾದುವು. ಇವುಗಳಲ್ಲಿ ಪುರಾಣ ಲಕ್ಷಣಗಳು ಬೆಳೆಯುತ್ತ ಬಂದುದುದನ್ನರಿಯಬಹುದು. ಮೊದಮೊದಲು ಶರಣರ ಚರಿತೆ, ವೀರಶೈವ ತತ್ವಗಳಿಗೆ ಮೀಸಲಾಗಿದ್ದು, ಬರಬರುತ್ತ ಪುರಾತನ ಹಾಗೂ ನೂತನ ಪುರಾತನರ ಚರಿತೆ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಶಿವನ ಪಂಚವಿಂಶತಿ ಲೀಲೆಗಳು, ಸಾಂಕೇತಿಕ ಕಥೆಗಳು, ಅಡ್ಡ ಕಥೆಗಳು, ಪವಾಡ-ಲೀಲೆಗಳು ಈ ರೀತಿ ಹಲವು ವಿಧವಾಗಿ ವರ್ಣಿತವಾಗುತ್ತ ಬಂದವು. ಈ ಎಲ್ಲ ಪುರಾಣಗಳನ್ನವಲೋಕಿಸಿದಾಗ ಎದ್ದುಕಾಣುವ ಅಂಶವೆಂದರೆ, ಇವು ಜನಸಮ್ಮುಖವಾಗುತ್ತ ನಡೆದುದು ಮತ್ತು ಹನ್ನೆರಡನೆ ಶತಮಾನದ ಶರಣರನ್ನೇ ಕುರಿತು ರಚನೆಯಾದುದು. ಇವು ಜನತೆಗೆ ಧರ್ಮೋಪದೇಶ ಮಾಡುವುದರ ಜೊತೆಗೆ ಅವರನ್ನು ನೈತಿಕ ನೆಲೆಗಟ್ಟಿನ ಮೇಲೆ

ನಿಲ್ಲಿಸಿ ಸನ್ಮಾರ್ಗದಲ್ಲಿ ನಡೆಸಲು ಹಾಗೂ ಅವರನ್ನು ನಿಜವಾದ ಮಾನವರನ್ನಾಗಿಸಲು ಹೆಣಗಿದುದನ್ನು ಕಾಣುವೆವು.

ಎಲ್ಲ ಪುರಾಣಗಳ ಕಥಾ ಪುರುಷರು ಶರಣರು. ಇವರು ನಿಸ್ವಾರ್ಥಿಗಳು, ಪರೋಪಕಾರಿಗಳು. ಕರುಣೆ, ಪ್ರೀತಿ, ಅನುಕಂಪ, ತ್ಯಾಗ, ಸಹನೆ, ಸತ್ಯ ಈ ಎಲ್ಲ ಆದರ್ಶಗಳನ್ನು ಹೊಂದಿದವರು; ಲೋಕದ ತಪ್ಪನ್ನೆಲ್ಲ ತಮ್ಮ ಮೇಲೇ ಹಾಕಿಕೊಳ್ಳುವ ಉದಾರಿಗಳು. ತಮ್ಮ ನಿಡಿದಾದ ಬಾಳನ್ನು ಜನಸೇವೆಗಾಗಿಯೇ ಮುಡಿಪಿಟ್ಟವರು. ಅವರ ಆದರ್ಶಮಯ ಬದುಕು ಲೋಕದ ಜನತೆಯ ಬಾಳ ಹಾದಿಯಲಿ ಬೆಳಕಿನ ಕಂಬವಿದ್ದಂತೆ. ಅವರು ಸಾಮಾನ್ಯರಂತಲ್ಲ. ಅವರ ನಡೆ ನುಡಿ ನೇರವಾದುವು. ನುಡಿದಂತೆ ನಡೆದು ತೋರಿದ ಅವರು ಅತ್ಯಂತ ಪ್ರಾಮಾಣಿಕರು. ಅವರು ಅಸಾಮಾನ್ಯರೆಂದೂ, ಮಹಿಮೆಗಳನ್ನು ತೋರಿದ ಪವಾಡ ಪುರುಷರೆಂದೂ ಪುರಾಣಗಳಲ್ಲಿ ವರ್ಣಿತರಾಗಿರುವರು. ಜನಹಿತಕ್ಕಾಗಿ ಅವರು ಪವಾಡಗಳನ್ನು ಪ್ರದರ್ಶಿಸಬೇಕಾಯಿತೆಂದು ಪುರಾಣಕಾರರು ವರ್ಣಿಸಿದುದನ್ನು ಕಾಣುವೆವು. ಹೀಗೆ ವರ್ಣಿಸಿದುದಕ್ಕೆ ಹಲವು ಕಾರಣಗಳಿವೆ. ಮಹಾಪುರುಷರಾದ ಶರಣರ ವ್ಯಕ್ತಿತ್ವಕ್ಕೆ ಮೆರುಗು ಬರಲೆಂದೂ, ಗಹನವಾದ ತತ್ವಗಳನ್ನು ಸರಳಗೊಳಿಸಲೆಂದೂ, ತತ್ವ ಹಾಗೂ ನೀತಿಯನ್ನು ಸಾಂಕೇತಿಕವಾಗಿ ಪ್ರತಿನಿಧಿಸುವ ಶಕ್ತಿ ಪವಾಡಗಳಿಗಿದೆಯೆಂದೂ ಕವಿಗಳು ಅವನ್ನು ವರ್ಣಿಸಿರುವರು. ಸಾಮಾನ್ಯ ಜನರಿಗೂ ಪವಾಡಗಳೆಂದರೆ ಅಚ್ಚು ಮೆಚ್ಚು. ಪವಾಡಗಳ ಮುಖಾಂತರ ಶರಣರ ಚರಿತ್ರೆ, ತತ್ವ, ನೀತಿ, ಆದರ್ಶಗಳನ್ನು ಬೋಧಿಸಿದಾಗ ಅವರಿಗೆ ಹಸಿಗೋಡೆಯಲ್ಲಿ ಹರಳಿಟ್ಟ ಹಾಗೆ ಪರಿಣಾಮಕಾರಿಯಾಗಿ ಅರ್ಥವಾಗುವವು. ವೈಜ್ಞಾನಿಕ ಯುಗದಲ್ಲಿದ್ದ ನಾವಿಂದು ಪವಾಡಗಳನ್ನು ಅರ್ಥವಿಲ್ಲದುವು, ಕೆಲಸಕ್ಕೆ ಬಾರದುವು ಎಂದು ತಿರಸ್ಕರಿಸಿ ಬಿಡುವೆವು. ಆದರಿದು ಸರಿಯಲ್ಲ. ಏಕಪಕ್ಷೀಯ ನಿರ್ಧಾರವಾಗುವುದು. ಪವಾಡಗಳ ಹಿನ್ನೆಲೆಯಲ್ಲಿರುವ ಅರ್ಥ ಉದ್ದೇಶ ಏನೆಂಬುದನ್ನು ನಾವು ಅರಿತುಕೊಳ್ಳಬೇಕು. ಪವಾಡಗಳು ಸಾಮಾನ್ಯವಾಗಿ ತತ್ವಕ್ಕಂಟಿಕೊಂಡೇ ವರ್ಣಿತವಾಗಿರುತ್ತವೆ. ಆ ತತ್ವ ದರ್ಶನಕ್ಕಾಗಿ ಪವಾಡದ ತೆರೆಯನ್ನು ಓಸರಿಸಿ ನೋಡಬೇಕು. ಪವಾಡ, ಪಾತ್ರೆಗೆ ಮುಚ್ಚಿದ ಸುವರ್ಣದ ಮುಚ್ಚಳವಿದ್ದಂತೆ. ಅದನ್ನು ಓರೆ ಮಾಡಿ ನೋಡಿದಾಗ ನಿಜವಾದದ್ದು ಕಾಣುವಂತೆ ಪವಾಡಾಂಶವನ್ನು ಬದಿಗಿರಿಸಿ ನೋಡಿದರೆ ಶರಣರ ನೈಜ ಬದುಕಿನ ಅರಿವಾಗುವುದು. ಅದ್ದರಿಂದ ಪವಾಡಗಳನ್ನು ತಿರಸ್ಕರಿಸುವುದೂ ಸರಿಯಲ್ಲ; ಸತ್ಯವಾದುವು ಎಂದು ಅನುಕರಿಸುವುದೂ ಸರಿಯಲ್ಲ. ಸಾಮಾನ್ಯವಾಗಿ ಎಲ್ಲ ವೀರಶೈವ ಪುರಾಣಗಳಲ್ಲೂ ಪವಾಡಗಳು ವರ್ಣಿತವಾಗಿವೆ. ಕರ್ನಾಟಕದಲ್ಲಿ ಪುರಾಣಗಳದೇ ಒಂದು ಸುದೀರ್ಘ ಪರಂಪರೆಯಿದೆ. ಅದರಲ್ಲಿ ವೀರಶೈವ ಪುರಾಣ ಪರಂಪರೆ ವೈಶಿಷ್ಟ್ಯಪೂರ್ಣವಾದುದು. ಕಾಲಕಾಲಕ್ಕೆ ವೀರಶೈವ ಪುರಾಣಗಳು ರಚನೆಗೊಳ್ಳುತ್ತಲೇ ಬಂದುದನ್ನು ಕಾಣುವೆವು. ಹನ್ನೆರಡನೆ ಶತಮಾನದ ಶರಣರಂತೆಯೇ ಮುಂದೂ ಅನೇಕ

ಶರಣರ ಚರಿತ್ರೆಯನ್ನು ಪುರಾಣ ರೂಪದಲ್ಲಿ ಮೊದಲು ಬರೆದವರು ಹರಿಹರ ಹಾಗೂ ರಾಘವಾಂಕರು. ಇವರ ಉದ್ದೇಶ ಸಾಹಿತ್ಯವನ್ನು ಸಾರ್ವತ್ರಿಕಗೊಳಿಸಿ ಜನಸಾಮಾನ್ಯರಿಗೆ ಮುಟ್ಟಿಸುವುದೇ ಆಗಿದೆ. ಜನ ಬದುಕಲೆಂದೇ ಸಾಹಿತ್ಯ ಕೃಷಿಗಿಳಿದ ಇವರು ತಮ್ಮ ಕೃತಿಗಳಲ್ಲಿ ಜನಸಮ್ಮುಖವಾದ ವಿಚಾರಗಳನ್ನು ಅಭಿವ್ಯಕ್ತಪಡಿಸಿದುದನ್ನು ಕಾಣುವೆವು. ಶರಣರೇ ಇವರ ಕಾವ್ಯಗಳ ವಸ್ತು. ಶರಣರ ಚರಿತ್ರೆ ವೀರಶೈವ ತತ್ವಗಳ ನಿರೂಪಣೆ ಯನ್ನು ಪ್ರಮುಖವಾಗಿ ಇವರ ಕೃತಿಗಳಲ್ಲಿ ಕಾಣುವೆವು. ಹರಿಹರ ಸಾವವರನ್ನು, ಕೆಡು ವವರನ್ನು ಇಂದ್ರ, ಚಂದ್ರ, ದಧೀಚಿ ಎಂದು ಹೊಗಳಿ ವ್ಯರ್ಥ ಕೆಡಬೇಡಿರಿ. ನಿತ್ಯಮುಕ್ತ ರಾದ ಶರಣರನ್ನು ಕುರಿತು ಕಾವ್ಯ ರಚಿಸಿರೆಂದು ಕವಿಗಳಿಗೆ ಕಿವಿಮಾತು ಹೇಳಿದ. ಮತ್ತು ಶಿವ ಹಾಗೂ ಶಿವಶರಣರನ್ನೇ ಕುರಿತು ಕಾವ್ಯ ರಚಿಸುವೆನೆಂದೂ, ಪ್ರೀತಿಯಿಂದ ತನ್ನ ನಾಲಗೆಯನ್ನು ಅವರಿಗೆ ಮಾರುಗೊಟ್ಟೆನೆಂದೂ ಹೇಳುವನು. ಈತನ ಹೇಳಿಕೆಯನ್ನು ಮುಂಬಂದ ಬಹುಪಾಲು ವೀರಶೈವ ಕವಿಗಳು ಅನುಸರಿಸಿದುದನ್ನು ಕಾಣುವೆವು. ಈತ ಒಂದು ಮಾರ್ಗವನ್ನು ಹಾಕಿಕೊಟ್ಟ. ಈತನ ತರುವಾಯ ಬಂದ ತೆಲುಗು ಕವಿ ಪಾಲ್ಕುರಿಕೆ ಸೋಮನಾಥನೆಂಬುವವ ದ್ವಿಪದಿ ಛಂದಸ್ಸಿನಲ್ಲಿ 'ಬಸವ ಪುರಾಣಮು' ಎಂಬ ಬೃಹದ್ಗ್ರಂಥ ರಚಿಸಿ ವೀರಶೈವ ಪುರಾಣ ಪರಂಪರೆಗೆ ಬುನಾದಿ ಹಾಕಿದ. ಈತನ ಕೃತಿಯನ್ನೇ ಭಾಮಿನಿ ಷಟ್ಪದಿಯಲ್ಲಿ ಭೀಮಕವಿ 'ಬಸವ ಪುರಾಣ' ಎಂಬ ಹೆಸರಿನಲ್ಲಿ ಕನ್ನಡಿಸಿದ. ಈ ಪುರಾಣ ಜನತೆಯನ್ನು ಬಹುವಾಗಿ ಆಕರ್ಷಿಸಿತು. ಸಾಕಷ್ಟು ಜನಪ್ರಿಯತೆಯನ್ನು ಪಡೆಯಿತು. ಇದರಲ್ಲಿ ಶರಣರ ಚರಿತೆ ಮತ್ತು ಆದಿಗಣ ಚರಿತೆ ಹಾಸುಹೊಕ್ಕಾಗಿ ಬೆರೆತು ವರ್ಣಿತ ವಾದುದನ್ನು ವೀರಶೈವ ತತ್ವ ಕಥೋಪಕಥೆಗಳ ಮೂಲಕ ಬಿತ್ತರಗೊಂಡುದುದನ್ನು ಕಾಣುವೆವು. ವೀರಶೈವ ಪುರಾಣ ಪದ್ಧತಿಗೆ ಇದೇ ಆದಿ ಮತ್ತು ಆದರ್ಶವಾಯಿತೆನ್ನ ಬಹುದು. ಇದರ ತರುವಾಯ 'ಪದ್ಮರಾಜ ಪುರಾಣ', 'ಶಿವತತ್ವ ಚಿಂತಾಮಣಿ', 'ಸಿಂಗಿರಾಜ ಪುರಾಣ', 'ಪ್ರೌಢರಾಯನ ಕಾವ್ಯ', 'ವೀರಶೈವಾಮೃತ ಮಹಾಪುರಾಣ', 'ಗುರುರಾಜ ಚಾರಿತ್ರ', 'ರಾಘವಾಂಕ ಚರಿತ್ರೆ', 'ಚೆನ್ನಬಸವ ಪುರಾಣ', 'ಶರಣ ಲೀಲಾ ಮೃತ' ಮುಂತಾದ ಪುರಾಣಗಳು ರಚನೆಯಾದುವು. ಇವುಗಳಲ್ಲಿ ಪುರಾಣ ಲಕ್ಷಣಗಳು ಬೆಳೆಯುತ್ತ ಬಂದುದುದನ್ನರಿಯಬಹುದು. ಮೊದಮೊದಲು ಶರಣರ ಚರಿತೆ, ವೀರಶೈವ ತತ್ವಗಳಿಗೆ ಮೀಸಲಾಗಿದ್ದು, ಬರಬರುತ್ತ ಪುರಾತನ ಹಾಗೂ ನೂತನ ಪುರಾತನರ ಚರಿತೆ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಶಿವನ ಪಂಚವಿಂಶತಿ ಲೀಲೆಗಳು, ಸಾಂಕೇತಿಕ ಕಥೆಗಳು, ಅಡ್ಡ ಕಥೆಗಳು, ಪವಾಡ-ಲೀಲೆಗಳು ಈ ರೀತಿ ಹಲವು ವಿಧವಾಗಿ ವರ್ಣಿತವಾಗುತ್ತ ಬಂದವು. ಈ ಎಲ್ಲ ಪುರಾಣಗಳನ್ನವಲೋಕಿಸಿದಾಗ ಎದ್ದುಕಾಣುವ ಅಂಶವೆಂದರೆ, ಇವು ಜನಸಮ್ಮುಖವಾಗುತ್ತ ನಡೆದುದು ಮತ್ತು ಹನ್ನೆರಡನೆ ಶತಮಾನದ ಶರಣರನ್ನೇ ಕುರಿತು ರಚನೆಯಾದುದು. ಇವು ಜನತೆಗೆ ಧರ್ಮೋಪದೇಶ ಮಾಡುವುದರ ಜೊತೆಗೆ ಅವರನ್ನು ನೈತಿಕ ನೆಲೆಗಟ್ಟಿನ ಮೇಲೆ

ನಿಲ್ಲಿಸಿ ಸನ್ಮಾರ್ಗದಲ್ಲಿ ನಡೆಸಲು ಹಾಗೂ ಅವರನ್ನು ನಿಜವಾದ ಮಾನವರನ್ನಾಗಿಸಲು ಹೆಣಗಿದುದನ್ನು ಕಾಣುವೆವು.

ಎಲ್ಲ ಪುರಾಣಗಳ ಕಥಾ ಪುರುಷರು ಶರಣರು. ಇವರು ನಿಸ್ವಾರ್ಥಿಗಳು, ಪರೋಪ ಕಾರಿಗಳು. ಕರುಣೆ, ಪ್ರೀತಿ, ಅನುಕಂಪ, ತ್ಯಾಗ, ಸಹನೆ, ಸತ್ಯ ಈ ಎಲ್ಲ ಆದರ್ಶಗಳನ್ನು ಹೊಂದಿದವರು; ಲೋಕದ ತಪ್ಪನ್ನೆಲ್ಲ ತಮ್ಮ ಮೇಲೇ ಹಾಕಿಕೊಳ್ಳುವ ಉದಾರಿಗಳು. ತಮ್ಮ ನಿಡಿದಾದ ಬಾಳನ್ನು ಜನಸೇವೆಗಾಗಿಯೇ ಮುಡಿಪಿಟ್ಟವರು. ಅವರ ಆದರ್ಶ ಮಯ ಬದುಕು ಲೋಕದ ಜನತೆಯ ಬಾಳ ಹಾದಿಯಲಿ ಬೆಳಕಿನ ಕಂಬವಿದ್ದಂತೆ. ಅವರು ಸಾಮಾನ್ಯರಂತಲ್ಲ. ಅವರ ನಡೆ ನುಡಿ ನೇರವಾದುವು. ನುಡಿದಂತೆ ನಡೆದು ತೋರಿದ ಅವರು ಅತ್ಯಂತ ಪ್ರಾಮಾಣಿಕರು. ಅವರು ಅಸಾಮಾನ್ಯರೆಂದೂ, ಮಹಿಮೆಗಳನ್ನು ತೋರಿದ ಪವಾಡ ಪುರುಷರೆಂದೂ ಪುರಾಣಗಳಲ್ಲಿ ವರ್ಣಿತರಾಗಿರುವರು. ಜನಹಿತ ಕ್ಕಾಗಿ ಅವರು ಪವಾಡಗಳನ್ನು ಪ್ರದರ್ಶಿಸಬೇಕಾಯಿತೆಂದು ಪುರಾಣಕಾರರು ವರ್ಣಿಸಿದು ದನ್ನು ಕಾಣುವೆವು. ಹೀಗೆ ವರ್ಣಿಸಿದುದಕ್ಕೆ ಹಲವು ಕಾರಣಗಳಿವೆ. ಮಹಾಪುರುಷ ರಾದ ಶರಣರ ವ್ಯಕ್ತಿತ್ವಕ್ಕೆ ಮೆರುಗು ಬರಲೆಂದೂ, ಗಹನವಾದ ತತ್ವಗಳನ್ನು ಸರಳ ಗೊಳಿಸಲೆಂದೂ, ತತ್ವ ಹಾಗೂ ನೀತಿಯನ್ನು ಸಾಂಕೇತಿಕವಾಗಿ ಪ್ರತಿನಿಧಿಸುವ ಶಕ್ತಿ ಪವಾಡಗಳಿಗಿದೆಯೆಂದೂ ಕವಿಗಳು ಅವನ್ನು ವರ್ಣಿಸಿರುವರು. ಸಾಮಾನ್ಯ ಜನರಿಗೂ ಪವಾಡಗಳೆಂದರೆ ಅಚ್ಚು ಮೆಚ್ಚು. ಪವಾಡಗಳ ಮುಖಾಂತರ ಶರಣರ ಚರಿತ್ರೆ, ತತ್ವ, ನೀತಿ, ಆದರ್ಶಗಳನ್ನು ಬೋಧಿಸಿದಾಗ ಅವರಿಗೆ ಹಸಿಗೋಡೆಯಲ್ಲಿ ಹರಳಿಟ್ಟ ಹಾಗೆ ಪರಿಣಾಮಕಾರಿಯಾಗಿ ಅರ್ಥವಾಗುವವು. ವೈಜ್ಞಾನಿಕ ಯುಗದಲ್ಲಿದ್ದ ನಾವಿಂದು ಪವಾಡಗಳನ್ನು ಅರ್ಥವಿಲ್ಲದುವು, ಕೆಲಸಕ್ಕೆ ಬಾರದುವು ಎಂದು ತಿರಸ್ಕರಿಸಿ ಬಿಡುವೆವು. ಆದರಿದು ಸರಿಯಲ್ಲ. ಏಕಪಕ್ಷೀಯ ನಿರ್ಧಾರವಾಗುವುದು. ಪವಾಡಗಳ ಹಿನ್ನೆಲೆ ಯಲ್ಲಿರುವ ಅರ್ಥ ಉದ್ದೇಶ ಏನೆಂಬುದನ್ನು ನಾವು ಅರಿತುಕೊಳ್ಳಬೇಕು. ಪವಾಡಗಳು ಸಾಮಾನ್ಯವಾಗಿ ತತ್ವಕ್ಕಂಟಿಕೊಂಡೇ ವರ್ಣಿತವಾಗಿರುತ್ತವೆ. ಆ ತತ್ವ ದರ್ಶನಕ್ಕಾಗಿ ಪವಾಡದ ತೆರೆಯನ್ನು ಓಸರಿಸಿ ನೋಡಬೇಕು. ಪವಾಡ, ಪಾತ್ರೆಗೆ ಮುಚ್ಚಿದ ಸುವರ್ಣದ ಮುಚ್ಚಳವಿದ್ದಂತೆ. ಅದನ್ನು ಓರೆ ಮಾಡಿ ನೋಡಿದಾಗ ನಿಜವಾದದ್ದು ಕಾಣುವಂತೆ ಪವಾಡಾಂಶವನ್ನು ಬದಿಗಿರಿಸಿ ನೋಡಿದರೆ ಶರಣರ ನೈಜ ಬದುಕಿನ ಅರಿವಾಗುವುದು. ಅದ್ದರಿಂದ ಪವಾಡಗಳನ್ನು ತಿರಸ್ಕರಿಸುವುದೂ ಸರಿಯಲ್ಲ; ಸತ್ಯ ವಾದುವು ಎಂದು ಅನುಕರಿಸುವುದೂ ಸರಿಯಲ್ಲ. ಸಾಮಾನ್ಯವಾಗಿ ಎಲ್ಲ ವೀರಶೈವ ಪುರಾಣಗಳಲ್ಲೂ ಪವಾಡಗಳು ವರ್ಣಿತವಾಗಿವೆ. ಕರ್ನಾಟಕದಲ್ಲಿ ಪುರಾಣಗಳದೇ ಒಂದು ಸುದೀರ್ಘ ಪರಂಪರೆಯಿದೆ. ಅದರಲ್ಲಿ ವೀರಶೈವ ಪುರಾಣ ಪರಂಪರೆ ವೈಶಿಷ್ಟ್ಯ ಪೂರ್ಣವಾದುದು. ಕಾಲಕಾಲಕ್ಕೆ ವೀರಶೈವ ಪುರಾಣಗಳು ರಚನೆಗೊಳ್ಳುತ್ತಲೇ ಬಂದು ದನ್ನು ಕಾಣುವೆವು. ಹನ್ನೆರಡನೆ ಶತಮಾನದ ಶರಣರಂತೆಯೇ ಮುಂದೂ ಅನೇಕ

ಶರಣರು ಉದಿಸಿ ಜನಸೇವೆಗೈದರು. ಅವರನ್ನು ಕುರಿತು ಪುರಾಣಗಳು ರಚನೆಯಾಗು ತ್ತಲೇ ಬಂದಿವೆ. ಆ ಮಾಲಿಕೆಯಲ್ಲಿ "ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರ ಪುರಾಣ"ವೂ ಒಂದು. ಶ್ರೀ ಶರಣ ಶಿವಲಿಂಗೇಶ್ವರರು ಗುರು ಪರಂಪರೆಯ ಶರಣರು. ಇಂದಿಗೂ ಇವರ ಮಠದ ಪರಂಪರೆ ಮುಂದುವರಿದುಕೊಂಡು ಬಂದಿದೆ.

**ಮಠದ ಪರಂಪರೆ :**

ಕಲಬುರ್ಗಿ ಜಿಲ್ಲೆಯ ಆಳಂದ ತಾಲೂಕಿನ ಒಂದು ಹಳ್ಳಿ ಮಾದನ ಹಿಪ್ಪರಗಾ. ಈ ಊರಿನಲ್ಲೇ ಪುರಾಣ ಪುರುಷ ಶ್ರೀ ಶರಣ ಶಿವಲಿಂಗೇಶ್ವರರು ಜನಿಸಿದ್ದು. ಇಲ್ಲಿ ಎರಡು ನೂರಾ ಐವತ್ತು ವರ್ಷಗಳ ಹಿಂದೆ ಗುರುಪರಂಪರೆಯ ಮಠವೊಂದು ಸ್ಥಾಪನೆ ಯಾದುದು ತಿಳಿದು ಬರುತ್ತದೆ. ಇಲ್ಲಿ ಮೊದಲು ಶ್ರೀ ಸಂಗಮೇಶ್ವರ ದೇವಾಲಯ ಹಾಗೂ ಕಲಾಲಿಂಗ ಮಠಗಳಿದ್ದವು. ಸಂಗಮೇಶ್ವರ ದೇವಾಲಯದಲ್ಲಿ ಶ್ರೀ ಖಂಡೇಶ್ವರರು ಬಂದು ಅನೇಕ ಲೀಲೆಗಳನ್ನು ತೋರಿ ಪ್ರಸಿದ್ಧಿ ಪಡೆಯಲು ಅದಕ್ಕೆ ಶ್ರೀ ಖಂಡೇಶ್ವರ ದೇವಾಲಯವೆಂದು ಹೆಸರಾಯಿತು. ಆಗಿನ ಕಲಾಲಿಂಗ ಮಠವು ಕೇವಲ ಈಗಿರುವ ಮಹಾದೇವ ಮಂದಿರವನ್ನು ಮಾತ್ರ ಹೊಂದಿತ್ತು. ಶ್ರೀ ಮ. ನಿ. ಪ್ರ. ಶ್ರೀ ಸಿದ್ಧಲಿಂಗ ವಿರಕ್ತಸ್ವಾಮಿಗಳವರು ಮಠಕ್ಕೆ ಪಟ್ಟಾಧಿಕಾರಿಗಳಾಗಲು ಕಲಾಲಿಂಗ ಮಠವು ಪಟ್ಟದ್ದೇವರ ಮಠವಾಗಿ ಪರಿಣಮಿಸಿತು. ಶ್ರೀಗಳವರು ಮಹಾದೇವ ಮಂದಿರದ ಪಕ್ಕದ ಗವಿ ಯನ್ನು ಕಟ್ಟಿಸಿ ಅನುಷ್ಠಾನಗೈದು ಅಲ್ಲಿಯೇ ಜೀವಂತ ಸಮಾಧಿ ಹೊಂದಿದರು. ಅನಂತರ ಬಸವಲಿಂಗಯ್ಯನವರು ಮಠದಲ್ಲಿ ಕೆಲಕಾಲ ಮರಿದೇವರಾಗಿ ಉಳಿದರು. ಮುಂದೆ ಕ್ರಿ.ಶ. ೧೭೩೦ ರ ಸುಮಾರಿಗೆ ಈ ಮಠದ ಅಧಿಕಾರವನ್ನು ಶ್ರೀ ಶಿವಲಿಂಗೇಶ್ವರರು ವಹಿಸಿ ಕೊಂಡರು. ಇವರಿಗೆ ಆಗ ಅಂದಾಜು ೨೫-೩೦ ವರ್ಷ ವಯಸ್ಸು. ಅಂದಿನಿಂದ ಪಟ್ಟದ್ದೇವರ ಮಠವು ಶಿವಲಿಂಗೇಶ್ವರ ಮಠವೆಂದು ಪ್ರಸಿದ್ಧಿಗೆ ಬಂದಿತು. ಇವರ ಹೆಸರೇ ಮಠದ ಹೆಸರಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಶಿವಲಿಂಗೇಶ್ವರರು ಅಷ್ಟಾವರಣ ಪಂಚಾಚಾರ ಮತ್ತು ಷಟ್‌ಸ್ಥಲಗಳನ್ನು ಚೆನ್ನಾಗಿ ಅರಿತು ಅರಗಿಸಿ ಕೊಂಡರು. ಲಿಂಗಾಂಗ ಸಾಮರಸ್ಯವನ್ನರಿತು ಅನೇಕ ಮಹಿಮೆಗಳನ್ನು ತೋರಿದರು. ಇವರು ಮಠದಲ್ಲಿರುವ ಬಾವಿಯನ್ನು ತೋಡಿಸಿದ್ದಲ್ಲದೆ ಮಠದ ಹೊರಗಿರುವ ಕಟ್ಟಡ ವನ್ನು ಕಟ್ಟಿಸಿದರು. ಆ ಜಾತಿ ಈ ಜಾತಿ ಎನ್ನದೆ ಎಲ್ಲ ಜಾತಿಯವರನ್ನೂ ಸಮಾನ ವಾಗಿ ಕಂಡರು. ಎಲ್ಲ ಧರ್ಮಗಳೂ ಸಮಾನವೆಂದು ಬೋಧಿಸಿದರು. ಒಟ್ಟಾರೆಯಾಗಿ ಮಠವನ್ನು ಊರ್ಜಿತಾವಸ್ಥೆಗೆ ತಂದರು. ಅದೇ ಗ್ರಾಮದ ನಂದೀಧ್ವಜವವರ ಮನೆ ತನದ ಮಲ್ಲಿಕಾರ್ಜುನ-ಬಂಗಾರೆಮ್ಮ ದಂಪತಿಗಳು ಶ್ರೀ ಶಿವಲಿಂಗೇಶ್ವರರ ಪರಮ ಭಕ್ತರು. ಶ್ರೀ ಮಲ್ಲಿಕಾರ್ಜುನ ನಿಷ್ಕಾಮದಿಂದ ನೇಯ್ಗೆ ಕಾಯಕವೆಸಗಿ ಬಂದುದರಲ್ಲಿ ಜಂಗಮ ಸೇವೆಯನ್ನು ಮಾಡುತ್ತಿದ್ದರೆ, ಆತನ ಧರ್ಮಪತ್ನಿ ಬಂಗಾರೆಮ್ಮ ಸಾಧ್ವಿ ಶಿರೋಮಣಿ, ಪರಮ ಪತಿವ್ರತೆ, ಪತಿಗೆ ಅನುಕೂಲಕರಳಾಗಿ ನಡೆಯುವವಳು. ಇವರು

ಪ್ರತಿದಿನ ಶಿವಲಿಂಗೇಶ್ವರರ ದರ್ಶನವಾಗದೆ ಬಾಯಲ್ಲಿ ನೀರನ್ನೂ ಕೂಡ ಹಾಕುತ್ತಿರಲಿಲ್ಲ. ನಿತ್ಯ ಸಾಯಂಕಾಲ ಶಿವಲಿಂಗೇಶ್ವರರ ಪೂಜೆಗೆ ಹೋಗುತ್ತಿದ್ದರು. ಇವರಿಗೆ ವಯಸ್ಸಾಗುತ್ತ ಬಂದರೂ ಪುತ್ರಸಂತಾನವಾಗಲೇ ಇಲ್ಲ. ಮಕ್ಕಳ ಚಿಂತೆ ಬಂಗಾರೆವ್ವನಲ್ಲಿ ಬಲಿಯತೊಡಗಿತು. ಮುಪ್ಪಿನ ಶ್ರೀ ಶಿವಲಿಂಗೇಶ್ವರರು ಒಂದು ದಿನ ಬಂಗಾರೆವ್ವನ ಮನದ ಕೊರಗನ್ನರಿತು 'ಚಿಂತಿಸದಿರು ತಾಯಿ ಬರುವೆ ನಿನ್ನುದರದಿ ನಾನೇ ಇನ್ನೊಂದು ಜನ್ಮವೆತ್ತಿ' ಎಂದು ಹೇಳಿ ಆಶೀರ್ವದಿಸಿದರು. ಅವರ ಆಶೀರ್ವಾದದ ಫಲದಿಂದ ಕೆಲವೇ ದಿನಗಳಲ್ಲಿ ಬಂಗಾರೆಮ್ಮ ಗರ್ಭವತಿಯಾಗಿ ಸುಪುತ್ರನನ್ನು ಪಡೆದಳು. ಆ ವೇಳೆಗೆ ಶ್ರೀ ಶಿವಲಿಂಗೇಶ್ವರರು (ಶಕೆ ೧೭೬೫ ರಲ್ಲಿ) ಲಿಂಗೈಕ್ಯರಾಗಿದ್ದರು. ಬಂಗಾರೆವ್ವ ಶಿಶುವಿಗೆ ಶಿವಲಿಂಗೇಶ ಎಂದು ನಾಮಕರಣ ಮಾಡಿದಳು. ಆತನೇ ಪ್ರಸ್ತುತ ಪುರಾಣಪುರುಷ ಶರಣ ಶಿವಲಿಂಗೇಶ್ವರ. ಕರ್ತೃ ಶಿವಲಿಂಗೇಶ್ವರರ ಅವತಾರವೇ ಇವರೆಂದು ಜನತೆಯ ದೃಢ ನಂಬುಗೆ. ನಂದೀಧ್ವಜದವರ ಮನೆ ಇಂದು ಶ್ರೀ ಶರಣಶಿವಲಿಂಗೇಶ್ವರ ಮಠವಾಗಿ ಪರಿವರ್ತನಗೊಂಡು ಶೋಭಿಸುತ್ತಿದೆ. ಇಲ್ಲಿ ಪ್ರತಿವರ್ಷ ಶ್ರಾವಣದಲ್ಲಿ ಪುರಾಣ ಪ್ರವಚನ ನಡೆಯುತ್ತದೆ. ಮತ್ತು ಭಕ್ತಾದಿಗಳಿಗೆ ನಿರಂತರ ದಾಸೋಹ ಇರುವುದು. ಸುತ್ತ ಮುತ್ತಲಿನ ಹಳ್ಳಿಯ ಜನ ಬಂದು ಭಜನೆ ಮಾಡುವುದು ದಾಸೋಹದಲ್ಲಿ ಪಾಲ್ಗೊಳ್ಳುವುದು ಪ್ರತಿವರ್ಷ ನಡೆದುಕೊಂಡು ಬಂದ ವಾಡಿಕೆಯಾಗಿದೆ. ಈ ಮಠದ ಪರಂಪರೆ ಹುಬ್ಬಳ್ಳಿ ಸಿದ್ಧಾರೂಢ ಮಠದ ಪರಂಪರೆಯನ್ನೇ ಹೋಲುವುದು.

**ಕವಿ – ಕಾಲ – ಕೃತಿಗಳು :**

ಪ್ರಸ್ತುತ ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರ ಪುರಾಣದ ಕರ್ತೃ ಶಿವಕವಿದಾಸ ಬಿರುದಾಂಕಿತ ಮಡಿವಾಳ ಕವಿ. ಈತ ತನ್ನನ್ನು ಮಡಿವಾಳಾಖ್ಯ, ಮಡಿವಾಳಸ್ವಾಮಿ ಎಂದು ಕರೆದುಕೊಂಡಿದ್ದಾನೆ. ಈತನ ಊರು ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ರೋಡಿಗಿ. ಈತ ೨೦ನೇ ಶತಮಾನದ ಆದಿಭಾಗದಲ್ಲಿ (೧೮೮೦–೧೯೫೦) ಕೃತಿ ರಚನೆ ಮಾಡಿದುದು ತಿಳಿದುಬರುತ್ತದೆ. ಶರಣ ಜೀವನ ನಡೆಸಿದ ಈತ ಸಾತ್ವಿಕ ಜೀವಿ. ಜೀವಿತದುದ್ದಕ್ಕೂ ಶರಣರ ಚರಿತೆ, ಪುರಾಣ ಪುಣ್ಯಕತೆಗಳ ರಚನೆಯಲ್ಲಿ ತೊಡಗಿದ ಈತ ನಿಜಕ್ಕೂ ಶಿವಕವಿ. "ನ್ಯಾಯ ನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕ ವಿರೋಧಿ ಶರಣನಾರಿಗೂ ಅಂಜುವವನಲ್ಲ" ಎಂದು ಬಸವಣ್ಣನವರು ನುಡಿದ ನುಡಿಯನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ಪ್ರಾಮಾಣಿಕ. ಈತ ರಚಿಸಿದ ಪುರಾಣಗಳಲ್ಲಿ ಈ ಅಂಶಗಳನ್ನು ಕಾಣಬಹುದು. ಅವುಗಳಲ್ಲಿ ಪ್ರಮುಖವಾದುವು ಇಂತಿವೆ :

೧. ಸುಕ್ಷೇತ್ರ ಬಂಥನಾಳ ವೃಷಭಲಿಂಗೇಶ್ವರ ಪುರಾಣ.
೨. ಕೆಂಭಾವಿ ಭೋಗೇಶ್ವರ ಪುರಾಣ.
೩. ಮಾದನಹಿಪ್ಪರಗಿ ಶ್ರೀ ಸದ್ಗುರು ಶರಣ ಶಿವಲಿಂಗೇಶ್ವರ ಪುರಾಣ.

೪. ಶ್ರೀ ಭಗವಾನ ಬಸವರಾಜ ಪುರಾಣ.

೫. ಗುಡ್ಡಾಪುರ ದಾನಾಂಬೆ ಪುರಾಣ.

೬. ಉಡಚಾಣ ಶಂಕರಲಿಂಗ ಪುರಾಣ.

೭. ಖೇಡಗಿ ರಾಚೇಂದ್ರರ ಪುರಾಣ.

೮. ಅಕ್ಕಲಕೋಟದ ಶ್ರೀ ರೇವಣಸಿದ್ಧ ಶಿವಶರಣರ ಪುರಾಣ (ಅಪ್ರಕಟಿತ).

ಈ ಎಲ್ಲ ಪುರಾಣಗಳು ಷಟ್ಪದಿ ಛಂದಸ್ಸಿನಲ್ಲಿದ್ದು ಸರಾಗವಾಗಿ ಓದಿಸಿಕೊಳ್ಳುವಂಥವು. ಇವುಗಳಲ್ಲಿ ಪಾಂಡಿತ್ಯ ಪ್ರದರ್ಶನವಿಲ್ಲ. ಅಷ್ಟಾದಶ ವರ್ಣನೆಗಳಿಲ್ಲ. ಕಥೆಯನ್ನು ನೇರವಾಗಿ ಸಾಮಾನ್ಯ ಜನರಿಗೆ ಮನಮುಟ್ಟುವ ಹಾಗೆ ಹೇಳಿಕೊಂಡು ಸಾಗಿದ್ದಾನೆ ಕವಿ. ಅಲ್ಲಲ್ಲಿ ಗ್ರಾಮ್ಯ ಪದಗಳನ್ನು ಬೆರೆಸಿದುದರಿಂದ ಸಾಮಾನ್ಯ ಜನರಿಗೆ ಈ ಕೃತಿಗಳು ಸರಳ ವೆನ್ನಿಸುವವು. ಭಾಷೆಯ ಪ್ರೌಢಿಮೆಯಾಗಲೀ, ಶಬ್ದ ಚಮತ್ಕಾರವನ್ನಾಗಲೀ ಸಂಸ್ಕೃತ ಭೂಯಿಷ್ಠ ಶೈಲಿಯನ್ನಾಗಲೀ ನಾವು ಇವುಗಳಲ್ಲಿ ಕಾಣೆವು. ಕವಿಯ ಉದ್ದೇಶ ಶರಣರ ಚರಿತೆ, ಅವರ ಧ್ಯೇಯ ಧೋರಣೆಗಳು, ವೀರಶೈವ ಧರ್ಮದ ತತ್ವ, ಆಚರಣೆಗಳು ಸರಳವಾಗಿ ತಿಳಿಯಲೆಂಬುದೇ ಆಗಿದೆ. ಇಂಥ ಉದ್ದೇಶ ಸಾಧನೆಗಾಗಿಯೇ ಇವು ರಚನೆ ಗೊಂಡುದನ್ನು ಅರಿಯುವೆವು. ಷಟ್ಪದಿ ಛಂದಸ್ಸು ರಚನೆಗೂ ಸುಲಭ, ಷಟ್ಪದಿಗಳಲ್ಲಿ ಕವಿ ಭಾಮಿನಿ ಹಾಗೂ ವಾರ್ಧಕಗಳನ್ನೇ ಹೆಚ್ಚಾಗಿ ತನ್ನ ಕೃತಿಗಳಿಗೆ ಬಳಸಿದುದನ್ನು ಕಾಣುವೆವು. ಎಲ್ಲ ಪುರಾಣಗಳ ಕಥಾವಸ್ತು ಶರಣರ ಚರಿತ್ರೆಯೇ ಆಗಿದೆ. ಶರಣರ ಚರಿತ್ರೆಯನ್ನು ಪುರಾಣವಾಗಿಸುವ ಪರಂಪರೆ ಹಿಂದೆಯೇ ಹೇಳಿದಂತೆ ಮಹಾಕವಿ ಹರಿಹರ ರಾಘವಾಂಕರಿಂದಲೇ ಪ್ರಾರಂಭವಾಯಿತೆಂದು ಹೇಳಬಹುದು. ಆ ಪರಂಪರೆ ಹರಿಗಡಿಯದೇ ೨೦ನೇ ಶತಮಾನದವರೆಗೂ ಮುಂದುವರಿದುಕೊಂಡು ಬಂದುದಕ್ಕೆ ಪ್ರಸ್ತುತ ಪುರಾಣವೇ ಸಾಕ್ಷಿ.

# ಕಥಾಸಾರ

**ಸಂಧಿ ೧ :**

ಶ್ರೀಗುರುವೂ ಭಕ್ತಾದಿಗಳಿಂದ ವಂದಿಸಲ್ಪಡುವವನೂ, ವೇದಾಗಮ ಸ್ಮೃತಿಗಳಿಗೂ ನಿಲುಕದವನೂ ಬ್ರಹ್ಮ, ವಿಷ್ಣು ದೇವಾನುದೇವತೆಗಳಿಂದ ಸ್ತುತಿಸಲ್ಪಡುವವನೂ ಕರುಣಾಳುವೂ ಆದ ಶಿವನಿಗೆ ನಮನಗಳು. ಸುಂದರಳೂ, ಗುಣಗಂಭೀರಳೂ ನಿತ್ಯ ನಿರ್ಮಲಳೂ ಜಗದ್ವಿಖ್ಯಾತೆಯೂ ಸುರ-ನರ-ಉರಗರಿಂದ ಸ್ತುತಿಸಲ್ಪಡುವವಳೂ ಆದ ಪಾರ್ವತಿಯೇ ವರವಿತ್ತು ಕಾಪಾಡು. ಗಜವದನ ಗಣಪತಿಯೆ ವಿದ್ಯಧಿಕಾರಿ, ಲಂಬೋಧರನೆ, ಶಿವಸುತನೆ ನಾನು ರಚಿಸಲಿರುವ ಶರಣ ಚರಿತೆಗೆ ವಿಘ್ನಗಳನ್ನು ತರದಿರು. ಶಿವನಾಣತಿಯ ಮೇರೆಗೆ ತಾರಕ ದೈತ್ಯನ ಶಿರವನ್ನು ತರಿದು ಆತನ ಉಪಟಳವನ್ನು ನಿರ್ಮೂಲನಗೊಳಿಸಿದ ಷಣ್ಮುಖನೆ ನನಗೆ ಸುಬುದ್ಧಿಯನ್ನು ಕರುಣಿಸಿ ಸಲಹು. ಆದಿ ಶಿವನಿಗೆ ವಾಹನವಾದ ನಂದೀಶ್ವರನೆ ದಯೆತೋರು. ಸರಸ್ವತಿಯೆ ನನ್ನಮೇಲೆ ಕರುಣೆದೋರಿ ಶರಣ ಶಿವಲಿಂಗೇಶ್ವರನ ಚರಿತೆಯು ನನ್ನಿಂದ ಸುಂದರವಾಗಿ ರಚಿತವಾಗುವಂತೆ ನೋಡಿಕೊಳ್ಳು. ದೋಷಗಳು ದುಶ್ಶಬ್ದಗಳು ನನ್ನಿಂದ ಬಾರದಿರುವಂತೆ ಕಾಪಾಡು. ಶರಣ ಶಿವಲಿಂಗನ ಕಾವ್ಯಕ್ಕೆ ಅತಿ ಸೊಬಗು ಉಂಟಾಗುವಂತೆ ರೇಣುಕಾಚಾರ್ಯರೆ ನನ್ನನ್ನು ಕರುಣಿಸಿರಿ. ವೀರಶೈವ ಧರ್ಮದ ಉದ್ಧಾರಕನೂ, ಜಗದೋದ್ಧಾರಕನೂ ಶಿವನಾಣತಿಯ ಮೇರೆಗೆ ಜಗದಲ್ಲವತರಿಸಿದ ಬಸವಣ್ಣನೇ ನನ್ನನ್ನು ಕರುಣಿಸು. ಗಣಪತಿಗೆ, ಷಣ್ಮುಖಿಗೆ, ನಂದಿಗೆ, ಭೃಂಗಿಗೆ, ಸಿದ್ಧರಾಮಗೆ, ಬಸವಣ್ಣನಿಗೆ, ರೇಣುಕಾಚಾರ್ಯನಿಗೆ, ರೇವಣಸಿದ್ಧನಿಗೆ, ಪ್ರಭುವಿಗೆ, ಚೆನ್ನಬಸವಣ್ಣನಿಗೆ ಮುಂತಾದ ಶರಣ ಸಂಕುಲಕ್ಕೆ ನನ್ನ ಶರಣು ಶರಣಾರ್ಥಿಗಳು. ಈ ಎಲ್ಲ ಶರಣರ ಸಂಕುಳಕೆ, ಶರಣ ಕವಿಗಳಿಗೆ ವಂದಿಸುತ ಶರಣ ಶಿವಲಿಂಗರ ಚರಿತ್ರೆ ರಚಿಸಿದೆ. ಶಿವಕವಿಗಳು ಬರೆದ ನೂರಾರು ಪುರಾಣಗಳಿರಲು ಇದನ್ನು ಈತನೇಕೆ ಬರೆದನೆಂದು ಇದ ವ್ಯರ್ಥವೆನ್ನದಿರಿ.

ಜಂಬೂದ್ವೀಪದ ಭರತಖಂಡದಲ್ಲಿ ಶೋಭಾಯಮಾನವಾದ ಪ್ರದೇಶ ಕರ್ನಾಟಕ. ಇದರ ಪೂರ್ವಕ್ಕೆ ಕಲ್ಯಾಣ ಪಟ್ಟಣ. ಈ ಪಟ್ಟಣದ ಹತ್ತಿರ ಇರುವ ಮಾದನ ಹಿಪ್ಪರಗಿಯ ಭಕ್ತರು ಬಂದು ಶರಣ ಶಿವಲಿಂಗೇಶನ ಚರಿತೆ ಬರೆಯಬೇಕೆಂದು ಬಿನ್ನವಿಸಿದಾಗ ನಾನು ಶರಣ ಶಿವಲಿಂಗೇಶ್ವರರ ಬಗ್ಗೆ ನನಗೇನೂ ಗೊತ್ತಿಲ್ಲವೆಂದೆ. ಆಗ ಲಚ್ಯಾಣ ಸಿದ್ಧಲಿಂಗರ ಶಿಷ್ಯ ಖಟ್ಟೆ ಸಿದ್ಧರಾಮಪ್ಪ ನನಗೆ ಆತನ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಸಲು ನಾನು ಬರೆದೆ.

ಶಿವಭಕ್ತರಾದ ತಾವೆಲ್ಲ ಲೀಲೆಯಿಂದ ನನ್ನನ್ನು ತಮ್ಮ ಪುತ್ರನೆಂದು ಭಾವಿಸಿ ಪುರಾಣವನ್ನು ಲಾಲಿಸಿರಿ. ನಾನು ಪುರಾಣ ರಚನೆಗೆ ತೊಡಗುವೆ.

ಪುರಾಣ ರಚಿಸುವಾಗ ನಾನು ಛಂದಸ್ಸು, ಗಣ, ಪ್ರಾಸ, ಮತಿ, ಪದ, ಸಂಧಿ ಲಕ್ಷಣ ಮುಂತಾದವುಗಳತ್ತ ಅಷ್ಟಾಗಿ ಲಕ್ಷ್ಯವಹಿಸಿಲ್ಲ. ಸರಳ ನುಡಿಗಡಣವೊಂದನ್ನೇ ನೋಡಿ ರುವೆ. ಶರಣ ಶಿವಲಿಂಗರ ಮಹಿಮೆಯಿಂದಲೇ ನನಗಿದನ್ನು ಬರೆಯಲು ಸಾಧ್ಯವಾಯಿ ತೆಂದು ಬಲವಾಗಿ ನಂಬಿರುವೆ. ಇದರಲ್ಲಿ ತಪ್ಪುಗಳಾಗಿದ್ದರೆ ಬಲ್ಲವರು ತಿದ್ದಿ ಸರಿಗೊಳಿ ಸುವುದು. ತಪ್ಪಿವೆಯೆಂದು ಹೀಗಳೆದು ನಗದೆ ತಿದ್ದಬೇಕೆಂದು ತಮ್ಮಲ್ಲಿ ವಿನಮ್ರನಾಗಿ ಬೇಡಿಕೊಳ್ಳುವೆ. ಅಮೃತವಿದ್ದರೂ ರೋಗಿ ಅದನ್ನು ಹಳಿಯುವನು. ಆರೋಗ್ಯ ವಂತನು ಪ್ರೀತಿಯಿಂದ ಅದನ್ನು ಸ್ವೀಕರಿಸುವನು. ನನ್ನ ಪುರಾಣ ಮೂರ್ಖರಿಗೆ ರುಚಿಸದು. ಶಿವಭಕ್ತರಿಗೆ ಮಾತ್ರ ಇದು ಸೊಗಸುಂಟುಮಾಡುವುದು. ರೋಗಿ, ದುಷ್ಟರು, ಮೂರ್ಖರು ಇದನ್ನು ಹಳಿದರೂ ಇದರ ಮಹತ್ವವೇನೂ ಕಡಿಮೆಯಾಗದು. ತಾಯ್ತಂದೆಗಳು ತಮ್ಮ ಶಿಶುವಿನ ತೊದಲ್ನುಡಿಯನ್ನಾಲಿಸಿ ಸಂತೋಷಿಸುವ ಹಾಗೆ ನನ್ನ ಪುರಾಣವನ್ನಾಲಿಸಿ ಸಂತೋಷಿಸಬೇಕು. ಮತ್ತು ನನ್ನನ್ನು ತಮ್ಮ ಕಂದನೋಪಾದಿ ಯಲ್ಲಿ ಕಾಣಬೇಕು. ಮೂರ್ಖರು ಸಾರಾಸಾರ ವಿಚಾರಿಸದೆ ನನ್ನ ಪುರಾಣವನ್ನು ಹಳಿದರೇನಾಯ್ತು. ಇಂಥವರಿಂದ ನನ್ನ ಕಾವ್ಯಕ್ಕೇನೂ ಕುಂದಿಲ್ಲ. ಅವರ ಪಾಡು ಅಂಧಕ ಕನ್ನಡಿಯನ್ನು ಹಳಿದಂತೆಯೇ ಸರಿ.

ಶರಣ ಕವಿಗಳು ಈಗಲೇ ರಚಿಸಿದ ವಿಷಯವನ್ನೇ ಎತ್ತಿಕೊಂಡು ಪುರಾಣ ರಚಿಸಿದ್ದಾನೆಂದು ಲಘುವಾಗಿ ಗಣಿಸಿ ನಗಬೇಡಿರಿ. ಇದು ಸೃಷ್ಟಿಯಲ್ಲಿ ಹೊಸ ಕವಿತೆಯೆಂದೇ ನನ್ನ ಭಾವನೆ. ಭಾಮಿನಿ ಷಟ್ಪದಿಯು ಬಲು ಗಂಭೀರವೆಂದು ಭಾವಿಸಿ ಇದರಲ್ಲಿಯೇ ಈ ಪುರಾಣ ರಚಿಸಿರುವೆ. ಹರಭಕ್ತರಿಗಿದು ಮೆಚ್ಚಿಕೆಯಾದರೆ ನಾನು ಪಟ್ಟ ಶ್ರಮ ಸಾರ್ಥಕವಾದಂತೆಯೇ. ಭರತ ಖಂಡದ ಪಶ್ಚಿಮ ದಿಕ್ಕಿನಿಂದ ಹರಿಯುವ ಭೀಮಾ ನದಿಯ ದಂಡೆಯಮೇಲಿರುವ ರೋಡಗಿಪುರದ ಶರಣ ಶಿವಲಿಂಗೇಶನ ಚರಣ ಸೇವಕ ಮಡಿವಾಳಾಖ್ಯನು ಬರೆದ ಈ ಕೃತಿ ಧರೆಯಲ್ಲಿ ಶೋಭಾಯಮಾನವಾಗಿ ರಾರಾಜಿಸಲಿ. ಇದು ವೇಷಗಾರರ ಚರಿತ್ರೆಯಲ್ಲ, ಕಥೆ-ಕಾದಂಬರಿಯೂ ಅಲ್ಲ. ಜೀವನ್ಮುಕ್ತರಾದ ಶರಣ ಶಿವಲಿಂಗೇಶರ ಚರಿತ್ರೆಯೆಂದು ತಮ್ಮಲ್ಲಿ ಮತ್ತೊಮ್ಮೆ ಅರಿಕೆ ಮಾಡಿಕೊಳ್ಳುವೆ.

**ಸಂಧಿ ೨ :**

ಶ್ರೀ ಶರಣ ಶಿವಲಿಂಗೇಶರು ಜನಿಸಿದ್ದು ಮಾದನ ಹಿಪ್ಪರಗಾದಲ್ಲಿ. ಈ ಊರು ಭೀಮಾನದಿಯ ಹತ್ತಿರವಿದ್ದು, ವೀರಶೈವರಿಂದ ತುಂಬಿ ಶಿವಪುರವಾಗಿರುವುದು. ಇಲ್ಲಿ ಶಿವಲಿಂಗ ಸುಪಟ್ಟದಾರ್ಯರ ಮಠವಿದೆ. ಈ ಊರಿನಲ್ಲಿ ನಂದಿಧ್ವಜ ಅಥವಾ ನಂದೀ ಕೋಲಿನವರದೊಂದು ಮನೆತನ. ಈ ಮನೆತನದ ಮಲ್ಲಿಕಾರ್ಜುನ ಮತ್ತು ಚಿನ್ನಾಂಬೆ

ಎಂಬ ಶಿವಭಕ್ತ ದಂಪತಿಗಳಿಗೆ ಮಕ್ಕಳೇ ಆಗಿದ್ದಿಲ್ಲ. ಇದೊಂದು ಅವರಿಗೆ ಕೊರತೆಯಾಗಿತ್ತು; ಕೊರಗಾಗಿತ್ತು. ಈ ಪತಿ-ಪತ್ನಿಯರ ದಾಂಪತ್ಯ ಅನ್ಯೋನ್ಯವಾಗಿತ್ತು. ಬಡವರಿದ್ದರೂ ಭಕ್ತಿಯಲ್ಲಿ ಸಿರಿವಂತರು. ಪತ್ನಿಯು ಒಂದು ದಿನ ಆ ಮಠದ ಶ್ರೀಗಳವರ ಬಳಿಹೋಗಿ ನನಗೆ ಮಗುವನ್ನು ಕರುಣಿಸಿರೆಂದು ಬೇಡಿಕೊಳ್ಳುವಳು. ಶ್ರೀಗಳು ಅವಳಿಗೆ ನಿನಗೆ ಸುಪುತ್ರನು ಜನಿಸುವನು ಹೋಗಮ್ಮಾ, ಆತನಿಗೆ ನನ್ನ ಹೆಸರನ್ನು ಇಟ್ಟುಬಿಡಿ, ನಾನೇ ನಿಮ್ಮ ಉದರದಲ್ಲಿ ಜನಿಸಿ ಬರುವೆನೆನ್ನುವರು. ಹಿಂದೆ ರೇವಣಸಿದ್ಧನು ಸುಗ್ಗಲೆಯ ಉದರ ಸ್ಪರ್ಶಿಸಿ ಸಿದ್ಧರಾಮನನ್ನು ಕರುಣಿಸಿದಂತೆ ತನಗೆ ಶಿವಲಿಂಗಾರ್ಯರು ಮಗುವನ್ನು ಕರುಣಿಸಿದರೆಂದು ಹರ್ಷಭರಿತಳಾದವಳು ಚೆನ್ನಾಂಬೆ. ಮುಂದೆ ಅವಳಿಗೆ ಮಗು ಜನಿಸಲು ಶಿವಲಿಂಗನೆಂದು ನಾಮಕರಣ ಮಾಡಿದರು. ಶರಣ ಶಿವಲಿಂಗೇಶರು ಜನಿಸಿದ್ದು ಶಾಲಿವಾಹನ ಶಕೆ ೧೭೭೬ ಶುಭತಿಥಿ ಅಷ್ಟಮಿ, ಮಾಸ ಕಾರ್ತಿಕ.

**ಸಂಧಿ ೩ :**

ಶಿವಲಿಂಗೇಶನಿಗೆ ಗುರು ಗುರುಲಿಂಗರಿಂದ ದೀಕ್ಷೆಯಾಗುವುದು. ಬಾಲ್ಯದ ಲೀಲೆಗಳನ್ನು ಗೈಯ್ದು ಶಾಲೆಗೆ ಹೋಗತೊಡಗುವನು. ಉಡಾಪೆ ಹುಡುಗರೊಂದಿಗೆ ಕಾಲಹರಣ ಮಾಡದೆ ಬಾಲಕ ಶಿವಲಿಂಗೇಶ ಓದುವುದರತ್ತ ಗಮನ ಹರಿಸಿದ. ಓದು ಬರಹದಲ್ಲಿ ಚುರುಕಾಗಿದ್ದ ಈತ ವಚನಗಳನ್ನು ಓದಿದ. ನಿತ್ಯ ಶಿವಲಿಂಗೇಶ್ವರ ಮಠಕ್ಕೆ ಹೋಗಿ ಭಜನೆ ಮಾಡತೊಡಗಿದ. ತಂದೆ ಮಲ್ಲಿಕಾರ್ಜುನ ಮಗನಿಗೆ ತಡಕಲ್ಲಿನ ತಮ್ಮ ಕುಲ ಗುರುವಿನಿಂದ ದೀಕ್ಷೆ ಕೊಡಿಸಿದರು.

**ಸಂಧಿ ೪ :**

ಗುರುಲಿಂಗೇಶರು ಶರಣ ಶಿವಲಿಂಗೇಶನಿಗೆ ಅಷ್ಟಾವರಣದೊಳು ಗುರು-ಲಿಂಗದ ಮಹಿಮೆಯನ್ನು ಹೇಳಿದರು. ಗುರು ಶಿಷ್ಯನ ಮಸ್ತಕದ ಮೇಲೆ ಹಸ್ತವಿರಿಸಿ ಕಿವಿಯಲಿ ಪಂಚಾಕ್ಷರಿ ಪ್ರಣವ ಮಂತ್ರಗಳನ್ನು ಉಚ್ಚರಿಸಿ ಲಿಂಗವನ್ನು ಪ್ರದಾನ ಮಾಡುವರು. ಶಿವಪಥವರಿಯಲು ಗುರುಪಥವೇ ಮೊದಲೆನ್ನುವಂತೆ ಗುರು ಅತ್ಯಂತ ಮಹತ್ವದವನು. ಈತನೇ ಶಿಷ್ಯನನ್ನು ಸಾಧನಾ ಮಾರ್ಗದಲ್ಲಿ ಮುನ್ನಡೆಸಹಚ್ಚುವನು. ಆದ್ದರಿಂದ ಗುರು ಮಹತ್ವದ ಆವರಣ, ಅಷ್ಟಾವರಣಗಳಲ್ಲಿ ಇದಕ್ಕೆ ಮೊದಲ ಸ್ಥಾನ, ಗುರುವಿನ ಮಹಿಮೆ ತಿಳಿಯಲು ವೇದ ಸ್ಮೃತಿಗಳಿಗೂ ಆಗದು. ಗುರು ಸಾಕ್ಷಾತ್ ಬ್ರಹ್ಮನೂ, ವಿಷ್ಣುವೂ ಶಿವನೂ ಆಗಿರುವನು. ಮೋಕ್ಷಕ್ಕೆ ಗುರುವಿನ ಕೃಪೆ ಅಗತ್ಯ. ಹರನು ನಗುರೋರಧಿಕನು. ಗುರುವಿನ ಪಾದಸ್ಮರಣೆಯಿಂದ ಅನೇಕ ಲಾಭಗಳುಂಟು. ಶಿವ ಮುನಿದರೆ ಗುರು ಅದನ್ನು ಪರಿಹರಿಸಬಲ್ಲ. ಆದರೆ ಗುರು ಮುನಿದರೆ ಅದನ್ನು ಶಿವನಿಗೂ ಪರಿಹರಿಸಲಾಗದೆಂದು ಶ್ರುತಿ ಸಾರುವುದು. ಶಿವಲಿಂಗೇಶಾ ಕೇಳು, ಮೊದಲು ಗುರುವಚನ ಮಂತ್ರವನ್ನು

ಸ್ಮರಿಸುತ್ತ ಮುಕ್ತಿ ಪಡೆದವರ ಬಗ್ಗೆ ಹೇಳುವೆ. ಪಂಡಿತರರಸನಾಗಿರುವ ಮಲ್ಲಿಕಾರ್ಜುನ ಗುರುವರ್ಯರ ಶಿಷ್ಯ ಗುರುಭಕ್ತಯ್ಯ ಗುರುವಿನ ಸೇವೆಗೈದು ಧನ್ಯನಾಗುವನು. ಗುರು ಮಲ್ಲಿಕಾರ್ಜುನ ತನ್ನ ಎಲ್ಲ ಶಿಷ್ಯರೂ ನಿಜವಾದ ಭಕ್ತರು ಹೌದೋ ಅಲ್ಲವೋ ಎಂಬು ದನ್ನು ಪರೀಕ್ಷಿಸಲೋಸುಗ ಒಮ್ಮೆ ಎಲ್ಲರನ್ನೂ ಕರೆದು ಮಂಚದ ಮೇಲೆ ಕೂಡ್ರಿ ಎನ್ನುವನು. ಆಗ ಎಲ್ಲರೂ ಗುರುವಿನ ಮಂಚದ ಮೇಲೆ ಹೇಗೆ ಕೂಡ್ರುವುದೆಂದು ಒಲ್ಲೆವೆಂದರು. ಆಗ ಗುರು ಗುರುಭಕ್ತಯ್ಯನಿಗೆ ಮಂಚವನ್ನೇರು ಎನ್ನಲು, ಆತ ಮಂಚವೇರಿ ಕುಳಿತುಕೊಳ್ಳುವನು. ಆಗ ಎಲ್ಲ ಶಿಷ್ಯರೂ ಗುರುಭಕ್ತಯ್ಯನನ್ನು ಹೊಡೆ ಯಲು ಹೋಗುವರು. ಗುರು ಅವರನ್ನೆಲ್ಲ ಕರೆದು, ಆತನನ್ನು ಹೊಡೆಯಬೇಡಿರಿ. ಇಲ್ಲಿ ನಾನು ಶೂಲವನ್ನಿರಿಸಿರುವೆ, ಇದರ ಮೇಲೆ ನಿಮ್ಮಲ್ಲಿ ಯಾರಾದರೂ ಕೂಡ್ರುವಿರಾ? ಯಾರು ಕೂಡ್ರುವಿರೋ ಅವರೇ ನನ್ನ ನಿಜವಾದ ಶಿಷ್ಯರು ಎನ್ನುವನು. ಆಗ ಎಲ್ಲರೂ ನಾವೊಲ್ಲೆ ನಾವೊಲ್ಲೆ ಎನ್ನುವರು. ಬೇಕಾದರೆ ಆ ಗುರುಭಕ್ತಯ್ಯನೇ ಮಂಚವನ್ನೇರಿ ಕುಳಿತಂತೆ ಇದನ್ನೂ ಏರಿ ಕೂಡ್ರಲಿ ಎನ್ನುವರು. ಆಗ ಗುರುಭಕ್ತಯ್ಯ ಶೂಲವೇರಿ ಕೂಡ್ರುವನು. ಆತನಿಗೇನೂ ಆಗಲಿಲ್ಲ. ಎಲ್ಲರೂ ನಿಜವಾದ ಭಕ್ತನೆಂದರೆ ಗುರು ಭಕ್ತಯ್ಯನೇ ಎಂದೊಪ್ಪಿಕೊಳ್ಳುವರು. ಗುರುಭಕ್ತಿಯೆಂದರೆ ಈ ರೀತಿ ಇರಬೇಕು ಅರಿತುಕೋ ಶಿವಲಿಂಗಾ ಎನ್ನುವರು. ಇನ್ನೊಬ್ಬ ಶಿಷ್ಯನ ಕಥೆ ಕೇಳು ಎಂದು ಹೇಳ ತೊಡಗುವನು. ಗುರುವು ವೇಳ್ಕುತ್ತರನೆಂಬ ಶಿಷ್ಯನಿಗೆ – ಮಗನೆ ಧನ-ಕನಕ, ಸತಿ-ಮನೆ ಮೊದಲಾದ ಸಂಪತ್ತನ್ನೆಲ್ಲ ಬಿಟ್ಟು ಹಗಲಿರುಳು ನನ್ನ ಬಳಿಯಿರುವುದು ಉಚಿತವೆ? ನೀನು ನಿನ್ನ ಮನೆಗೆ ಹೋಗಿ ಪ್ರೀತಿಯಿಂದ ಸಂಸಾರಮಾಡು ದುರ್ಗುಣಗಳನ್ನು ತ್ಯಜಿಸಿ ಸುಗುಣಿಯಾಗಿ ಬಾಳು ಎನ್ನುವರು. ನನ್ನನ್ನು ಸ್ಮರಿಸುತ್ತ ನಿನ್ನ ಮನೆಯಲ್ಲಿರು. ಆಗ ವೇಳ್ಕುತ್ತರ ಗುರುಗಳ ಮಾತಿಗೆ ಒಪ್ಪಿಕೊಂಡು ಅವರ ಪಾದುಕೆಗಳನ್ನು ಮನೆಗೆ ತಂದು ಪೂಜಿಸತೊಡಗುವನು. ಹೊರಗೆಲ್ಲಿ ಹೋಗಬೇಕಾದರೂ ಆ ಪಾದುಕೆಗಳನ್ನು ಶಿರದಿ ಧರಿಸಿಕೊಂಡು ಹೋಗುತ್ತಿದ್ದನು. ಒಂದು ದಿನ ಆತ ಹೊಲದ ಕೆಲಸ ಮುಗಿಸಿಕೊಂಡು ಮನೆಗೆ ಬರುತ್ತಿದ್ದಾಗ ಶಿವನೇ ಸಾಕ್ಷಾತ್ತಾಗಿ ಎದುರು ಬಂದರೂ ಆತನನ್ನು ನೋಡದಂತೆ ಹಾಗೆಯೇ ನಡೆದನು. ಆಗ ಶಿವ ಇದೇನಿದು ಎಂದು ಮತ್ತೆ ಅವನೆದುರು ಅಡ್ಡ ಬರುವನು. ಆಗ ಮತ್ತೆ ಅವನನ್ನು ಅಲಕ್ಷಿಸಿ ಮುಂದೆ ನಡೆಯಲು, ಶಿವ ಆತನನ್ನು ಅಡ್ಡಗಟ್ಟಿ ನಿಲ್ಲಿಸಿ ಏನಿದು ಎಂಥ ಮಹಾಮುನಿಗಳೂ ಸ್ವಪ್ನದಲ್ಲಿಯೂ ನನ್ನ ರೂಪವನ್ನು ಕಾಣರು. ನೀನು ಎದುರು ಬಂದರೂ ಹಾಗೆಯೇ ಹೋಗುವಿಯಲ್ಲ ಹೀಗೇಕೆ ಎನ್ನಲು ನಿಮ್ಮ ಪಾದುಕೆಗಳೇ ನನ್ನ ಶಿರದ ಮೇಲಿರಲು ನಿಮ್ಮ ಹಂಗೇಕೆ? ಅದಕ್ಕೆ ಹೊರಟೆನ್ನು ವನು. ಶಿವ ಆತನನ್ನು ಕೈಲಾಸಕ್ಕೊಯ್ದನು. ಶರಣ ಶಿವಲಿಂಗೇಶಾ ಗುರುಪಾದವ ನಂಬಿ ಧನ್ಯನಾಗು ಎನ್ನುವರು.

ಗುರುಲಿಂಗೇಶರು ಲಿಂಗದ ಮಹಿಮೆ ಹೇಳತೊಡಗಲು ಶರಣ ಶಿವಲಿಂಗೇಶನು ಶಿರ ಬಾಗಿ ಕೇಳತೊಡಗಿದನು. ಲಿಂಗ ಜಗತ್ತನ್ನೇ ಒಳಗೊಂಡಂಥದು. ಅಂಗವನ್ನು ಸರ್ವಾಂಗ ದಲ್ಲಿ ಲಿಂಗವಾಗಿಸಿಕೊಳ್ಳುವುದೇ ಮುಕ್ತಿ. ಲಿಂಗಾಂಗ ಸಾಮರಸ್ಯವೇ ವೀರಶೈವರ ಕೊನೆಯ ಗುರಿ. ಅಂಗವನ್ನು ಲಿಂಗವಾಗಿಸಿಕೊಂಡ ಅನೇಕ ಶರಣರು ಆಗಿ ಹೋಗಿ ದ್ದಾರೆ. ಅಂಥವರಲ್ಲಿ ಕಮಳಾಯಿ ಎಂಬ ವೇಶ್ಯೆಯೂ ಒಬ್ಬಳು. ಅವಳು ಲಿಂಗ ನಿಷ್ಠಾಪರಳು. ಕೈಲಾಸದಲ್ಲಿ ಶಿವನ ಒಡ್ಡೋಲಗ ನೆರೆದ ಸಮಯದಲ್ಲಿ ನಾರದ ಎದುರು ನಿಂತಿದ್ದಾನೆ. ಭೂಲೋಕ ಸಂಚರಿಸಿ ಬಂದುದನ್ನು ಶಿವನೆದುರು ಪ್ರಸ್ತಾಪಿಸುತ್ತ ದೇವಾ, ಭೂಲೋಕದಲ್ಲಿ ಕಮಳಾಯಿ ಎಂಬ ವೇಶ್ಯೆ ಲಿಂಗನಿಷ್ಠಾಪರಳು. ಭಕ್ತರನ್ನಷ್ಟೇ ನೆರೆಯು ವವಳು, ಭವಿಗಳನ್ನು ಸ್ಪರ್ಶಿಸಳು. ಇದು ಅವಳ ವ್ರತ, ನಿಷ್ಠೆ. ಆಕೆ ಲಿಂಗವನ್ನು ಗೌಪ್ಯ ವಾಗಿ ಮಂಚದ ಕಾಲಿಗೆ ಕಟ್ಟಿ ಆರಾಧಿಸುವಳು. ಇದನ್ನು ಕೇಳಿ ಶಿವನೇ ವಿಟನಾಗಿ ಒಂದು ದಿನ ಕಮಳಾಯಿಯ ಮನೆಗೆ ಬರುವನು. ಕಮಳಾಯಿಯು ಭಯಭಕ್ತಿಯಿಂದ ಆತನನ್ನು ಸ್ವಾಗತಿಸಿ ಚರಣ ತೊಳೆದು ಮಂಚದ ಮೇಲೆ ಕೂಡ್ರಿಸಿ ತಾಂಬೂಲ ಕೊಡುವಳು. ಆಕೆ ಯೊಡನೆ ಶಿವ ರತಿಸುಖದಲ್ಲಿ ಪಾಲ್ಗೊಳ್ಳುವಾಗ ಲಿಂಗವನ್ನು ಮಂಚದ ಕಾಲಿಗೆ ಹಾಕು ವಳು. ಇವಳು ನಿಜವಾಗಿ ವೇಶ್ಯೆಯಲ್ಲವೇ ಅಲ್ಲ ಲಿಂಗಾಂಗಿ ಎನ್ನುವನು ಶಿವ. ಆ ಸಮಯದಲ್ಲಿ ಶಿವ ಆಕೆಯ ಕರಡಗೆಯೊಳಗಿಂದ ಲಿಂಗವನ್ನು ಹೊರತೆಗೆಯುವನು. ಆ ಕ್ಷಣವೇ ಆಕೆಯ ಪ್ರಾಣ ಹೋಗುವದು. ಆತ ಹಾಗೆಯೇ ಹೋಗಿಬಿಡುವನು. ಸಂಗಡಿಗರು ಕಮಳಾಯಿ ಮಡಿದುದನ್ನು ಕಂಡು ದುಃಖಿಸುವರು. ಸಖಿಯರು ನಾನಾ ವಿಧವಾಗಿ ದುಃಖ ತೋಡಿಕೊಳ್ಳುವರು. ಈ ಸುದ್ದಿ ಬಸವಣ್ಣನಿಗೆ ಮುಟ್ಟಿತು. ಮಿಂಡ ಜಂಗಮರೆಲ್ಲ ಕಮಳಾಯಿ ನನಗೆ, ತನಗೆ ಪ್ರಿಯಳಾಗಿದ್ದಳೆಂದು ರೋಧಿಸತೊಡಗುವರು. ಬಿಜ್ಜಳನಿಗೂ ಈ ಸುದ್ದಿ ಮುಟ್ಟಿತು. ಕೆಲ ಕೊಂಡೆಯರು ಬಸವನೇ ಅವಳನ್ನು ಕೊಂದಿ ರುವನೆಂದು ತಿಳಿಸಿದರು. ಆಗ ಬಿಜ್ಜಳನು ಬಸವನನ್ನು ಕರೆಸಿ – ಹೇಳು ನಿನ್ನೆಯೇ ಸರಿ ಯಾಗಿದ್ದ ಕಮಳಾಯಿಯು ಇಂದೇಕೆ ಮಡಿದಳು. ಆಕೆಗೇನಾಯ್ತು ? ಇದೇನು ಮೋಸ ಎಂದು ಕೋಪದಿಂದ ಖಡ್ಗವನ್ನು ಝಳಪಿಸುತ್ತ ಯಾರು ಕೊಂದರು ಹೇಳು ಈಗಲೇ ಅವರನ್ನು ಕೊಲ್ಲಿಸುವೆ, ಸತ್ಯ ಹೇಳೆನ್ನುವನು. ಬಸವಣ್ಣ ಇದೆಲ್ಲವನ್ನರಿತು ಶಿವನನ್ನು ಕರೆಸುವನು. ಕಮಳಾಯಿಗೆ ಪ್ರಾಣ ಬರುವದು. ಬಿಜ್ಜಳ ನಾಚಿ ಬಸವನಿಗೆ ತಪ್ಪಾ ಯ್ತೆಂದು ನಮಸ್ಕರಿಸುವನು. ಕಮಳಾಯಿಯೂ ಬಸವಣ್ಣನಿಗೆ ನಮಸ್ಕರಿಸುವಳು. ಕಮಳಾಯಿ ಲಿಂಗನಿಷ್ಠೆಯುಳ್ಳವಳು. ಪ್ರಾಣ ಸ್ವರೂಪದಲ್ಲಿ ಅದನ್ನು ಅವಳು ಆರಾಧಿಸುವ ಳೆಂದು ಬಸವಣ್ಣನು ಆಕೆಯನ್ನು ಕೊಂಡಾಡುವನು. ಇದು ಲಿಂಗಮಹಿಮೆ ಶರಣ ಶಿವಲಿಂಗೇಶಾ ಎನ್ನುವನು ಗುರು.

ಕಾಟಕೂಟ ಸುರಗಿ ಚೌಡಯ್ಯ, ಚೋಳನೃಪತಿ ಸೂಳೆ ಚೋಳವ್ವೆ, ಮುಗ್ಧ ಸಂಗಯ್ಯ, ಮಾರ್ಕಂಡೇಯ, ಘಟ್ಟಿವಾಳಯ್ಯ ಇವರೆಲ್ಲ ಲಿಂಗನಿಷ್ಠಾಪರರು ಲಿಂಗನಿಷ್ಠೆ

ಯಿಂದ ಮುಕ್ತಿಯನ್ನು ಪಡೆದರೆಂದು ಗುರುವು ಲಿಂಗಮಹಿಮೆಯನ್ನು ಶರಣ ಶಿವಲಿಂಗೇಶ ನಿಗೆ ತಿಳಿಸಿದರು.

**ಸಂಧಿ ೫ :**

ಗುರು, ಜಂಗಮ, ವಿಭೂತಿ ಮತ್ತು ರುದ್ರಾಕ್ಷಿ ಮಹಿಮೆಯ ಕಥೆಗಳನ್ನು ಗುರು ಹೇಳತೊಡಗುವರು. ಜಂಗಮ ಮಹಿಮೆಯ ಕಥೆಯೊಂದು ಹೀಗಿದೆ : ಬಂಗಾಲ ದೇಶದ ಒಬ್ಬ ಅರಸು ದತ್ತೋಹಿತನೆಂಬುವವ ದಾನ ಧರ್ಮ ಮಾಡ್ತಾ ಸುಖದಿಂದಿರಲು ಒಂದು ದಿನ ಶಾಸ್ತ್ರಜ್ಞನನ್ನು ಕರೆಸಿ ದಾನಗಳಲ್ಲಿ ಯಾವ ದಾನ ಶ್ರೇಷ್ಠವಾದುದೆಂದು ಕೇಳಿದನು. ಆತ ಜಂಗಮಾರಾಧನೆ ದಾನ ಅತ್ಯಂತ ಶ್ರೇಷ್ಠವಾದುದೆಂದು ಹೇಳಿದನು. ಆ ಪ್ರಕಾರ ಆತ ಜಂಗಮ ದಾಸೋಹ ನಡೆಸಿದನು. ಒಂದು ದಿನ ಒಬ್ಬ ಜಂಗಮ ರಾಜನ ಆಸ್ಥಾನಕ್ಕೆ ಬರಲು ಆತನನ್ನು ಕರೆತಂದು ಸಿಂಹಾಸನದ ಮೇಲೆ ಕೂಡ್ರಿಸಿ ಉಪ ಚರಿಸತೊಡಗಿದ. ಬಂದ ಕಾರ್ಯವಾವುದು ಹೇಳಿರೆನ್ನಲು, ಆ ಜಂಗಮ ಹೇಳುವೆನೆಂದು ರಾಜನನ್ನು ಏಕಾಂತದಲ್ಲಿ ಕರೆದು, ಇಂದು ನಿನ್ನ ರಾಣಿಯನ್ನು ನನಗೊಪ್ಪಿಸಬೇಕೆನ್ನುವನು. ಆಗಲಿ ಎಂದು ಆತನನ್ನು ರಾಜನು ಅಂತಃಪುರಕ್ಕೆ ಕರೆತಂದು ಈ ವಿಷಯವನ್ನು ತನ್ನ ರಾಣಿಗೆ ತಿಳಿಸುವನು. ಆಕೆ, ಮೂರ್ಖ ರಾಜನೇ ನಿನಗೆ ನಾಚಿಕೆ ಬರುವುದಿಲ್ಲವೇ ? ಸತಿಯನ್ನು ಇನ್ನೊಬ್ಬರಿಗೊಪ್ಪಿಸಿದ ಕ್ಷತ್ರಿಯ ರಾಜರು ಯಾರಿದ್ದಾರೆ ? ನಿನ್ನ ಈ ಕೆಲಸ ಕಂಡು ಜನ ನಗದಿಹರೇ? ನಿನಗೆ ನಾ ಬೇಸರವಾಗಿದ್ದರೆ ಕೊಲ್ಲಿಸು, ಸತಿಯನ್ನು ಬೇಡುವವ ಅದೆಂಥ ಜಂಗಮ ಎನ್ನುವಳು. ಪರ ನಾರಿಯರನ್ನು ತಾಯಿಯೆಂದು ತಿಳಿಯಬೇಕೇ ವಿನಾ ಅವರು ಹೀಗೆ ಕಾಮುಕರಾಗಬಾರದೆನ್ನುವಳು. ರಾಜ ಆಗ, ಇದೇನಿದು ನಾನು ಜಂಗಮನಿಗೆ ಈಗಾಗಲೇ ಮಾತುಕೊಟ್ಟಿರುವೆನಲ್ಲಾ ! ಇನ್ನೇನು ಮಾಡಲಿ ಎಂದು ಶಿವ ನನ್ನು ಮೊರೆ ಹೋಗುವನು. ದೇವಾ ! ಇದೇನು ನಿನ್ನ ಮಹಿಮೆ, ನನ್ನ ಹೆಂಡತಿಗೆ ಏನಾದರೂ ಉಪಾಯ ಹೇಳೆಂದು ಬೇಡಿಕೊಳ್ಳುವನು. ಆಕೆ ಜಂಗಮನನ್ನೇ ಇರಿದು ಕೊಲ್ಲು ಎನ್ನುವಳು. ಅದರಂತೆ ಆತ ಜಂಗಮನನ್ನು ಕೊಂದು ಹೂಳಿದನು. ಕೊಂದವ ರಿಗೆ ಪಾಪ ತಟ್ಟೇ ತಟ್ಟುತ್ತೆ ಎಂಬ ಅಂಜಿಕೆ ರಾಜನಿಗೆ ಇತ್ತು. ಆ ಕೊರಗಿನಲ್ಲೇ ಆತ ಚೀರಾಡುತ್ತ ಇರುವುದನ್ನು ಜನ ಕೇಳಿ ರಾಜನೇ ನೀನೇನು ಅಂಥ ಅಪರಾಧ ಮಾಡಿರುವೆ ಎಂದು ಕೇಳುವರು. ಆಗ ರಾಜನು ಜಂಗಮನನ್ನು ಕೊಂದ ವಿಷಯ ತಿಳಿಸುವನು. ವೇದಜ್ಞರು ಆತನಿಗೆ ರಾಜ್ಯಬಿಟ್ಟು ತಪಸ್ಸು ಮಾಡು, ಆಗ ಶಿವ ನಿನಗೆ ಪ್ರತ್ಯಕ್ಷನಾಗುವನು ಎಂದು ಹೇಳುವರು. ಆತ ಹಾಗೆಯೇ ಮಾಡಿದ. ಆತನನ್ನು ಪ್ರಮಥರು ಕೈಲಾಸ ಕ್ಕೊಯ್ದು ಶಿವನೆದುರು ನಿಲ್ಲಿಸಿ ಆತ ಗೈದ ಪ್ರಮಾದವನ್ನು ಶಿವನಿಗೆ ಹೇಳುವರು. ಶಿವ ಈಗೇನು ಅಂಥದ್ದು ಆಗಿಲ್ಲ, ಪುನಃ ಜಂಗಮ ದಾಸೋಹ ಮಾಡಿದರೆ ಮುಕ್ತನಾಗುವ ನೆಂದು ಹೇಳುವನು. ರಾಜನು ಮತ್ತೆ ಮುನ್ನಿನಂತೆ ಜಂಗಮ ದಾಸೋಹವನ್ನು

ಕೈಕೊಂಡನು. ಶಿವ ಸತ್ತ ಜಂಗಮನಿಗೆ ಜೀವವಿತ್ತು, ಆ ವತ್ರೋಹಿತ ರಾಜನಲ್ಲಿಗೆ ಹೋಗಿ ಆತನ ಸತಿಯನ್ನು ಬೇಡೆಂದನು. ಆತ ಬಂದು ಬೇಡಲು ರಾಜನು ಸತಿ ಸಹಿತ ಎಲ್ಲ ಐಶ್ವರ್ಯವನ್ನು ಆ ಜಂಗಮನಿಗಿತ್ತನು.

ಕೇಳಿದೆಯಾ ಕಂದಾ, ಜಂಗಮ ಮಹಿಮೆಯನು ಎನ್ನುತ್ತ ಇಂಥದೇ ಇನ್ನೊಂದು ಕಥೆಯನ್ನು ಶರಣ ಶಿವಲಿಂಗೇಶನಿಗೆ ಗುರು ಹೇಳತೊಡಗಿದರು. ಬಸವ ಕಲ್ಯಾಣದಲ್ಲಿ ಚಂಡ ಸೋಮೆ ಎಂಬೊಬ್ಬ ವೇಶ್ಯೆಯಿದ್ದಳು. ಆಕೆ ಶಿವಭಕ್ತೆ, ಜಂಗಮರುಂಡಲ್ಲದೆ ತಾನುಣ್ಣಳು. ಕಟ್ಟಾ ವ್ರತನಿಷ್ಠಳು. ಒಂದು ದಿನ ಒಬ್ಬ ಮುದಿ ಜಂಗಮ ಹಸಿದು ಬಳಲಿ ಬರುತ್ತಿರು ವುದನ್ನು ಕಂಡು ಆಕೆ ತನ್ನ ಮನೆಗೆ ಊಟಕ್ಕೆ ಬರಬೇಕೆಂದು ಬಿನ್ನವಿಸಿಕೊಳ್ಳುವಳು. ಆತ ಒಪ್ಪಿಕೊಂಡು ಅವಳ ಮನೆಗೆ ಬರಲು ಆತನನ್ನು ಬಂಗಾರದ ಮಂಚದ ಮೇಲೆ ಕೂಡ್ರಿಸಿ ಆತನ ಪಾದಗಳಿಗೆರಗುತ್ತ ಸವಿಯಾದ ಹಣ್ಣುಗಳನ್ನೀಯಲು ಆತ, ಏನು ಮಾನಿನಿ, ನಿನಗೆ ತಿಳಿಯುವುದಿಲ್ಲವೇ ? ನಾನೇನು ಕಾಡಿನ ಗಿಳಿಯೋ ಪಕ್ಷಿಯೋ ಹಣ್ಣು ತಿನ್ನಲು. ಬೇಗನೇ ಅನ್ನ ಕೊಡು, ಕೊಡದಿದ್ದರೆ ನಾನು ಇಲ್ಲಿಂದ ಹೊರಟು ಹೋಗುವೆ, ಏನಿದು ಹೀನ ಕಲ್ಯಾಣ ಎನ್ನುವನು. ಸ್ವಾಮಿ ಈಗ ತಲೆಗೆ ಎಣ್ಣೆ ಹಚ್ಚಿಕೊಂಡಿರುವೆ. ಬೇಗನೆ ಸ್ನಾನ ಮುಗಿಸಿ ಅಡಿಗೆ ಮಾಡಿ ನಿಮಗೆ ಬಡಿಸುವೆನೆನ್ನುವಳು. ಆಗ ಆತ ಬೇಡ ಬೇಡ ವೆನ್ನುತ್ತ ಹೊರಡಲಣಿಯಾಗುವನು. ನಿಲ್ಲಿರೆಂದರೂ ಆತ ಕೇಳಲೇ ಇಲ್ಲ. ಸೂರ್ಯ ಮುಳುಗ್ತಾ ಇದ್ದಾನೆ, ನೀನು ಇನ್ನು ಯಾವಾಗ ಅಡಿಗೆ ಮಾಡುತ್ತೀ ಎನ್ನಲು ಆಕೆ, ಸೂರ್ಯನನ್ನು ಬೇಕಾದರೆ ನಿಲ್ಲಿಸುತ್ತೇನೆ ಎನ್ನುವಳು. ಆಗ ಆತ ಹಾಗೆಯೇ ಮಾಡೆನ್ನಲು, ಆಕೆ ಸೂರ್ಯನಿಗೆ ಎಲೈ ಸೂರ್ಯನೇ ಜಂಗಮನು ಆರೋಗಿಸುವವರೆಗೆ ನೀನು ಚಲಿಸ ದಿರೆಂದು ಆಣೆ ಇಡುವಳು. ಸೂರ್ಯ ಹಾಗೆಯೇ ನಿಲ್ಲುವನು. ಆಕೆ ಅಡಿಗೆ ಮಾಡಿ ಜಂಗಮನಿಗೆ ಬಡಿಸಿದ ನಂತರ ಸೂರ್ಯ ಕ್ರಮಿಸುವನು. ಹೀಗೆ ಭಕ್ತರ ಆಣೆಯೇನು ಕಿರಿದೇ ? ಜಂಗಮ ತೃಪ್ತಿಪಟ್ಟು ಹೋಗಲು ಆಕೆಯ ಆಣತಿಯಂತೆ ಸೂರ್ಯ ಅಸ್ತಂಗತ ನಾದ. ಹೀಗಾದಾಗ ಬಿಜ್ಜಳ ಸಭೆಯಲ್ಲಿದ್ದ ಬಸವಣ್ಣನಿಗೆ ವೇಳೆ ಹೆಚ್ಚು ಕಡಿಮೆ ಏಕಾಯ್ತೆಂದು ಕೇಳಲು, ಆತ ಚಂಡಸೋಮೆ ಎಂಬ ಶಿವಭಕ್ತೆ ಜಂಗಮಾರಾಧನೆ ಮಾಡಿಸ ಲೋಸುಗ ಸೂರ್ಯನಿಗೆ ಆಣೆ ಹಾಕಿ ಆತನನ್ನು ನಿಲ್ಲಿಸಿದ್ದಾಳೆಂದನು. ಇದನ್ನು ಕೇಳಿ ರಾಜ ಇದೆಲ್ಲಿಯ ಮಾತು ? ಸೂರ್ಯನೆಲ್ಲಿ ? ಕ್ಷುದ್ರ ಮನುಜರೆಲ್ಲಿ ? ಇದು ಆಗದ ಮಾತು. ಅದೂ ವೇಶ್ಯೆಯೊಬ್ಬಳು ಹೀಗೆ ಮಾಡಬಲ್ಲಳೇ ? ಇದು ನಗೆ ತರಿಸುವ ಮಾತು. ಆಗ ಬಸವನು ಇದು ಸತ್ಯ ರಾಜಾ, ಬೇಕಾದರೆ ಅವಳನ್ನು ಕರೆಸೋಣ ಎನ್ನಲು, ರಾಜ ಆಗಲಿ ಎಂದು ಆಕೆಯನ್ನು ಅಲ್ಲಿಗೇ ಕರೆಸಿ ಕೇಳಿದನು. ಆಕೆ ನಡೆದುದೆಲ್ಲ ನಿಜವೆಂದಳು. ಎಲ್ಲರೂ ಮೆಚ್ಚಿದರು. ಶರಣ ಶಿವಲಿಂಗೇಶಾ ಜಂಗಮ ಭಕ್ತಿಯನ್ನಾಲಿಸಿದೆಯಲ್ಲ ನೀನೂ ಹಾಗೆಯೇ ನಡೆ ಎಂದರು.

ಇನ್ನು ವಿಭೂತಿ ಮಹಿಮೆಯನ್ನು ಕೇಳೆಂದು ಹೇಳತೊಡಗುವರು. ವಿಭೂತಿ ಭವಸಿದ್ಧಿ ಸಂಪದವು, ಮುಕ್ತಿದಾಯಕವು ಇದಕ್ಕೆ ಸರಿಯಾದುದು ಪ್ರಪಂಚದಲ್ಲಿ ಇನ್ನೊಂದಿಲ್ಲ, ಹಣೆಬರಹವನ್ನೇ ಇದು ಅಳಿಸಿಹಾಕುವುದು. ವಿಭೂತಿಯ ಮಹಿಮೆಯ ಕಥೆಯೊಂದನ್ನು ಕೇಳೆಂದು ಹೇಳತೊಡಗುವರು. ವಶಿಷ್ಠ ಋಷಿಯ ಶಿಷ್ಯ ಧನಂಜಯನು. ಆತನಿಗೆ ಹಲವು ಪತ್ನಿಯರು. ನೂರು ಮಕ್ಕಳೂ ಇದ್ದರು. ಆತ ಸತಿಯೊಂದಿಗೆ ಸುಖವಾಗಿರಲು ವೈರಿಗಳು ಆತನನ್ನು ಕಾಡುವರು. ಹೀಗಿರಲು ಆತ ಒಂದು ದಿನ ಪಾಪನಾಸಿನಿಯಲ್ಲಿ ಸ್ನಾನಮಾಡಿ ಶಿವಾಲಯದಲ್ಲಿನ ಶಿವಲಿಂಗಕ್ಕೆ ಪ್ರದಕ್ಷಿಣೆ ಹಾಕಿ ನರಸಿಂಹ ದೇವಾಲಯಕ್ಕೆ ಹೋಗುವಾಗ ಒಬ್ಬ ಮುನಿ ಭೆಟ್ಟಿಯಾಗುವನು. ಆತ ಈತನಿಗೆ ನೊಣವಾಗೆಂದು ಶಾಪಕೊಟ್ಟ. ಈ ವಿಷಯವನ್ನು ತನ್ನ ಪತ್ನಿಗೆ ತಿಳಿಸಿ ನೊಣವಾಗಿ ಬಿಟ್ಟ. ಈತನ ಪತ್ನಿ ಶುಚಿಸ್ಮಿತೆ ರೋಧಿಸುವಳು. ನೊಣ ಹಾರಿ ಹೋದತ್ತ ಆಕೆಯೂ ಹೋದಳು. ಹೀಗಿರಲಾಗಿ ಒಂದು ದಿನ ವೈರಿಗಳು ಸಂಧಿ ಸಾಧಿಸಿ ಆ ನೊಣವನ್ನು ಕೊಂದರು. ಶುಚಿಸ್ಮಿತೆ ನನಗೇಕೆ ಸಾವು ಬಾರದೆಂದು ದುಃಖಿಸಿದಳು. ಪತಿಯ ದೇಹವನ್ನು ಕೈಯಲ್ಲಿ ತೆಗೆದುಕೊಂಡು ಅರುಂಧತಿಯ ಬಳಿ ಬಂದು, ಎನ್ನ ತಾಯಿಯೆ ! ನನ್ನ ಪಾಡು ಹೀಗಾಯ್ತೆಂದು ಹಿಂದಿನ ತನ್ನ ವೃತ್ತಾಂತವನ್ನೆಲ್ಲ ಆಕೆಗೆ ಅರುಹಿದಳು. ಇದಕ್ಕೇಕೆ ಚಿಂತಿಸುತ್ತಿ ಎಂದು ಆಕೆ ಆ ಸತ್ತ ನೊಣಕ್ಕೆ ವಿಭೂತಿ ಲೇಪಿಸುವಳು. ಅದಕ್ಕಾಗ ಪ್ರಾಣ ಬರುವದು. ಅದನ್ನಾಕೆ ಕೈಯಲ್ಲಿರಿಸಿಕೊಂಡೇ ಬದುಕುವಳು. ಮತ್ತೆ ಆ ವೈರಿಗಳು ನೊಣವನ್ನು ಕೊಲ್ಲಲು, ಆಕೆಯು ಅರುಂಧತಿಯ ಬಳಿ ಬಂದು ದುಃಖಿಸುವಳು. ಆ ವೇಳೆ ದಧೀಚಿ ಮುನಿ ಬಂದು ಆಕೆಯ ವೃತಾಂತವನ್ನೆಲ್ಲ ಅರುಂಧತಿಯ ಬಾಯಿಂದ ಕೇಳಿ ತಿಳಿದುಕೊಳ್ಳುವನು. ನೊಣ ಶವಕ್ಕೆ ಆ ಮುನಿ ವಿಭೂತಿ ಹಚ್ಚಲು ಜೀವ ಬಂದು ಅದು ಮನುಷ್ಯರೂಪ ತಾಳುವುದು. ಪತಿ-ಪತ್ನಿಯರಿಬ್ಬರು ಮುನಿಗೆ ನಮಸ್ಕರಿಸುವರು. ಮುಂದೆ ಸುಖದಿಂದ ಬಾಳತೊಡಗುವರು.

ಗುರುವೆ ವಿಭೂತಿ ಮಹಿಮೆಯನ್ನು ತಿಳಿದುಕೊಂಡೆ. ಇನ್ನು ರುದ್ರಾಕ್ಷಿ ಮಹಿಮೆಯನ್ನು ಹೇಳಿರೆನ್ನಲು, ಗುರುವು ಮಗನೇ ರುದ್ರಾಕ್ಷಿ ಶಿವನ ಅಕ್ಷಿಯೇ ಆಗಿದೆ. ಇದರ ಮಹಿಮೆ ಅಪಾರವಾದುದು. ಇದರ ಮಹಿಮೆಯನ್ನು ಸಾರುವ ಕಥೆಯೊಂದನ್ನು ಹೇಳುವೆ ಕೇಳೆಂದು ಹೇಳತೊಡಗುವರು. ನೇಪಾಳದ ಮಣಿಪುರ ನಿವಾಸಿ ಭೂಸುರನ ಮಡದಿ ಯಮುನೆಯು ಆತನನ್ನು ತೊರೆಯಲು ಆತ ಜಾರನಾಗಿ ಬಾಳತೊಡಗಿದ. ತಾನಿಟ್ಟಿದ ಹೆಣ್ಣಿನ ಹೊಟ್ಟೆಯಲ್ಲಿ ಜಾಮಿತ್ರನೆಂಬ ಮಗ ಜನಿಸಿದ. ಮುಂದೆ ಆತನ ಪತ್ನಿ ಯಮುನೆ ಬಂದು ಮಗ ಜಾಮಿತ್ರ ಧನ ಕನಕ ಹಾಳುಮಾಡುತ್ತಿರುವುದನ್ನು ಪ್ರತಿಭಟಿಸುವಳು. ಜಾಮಿತ್ರ ಆಕೆಯ ಶಿರಛೇದನ ಮಾಡಿ ಊರೂರು ಅಲೆಯುವನು. ಹಣವೆಲ್ಲ ತೀರಲು ನೇಪಾಳ ರಾಜನ ಅರಮನೆಗೆ ಕನ್ನ ಹಾಕುವನು. ಆತನನ್ನು ದೂತರು ಹಿಡಿದು ತರಿದು ಸ್ಮಶಾನದಲ್ಲಿ ಚೆಲ್ಲಿದರು. ಮರುದಿನ ರಾಣಿ ಸಖಿಯ

ರೊಂದಿಗೆ ಸ್ನಾನ ಮಾಡಲೆಂದು ಬಂದು ತನ್ನ ಕೊರಳೊಳಗಿನ ರುದ್ರಾಕ್ಷಿ ಮಾಲೆಯನ್ನು ತೆಗೆದು ಹೂವಿನ ಗಿಡವೊಂದಕ್ಕೆ ಹಾಕಿ, ಸುಗುಣೆ ಸ್ನಾನ ಮಾಡುತ್ತಿರಲು ಕಾಗೆಯೊಂದು ಬಂದು ಆ ಮಾಲೆಯನ್ನು ಬಾಯಲ್ಲಿ ಕಚ್ಚಿಕೊಂಡು ಸ್ಮಶಾನಕ್ಕೊಯ್ದು ಜಾಮಿತ್ರನ ಹೆಣದ ಹಣೆಯ ಮೇಲೆ ಚೆಲ್ಲಿತು. ರಾಣಿ ಈ ವಿಷಯವನ್ನು ದೂತರಿಗೆ ಹೇಳಲು, ಅವರು ಹುಡುಕುತ್ತ ಸ್ಮಶಾನಕ್ಕೆ ಬರುವರು. ಅಲ್ಲಿ ಜಾಮಿತ್ರನ ಶವವನ್ನು ಕಂಡು, ಸಾಮಾನ್ಯ ನಲ್ಲವೆಂದು ಆತನ ಪಾದಕ್ಕೆ ನಮಸ್ಕರಿಸಿದರು. ಶಿವ ಆತನನ್ನು ಕೈಲಾಸಕ್ಕೊಯ್ದು ರುದ್ರಗಣ ಪದವಿಯಿತ್ತನು. ರುದ್ರಾಕ್ಷಿ ಧರಿಸದೆ ಪಾಪಕಾರ್ಯಗಳಲ್ಲೇ ತೊಡಗಿ ಸತ್ತು ಹೋದ ಜಾಮಿತ್ರನಿಗೆ ನಿಮಿತ್ತ ಮಾತ್ರದಿಂದ ರುದ್ರಾಕ್ಷಿ ಆತನ ಮೇಲೆ ಬಿದ್ದುದಕ್ಕೆ ಆತನು ಪಾವನವಾದ. ಶಿವನಿಗೆ ಸಂಪ್ರೀತನಾದ. ಆದ್ದರಿಂದ ರುದ್ರಾಕ್ಷಿಯ ಮಹಿಮೆ ಸಾಮಾನ್ಯವಾದುದಲ್ಲ ಎಂದು ಶರಣ ಶಿವಲಿಂಗೇಶನಿಗೆ ಗುರು ಉಸುರಿದರು.

**ಸಂಧಿ ೬ :**

ಪಾದೋದಕ, ಪ್ರಸಾದಗಳ ಮಹಿಮೆಯನ್ನು ಗುರುವು ಶರಣ ಶಿವಲಿಂಗೇಶನಿಗೆ ಹೇಳತೊಡಗಿದರು. ಚೋಳ ದೇಶದ ರಾಜ ವಾಮದೇವಾಖ್ಯ. ಆತನ ಪತ್ನಿ ಹೇಮ ಕುಂತಲಿ ಇಬ್ಬರೂ ಶಿವಭಕ್ತರು. ಇವರ ಕೀರ್ತಿಯನ್ನು ಸಹಿಸದ ಸಿಂಹಳದ ಶೂರ ಚಂದ್ರನು ಇಬ್ಬರು ಚರರನ್ನು ಕರೆದು ಪತಿ–ಪತ್ನಿಯರಂತಾಗಿರೆಂದು ಆಕೆಯ ಬಳಿ ಹೋಗಿ ರೆಂದನು. ಚರರು ಬೇಡರಸಾ ಆಕೆ ಶಿವಭಕ್ತೆ, ನಮ್ಮ ಅವಗುಣಕ್ಕೆ ಶಾಪ ಕೊಡುವ ಳೆಂದರು. ಆದರೂ ರಾಜ ಕೇಳಲಿಲ್ಲ ಅವರನ್ನು ಕಳಿಸಿದ. ಅವರು ಪತಿ–ಪತ್ನಿಯ ವೇಷದಲ್ಲಿ ಜಂಗಮರಂತಾಗಿ ಅವಳಲ್ಲಿಗೆ ಹೋದಾಗ ಆಕೆ ಅವರನ್ನು ಸ್ವಾಗತಿಸಿದಳು. ಪ್ರೀತಿಯಿಂದ ದಂಪತಿಗಳನ್ನು ಪೂಜಿಸಿ ಊಟ ಮಾಡಿಸಿ ಕಳಿಸಿದಳು. ಬರುವಾಗ ದಾರಿ ಯಲ್ಲಿ ಒಬ್ಬ ಸ್ತ್ರೀಯಾಗಿ ಬಿಟ್ಟನು. ಅವಳನ್ನು ಮಾರ್ಗ ಮಧ್ಯದಲ್ಲಿಯೇ ಕಾಮಬಾಧೆ ತಾಳದೆ ಪತಿಯಾದವ ಭೋಗಿಸಿ ಬಿಟ್ಟ. ಅವರು ಬಂದು ರಾಜನ ಮುಂದೆ ಗೋಳಿ ಟ್ಟರು. ಹೀಗಾಯ್ತು ನಮ್ಮ ಅವಸ್ಥೆಯೆಂದರು. ರಾಜ ವಿದ್ವಜ್ಜನರನ್ನು ಕರೆಸಿ ಈ ವಿಷಯ ತಿಳಿಸಲು, ಅವರು ಹೇಮಕುಂತಲೆ ಬಳಿ ಹೋಗಿ ಕ್ಷಮೆ ಯಾಚಿಸಬೇಕೆಂದರು. ರಾಜನು ಆಗಲಿ ಎಂದೊಪ್ಪಿಕೊಂಡು ಅವರಿಬ್ಬರನ್ನೂ ಆಕೆಯ ಬಳಿ ಕರೆದೊಯ್ಯುವನು. ಅವರು ತಪ್ಪಾಯ್ತೆಂದು ಅವಳಿಗೆ ನಮಸ್ಕರಿಸುವರು. ಆಕೆ ಸ್ತ್ರೀಯಾದ ಚರನನ್ನು ಪುರುಷನನ್ನಾಗಿಸಿದಳು. ಇದು ಪಾದೋದಕದ ಮಹಿಮೆ. ಇಂಥದೇ ಇನ್ನೊಂದು ಕಥೆ ಇದೆಯೆನ್ನುತ್ತಾ ಗುರು ಹೇಳತೊಡಗುವರು.

ವರ ಘೋರಾಂಡವೆಂಬ ಊರಿನ ಸಾರಂಗನೆಂಬ ರಾಜನು ಸತಿಯೊಡನೆ ಸುಖ ದಿಂದಿದ್ದ. ಒಮ್ಮೆ ವೇಮನಾರಾಧ್ಯರು ಶಿವಪೂಜೆಗೆ ಹೂಗಳನ್ನು ತರಿಯುತ್ತಿದ್ದಾಗ ರಾಜ ಅವರನ್ನು ಕಂಡು ನಮಸ್ಕರಿಸಿದ. ವೇಮನಾರಾಧ್ಯರು ಆತನನ್ನು ನೋಡಲೇ ಇಲ್ಲ.

ರಾಜ ಮತ್ತೆ ರಥವಿಳಿದು ನಮಸ್ಕರಿಸಿದ. ಆಗಲೂ ಅವರು ರಾಜನತ್ತ ನೋಡಲೇ ಇಲ್ಲ. ರಾಜ ಕೋಪದಿಂದ ಉರಿದೆದ್ದು ಎಲವೋ ಯೋಗಿ ಗರ್ವಿಷ್ಠ ಗೂಬೆಯಂತೆ ಹಾಗೆಯೇ ನನ್ನನ್ನು ನೋಡದೇ ಇರುವಿಯಲ್ಲ ಎನ್ನುವನು. ಆಗಲೂ ಅವರು ಸುಮ್ಮನೇ ಇದ್ದುದನ್ನು ಕಂಡು ರಾಜನು ಬಹಳ ನೊಂದುಕೊಂಡು ಹೋಗಲಣಿಯಾದಾಗ, ರಾಜನೇ ನಾಳಿನ ಮಧ್ಯರಾತ್ರಿ ನಿನಗೆ ಮರಣವಿದೆ. ಅದಕ್ಕಾಗಿ ನಾನು ನಿನ್ನನ್ನು ಹರಸಲಿಲ್ಲ ಎನ್ನುವರು. ಛೀ ಪಾಪಿ ಯೋಗಿ ಹೀಗೆ ನುಡಿಯುವೆಯಾ ನನಗೆ ಅದ್ಹೇಗೆ ಸಾವು ಬರುತ್ತ ನೋಡುತ್ತೇನೆ ಎಂದು ಸತಿಯೊಡನೆ ಊರಿಗೆ ಬಂದ. ರಾಜ ರಾತ್ರಿ ತನ್ನ ಪತ್ನಿಯೊಡನೆ ಭೋಗದಲ್ಲಿ ಮೈಮರೆತು ನಿದ್ರಿಸುತ್ತಿರುವಾಗ ಹಾವೊಂದು ರಾಜನ ಕಾಲಿಗೆ ಕಚ್ಚುತ್ತಿರುವುದನ್ನು ಸತಿ ನೋಡಿ ಆತನನ್ನು ಎಬ್ಬಿಸಬೇಕೆನ್ನುವಷ್ಟರಲ್ಲಿ ಆತ ಸಾಯುವನು. ಆಗ ಜನರೆಲ್ಲ ಸೇರಿದರು. ರಾಜನಿಗೆ ಅದ್ಹೇಗೆ ಸಾವು ಬಂತು ಹೇಳೆಂದು ಆಕೆಯನ್ನು ಕೇಳಲು, ಆಕೆ ಹಿಂದಿನ ದಿನ ವೇಮನಾರಾಧ್ಯರು ನುಡಿದುದನ್ನೆಲ್ಲ ವಿವರಿಸಿದಳು. ಜನರೆಲ್ಲ ವೇಮನಾರಾಧ್ಯರ ಬಳಿಹೋಗಿ ಬದುಕಿಸಿರೆಂದು ಬೇಡಿಕೊಂಡರು. ಅವರು ಜಂಗಮ ಪಾದೋದಕವನ್ನು ತೆಗೆದುಕೊಂಡು ರಾಜನ ಶರೀರಕ್ಕೆ ಚಿಮುಕಿಸಿದರು. ಆಗ ಮಡಿದ ರಾಜನಿಗೆ ಜೀವ ಬಂದಿತು. ಆತ ವೇಮನಾರಾಧ್ಯರಿಗೆ ನಮಸ್ಕರಿಸಲು ಅವರು ಆತನಿಗೆ ನೂರು ವರ್ಷ ಆಯುಷ್ಯವನ್ನು ಕರುಣಿಸಿ ಹರಸಿದರು. ಇದರಂತೆಯೇ ಕಾಚಿರಾಜನೆಂಬೊಬ್ಬ ಆಂಧ್ರದ ಶಿವಭಕ್ತನು ಕಾಶೀತೀರ್ಥಕ್ಕಿಂತ ಜಂಗಮ ಪಾದೋದಕ ಶ್ರೇಷ್ಠವೆಂದು ಪರವಾದಿಗಳಿಗೆ ತೋರಿಸಿಕೊಟ್ಟನು. ವೀರಶೈವರಿಗೆ ಜಂಗಮ ಪಾದೋದಕವೇ ಶ್ರೇಷ್ಠವಾದುದೆಂದು ನೀನು ತಿಳಿ ಶರಣ ಶಿವಲಿಂಗೇಶಾ ಎನ್ನುವರು ಗುರು.

ಪ್ರಸಾದದ ಮಹಿಮೆಯನ್ನು ಸಾರುವ ಕಥೆಯೊಂದನ್ನು ಆಲಿಸು ಎಂದು ಹೇಳತೊಡಗುವರು. ಹಿಂದೆ ಶ್ರೀಗಿರಿಗೆ ನಾಲ್ವರು ಯಾತ್ರಿಗಳು ಹೋಗಿದ್ದರು. ಅಲ್ಲಿ ಅವರು ಸ್ನಾನಮಾಡಿ ಬುತ್ತಿ ಪ್ರಸಾದ ಸೇವಿಸುತ್ತಿರುವಾಗ ಆಕಾಶದಲ್ಲಿನ ಗಂಧರ್ವನು ಇದನ್ನು ಕಂಡು ಎಂಜಲು ತಿನ್ನುವಿರಲ್ಲಾ ಎಂದು ಅಣಕವಾಡಿ ನಕ್ಕ. ಇವರು ಆತನನ್ನು ಕಂಡು ನಿಂದಿಸಿದ ನೀನು ಇನ್ನು ಹಂದಿಯಾಗೆಂದರು. ಆಗ ಆತ ನನ್ನದು ತಪ್ಪಾಯ್ತು. ನನ್ನ ಶಾಪವಿಮೋಚನೆ ಹೇಗೆ ಮಾಡಿಕೊಳ್ಳಲಿ ಎನ್ನಲು ಜಂಗಮ ಪ್ರಸಾದ ಸ್ವೀಕರಿಸಿದಾಗ ನಿಃಶಾಪವಾಗುವುದೆಂದರು. ಆ ಕ್ಷಣವೇ ಆ ಗಂಧರ್ವ ಮರಿಹಂದಿಯಾದ. ಮರಿ ಹಂದಿ ಅತ್ತಿತ್ತ ತಿರುಗಿತು. ಇದನ್ನು ಕಂಡು ಒಬ್ಬ ಬೇಡ ತನ್ನ ಮನೆಗೊಯ್ದ. ಆತನ ಮನೆಗೆ ಒಂದು ದಿನ ಜಂಗಮನೊಬ್ಬ ಬಂದ. ಆತ ಪ್ರಸಾದ ಸೇವಿಸಿ ಸ್ವಲ್ಪ ತುಂಡನ್ನು ಆಕಡೆ ಎಸೆದ. ಅದನ್ನು ಆ ಹಂದಿ ಸೇವಿಸಿತು, ಹಿಂದನವೆಲ್ಲ ಅದಕ್ಕೆ ನೆನಪಾಯ್ತು. ಒಂದು ತಿಂಗಳು ಮುಂದೆ ಅದು ಏನನ್ನೂ ತಿನ್ನಲಿಲ್ಲ, ಬೇಡ ಅದಕ್ಕೆ ಬರೆಹಾಕಿಸಿದ. ಪ್ರಸಾದದ ಮಹಿಮೆಯಿಂದ ಅದರ ಮೈಮೇಲೆಲ್ಲ ಹಾಕಿಸಿದ ಬರೆಗಳು ಬಂಗಾರದುವಾದುವು. ಊರ ಜನರೆಲ್ಲ ಕಬ್ಬಿಣ ಸಲಾಕೆ ತಂದು ಆ ಹಂದಿಗೆ ಬರೆ ಕೊಡತೊಡ

ಗಿದರು. ಅವರೆಲ್ಲ ಕೊಟ್ಟ ಬರೆಗಳು ಬಂಗಾರದುವಾದುವು. ರಾಜನಿಗೂ ಈ ಸುದ್ದಿ ಮುಟ್ಟಿತು. ಆತ ತನ್ನ ರಾಜ್ಯದಲ್ಲಿ ಅದರ ನಾಣ್ಯವನ್ನೇ ಚಲಾವಣೆಯಲ್ಲಿ ತಂದ. ಜಗತ್ತಿಗೇ ಅದರ – ಅಂದರೆ ಜಂಗಮ ಮಹಿಮೆ ಪ್ರಸಾರವಾಯ್ತು. ಇದನ್ನು ಕೇಳಿ ಶಿವನೇ ಬಂದು ಹಂದಿಯ ಕೀಳು ಜನ್ಮವ ಬಿಡಿಸಿ ಮೊದಲಿನ ಗಂಧರ್ವ ರೂಪವನ್ನು ದಯ ಪಾಲಿಸಿದ. ಮತ್ತು ಆತನನ್ನು ತನ್ನೊಡನೆ ಕೈಲಾಸಕ್ಕೆ ಕರೆದೊಯ್ದ.

ಈ ವರೆಗೆ ಅಷ್ಟಾವರಣಗಳ ಬಗ್ಗೆ ಹೇಳಿದೆ. ಇನ್ನು ಪಂಚಾಚಾರಗಳನ್ನು ಕುರಿತು ಹೇಳುವೆ ಕೇಳು ಶರಣ ಶಿವಲಿಂಗೇಶಾ ಎಂದು ಗುರು ಹೇಳತೊಡಗುವರು. ವೀರಶೈವಕ್ಕೆ ಅಷ್ಟಾವರಣಗಳೇ ಅಂಗ, ಪಂಚಾಚಾರವೇ ಪ್ರಾಣ, ಪಂಚಾಚಾರಗಳಿರದಿದ್ದರೆ ಧರ್ಮ ನಿರರ್ಥ. ಅವು ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರ ಎಂದೈದು ವಿಧ. ಗುರುವಿನಿಂದ ದೀಕ್ಷೆ ಪಡೆದು ಇಷ್ಟಲಿಂಗದೊಡನೆ ಅನುಸಂಧಾನ ನಡೆಸಿ ಲಿಂಗದೇಹಿ ಯಾಗುವುದೇ ಲಿಂಗಾಚಾರ. ಕಾಯಕದಲ್ಲಿ ನಿರತನಾಗಿ ಗುರು-ಲಿಂಗ-ಜಂಗಮಕ್ಕಾಗಿ ಸತ್ಯ ಶುದ್ಧ ದಾಸೋಹ ಏರ್ಪಡಿಸುವವನೇ ಸದಾಚಾರಿ. ಎಲ್ಲ ಭಕ್ತರೂ ಶರಣರೂ ಅಧಿಕ, ನಾನು ಕಿಂಕರನೆಂದು ಭಯ–ಭಕ್ತಿಯಿಂದ ತಿಳಿದು ನಡೆಯುವವನೇ ಭೃತ್ಯಾಚಾರಿ. ಶಿವಭಕ್ತರಲ್ಲಿ ಮೇಲು ಕೀಳು ಕುಲಜಾತಿಗಳನ್ನೆಣಿಸದೆ ಎಲ್ಲರನ್ನು ಸಮಾನವಾಗಿ ಕಾಣು ವವನೇ ಸದಾಚಾರಿ. ಶಿವನಿಂದೆ ಕೇಳದವನೇ ಕೇಳಿದರೂ ಆ ನಿಂದಕನನ್ನು ಸನ್ಮಾರ್ಗಕ್ಕೆ ಹಚ್ಚುವವನೇ ಗಣಾಚಾರಿ. ಇವನ್ನೆಲ್ಲ ಅರಿತು ಆಚರಿಸಬೇಕೆನ್ನುವರು.

**ಸಂಧಿ ೭ :**

ಶರಣ ಶಿವಲಿಂಗೇಶನು ಭಕ್ತಿಮಾರ್ಗಾಚಾರವನ್ನು ಗುರುವಿನಿಂದರಿತನು. ನಿಂದಕರನ್ನು ಪ್ರತಿಯಾಗಿ ನಿಂದಿಸಬೇಡ. ತಪ್ಪಿಲ್ಲದೆ ಬೈಯುವವರನ್ನು ಅಪ್ಪಿ ಮುದ್ದಾಡ ಬೇಕು. ಗಿಡ ತನ್ನನ್ನು ಕಡಿಯಬಂದವನಿಗೂ ನೆರಳು ಕೊಡುವಂತೆ ಭಕ್ತ ತನ್ನನ್ನು ನಿಂದಿಸಿದರೂ ಹಿಂಸಿಸಿದರೂ ಅವರಿಗೆ ಒಳ್ಳೆಯದನ್ನೇ ಮಾಡಬೇಕೆಂದು ಶಿವಭಕ್ತಿ ಮಾರ್ಗವನ್ನು ಗುರುಗಳು ಶರಣ ಶಿವಲಿಂಗೇಶನಿಗೆ ತಿಳಿಸುವರು. ವೀರನ ಗುಣ ಯುದ್ಧ ದಲ್ಲಿ, ನಾರಿಯ ಗುಣ ದಾರಿದ್ರ್ಯದಲ್ಲಿ, ಹಿತಕಾರಿಯ ಗುಣ ಆಪತ್ತಿನಲ್ಲಿ ತಿಳಿಯುವಂತೆ ಭಕ್ತನ ಗುಣ ಜಂಗಮರ ಕಾಟದಲ್ಲಿ ತಿಳಿಯುವುದು. ಜಗದ ಜೀವಿಗಳನ್ನು ಕಾಮ– ಕ್ರೋಧ-ಮೋಹ ಮದಾದಿಗಳು ಬೆಂಬತ್ತಿ ಕಾಡುವವು. ಇವುಗಳ ನಾಶ ಭಕ್ತಿಯಿಂದಲೇ ಸಾಧ್ಯ. ಸಿರಿ–ಸಂಪತ್ತು ಶಾಶ್ವತವಲ್ಲ. ಕನಸಿನಂತೆ ಇರುವ ಇವು ಕನಸು ತಿಳಿದೆದ್ದಾಗ ಇಲ್ಲವಾಗುವವು. ಯೌವನವೂ ಕೂಡ ಹೂವಿದ್ದಂತೆ. ಹೂವಿನ ಪರಿಮಳ ಅದು ಒಣಗಲು ಇಲ್ಲದಾಗುವಂತೆ ಯೌವನವು ಕ್ಷಣಿಕವಾದುದು. ಆದುದರಿಂದ ಇದನ್ನು ನಂಬಬೇಡ ಎನ್ನುವರು.

ಶರಣ ಶಿವಲಿಂಗೇಶನು ಗುರುವಿಗೆ – ನರರು ಭವ-ಭಯದಿಂದ ಪಾರಾಗುವ ಬಗೆ ಎಂತು ಎಂದು ಕೇಳಲು, ಷಟ್‌ಸ್ಥಲ ಜ್ಞಾನದ ಅರಿವಾದರೆ ಮುಕ್ತಿ ಲಭಿಸುವುದು ಶಿವಲಿಂಗೇಶಾ ನೀನು ಮೊದಲು ಮದುವೆಯಾಗು ಎನ್ನುವರು. ಮದುವೆ ಬೇಡ ಗುರುವರ್ಯಾ ನಿನ್ನ ಬೋಧೆಯೇ ನನಗೆ ಮದುವೆಯ ಸಮಾನ. ವೀರಶೈವ ದೀಕ್ಷೆ ಯಾದರೆ ಮದುವೆಯಾದಂತಲ್ಲವೇ ? ಎನ್ನುವನು. ಗುರು – ಮದುವೆ ನಿಕೃಷ್ಟವಲ್ಲ. ಮದುವೆಯಾದ ಶರಣರು ಎಷ್ಟಿಲ್ಲ ? ಮದುವೆ ಆಗುವುದರಲ್ಲಿ ಏನೂ ತಪ್ಪಿಲ್ಲ, ನೀನು ಮದುವೆಯಾಗಿ ಸುಖವಾಗಿರು ಎನ್ನುವರು. ಆತನ ತಾಯಿಗೂ ಹೇಳುವರು. ಆಕೆ ಗುರುವಿಗೆ ನಮಸ್ಕರಿಸಿ ಮದುವೆ ಮಾಡಲು ಮನೆಯಲ್ಲೇನಿದೆ ? ಬಡತನದ ಬಾಳ್ವೆ ನೀವೇ ಮದುವೆ ಮಾಡಿಸಿರಿ ಎಂದು ಕೈಮುಗಿಯುವಳು. ಗುರು ಆಕೆಯನ್ನು ಆಶೀರ್ವದಿಸಿ ಚಿಂತೆ ಬೇಡ ದೇವನೇ ಈ ಮದುವೆಯನ್ನು ನೆರವೇರಿಸುವನು ಎನ್ನುತ್ತ ಗುಲಗಂಜಿ ಶಿವಲಿಂಗಾಖ್ಯ ಪೋಂಕಾರಾಂಬೆ ಇವರ ಕುವರಿ ಪವಳಾಂಬೆ ಶರಣ ಶಿವಲಿಂಗೇಶನಿಗೆ ಅನು ರೂಪ ಕನ್ಯೆ ಎಂದು ತಿಳಿಸುವರು. ಪವಳಾಂಬೆಯನ್ನು ಶರಣ ಶಿವಲಿಂಗೇಶನಿಗೆ ಕೊಡುವ ನಿಶ್ಚಯವನ್ನು ಹಿರಿಯರು ಭಕ್ತಾದಿಗಳು ಮಾಡುವರು. ಗುರುಗಳ ಸಮ್ಮುಖದಲ್ಲಿ ಮದುವೆ ವೈಭವದಿಂದ ನೆರವೇರಿತು. ಮದುವೆಯಾದ ನಂತರ ಗುರುವು ಶರಣ ಶಿವಲಿಂಗೇಶ ನಿಗೆ ಕುವರ ಸದ್ಗುಣಕೋಶ ತಾಯಿಯ ಸೇವೆ ಮಾಡು, ಜಂಗಮಾರಾಧನೆ ಮಾಡು ಜೀವದಯಾಮಯಿಯಾಗಿರು. ಶಿವಭಕ್ತಿಯಾಚರಿಸು ಎಂದು ಹೇಳುವರು.

**ಸಂಧಿ ೮ :**

ಮದುವೆಯಾದರೂ ಶರಣ ಶಿವಲಿಂಗೇಶ ವಿರತಿಯನ್ನೇ ಆರಿಸಿಕೊಂಡ. ಜ್ಞಾನ ದಂಡವ ಹಿಡಿದು ಶಿವಯೋಗಿ ವೇಷ ಧರಿಸಿ ಶಿವಧ್ಯಾನದಲ್ಲಿ ತೊಡಗಿದ. ಅರಿಷಡ್ ವರ್ಗವನ್ನು ಜಯಿಸಿದ. ಭ್ರಮರಗಳು ಕುಸುಮವನ್ನರಸುವಂತೆ, ಗಿಳಿ-ಕೋಗಿಲೆಗಳು ಹಣ್ಣನ್ನರಸುವಂತೆ ಶರಣ ಶಿವಲಿಂಗೇಶ ಗಣಾರ್ಚನೆಯನ್ನರಸತೊಡಗಿದ.

ಅತ್ತೆ ಸುವರ್ಣಾಂಬೆ ಮೊದಮೊದಲು ಸೊಸೆ ಪವಳಾಂಬೆಯನ್ನು ಚೆನ್ನಾಗಿ ನೋಡಿಕೊಂಡಳು. ಬರಬರುತ್ತ ನೆರೆ-ಹೊರೆಯವರ ಮಾತು ಕೇಳಿ ಕಾಟ ಕೊಡಲಾರಂಭಿ ಸಿದಳು. ಸೋದರತ್ತೆ ವೀರಮಾಂಬೆ ಅಳಿಯ ಶರಣ ಶಿವಲಿಂಗೇಶನಿಗೆ ಸಂಸಾರ, ಗೃಹ ಕೃತ್ಯದ ಬಗ್ಗೆ ತಿಳಿ ಹೇಳಿದಳು. ಶರಣ ಶಿವಲಿಂಗೇಶ ಇದಕ್ಕೆ ಕಿವಿಗೊಡದೆ ವಚನ ಶಾಸ್ತ್ರ ವನ್ನು ಓದತೊಡಗಿದನು. ಸಂಸಾರದಲ್ಲಿನ ಆತನ ನಿರಾಸಕ್ತಿ ತಾಯಿಗೂ ಆಶ್ಚರ್ಯ ವನ್ನುಂಟುಮಾಡಿತು. ಮಗ ಪಂಡಿತನಂತೆ ವಚನ ಓದುವುದು, ಭಜನೆ ಮಾಡುವುದು, ಸೊಸೆಯೊಡನೆ ಸಂಸಾರ ಮಾಡದೆ ಇರುವುದು ತಾಯಿಗೆ ಚಿಂತೆಗೀಡು ಮಾಡಿತು. ಆಕೆ ಮಗನಿಗೆ, ನಿನ್ನ ಹೆಂಡತಿ ಸುಂದರಿ ಆಕೆಯೊಡನೆ ಸಂಸಾರ ಮಾಡು ಎನ್ನಲು, ಆತ ಈ ಹಾಳುಸಂಸಾರ ನನಗೇಕೆ? ಇದು ಅಸ್ಥಿರ ಎನ್ನುವನು. ಸನ್ಯಾಸಿಯಾಗುವ ಹುಚ್ಚು ನಿನಗೇಕೆ

ಮಗನೇ ? ಎನ್ನುವಳು. ಆದರೂ ಆತ ಕೇಳದೆ ಹೆಂಡತಿ ಪವಳಾಂಬೆಯನ್ನು ಕರೆದು ನೀನು ಶಿವ ಪದವನ್ನು ಸೇರು ಎಂದು ಆಶೀರ್ವದಿಸುವನು. ಅವಳಿಗೆ ವೀರಶೈವ ಬೋಧೆ ಮಾಡಿದ. ಅವಳೂ ಇಷ್ಟಲಿಂಗೋಪಾಸನೆಯಲ್ಲಿ ನಿರತಳಾದಳು.

**ಸಂಧಿ ೯ :**

ಶರಣ ಶಿವಲಿಂಗೇಶ ಭಜನೆ ಶಿವಧ್ಯಾನದಲ್ಲಿ ನಿರತನಾದ. ವಚನಗಳ ಗಾಢವಾದ ಅಧ್ಯಯನದಿಂದ ರಾಗ-ಮೋಹ-ಮಾಯೆ ಮಾಯವಾದುವು. ಶ್ರದ್ಧೆ ನಿಷ್ಠೆ ಸಾವಧಾನ ಶಾಂತಿ ನಿಶ್ಚಲಭಾವ ವಿರಕ್ತಿ ಶರಣ ಶಿವಲಿಂಗೇಶನಲ್ಲಿ ಬೆಳೆದುವು. ಅತ್ತೆ ವೀರಮಾಂಬೆ ಮುನಿಸಿನಿಂದ ಅಳಿಯನೇ ನೀನು ಈ ರೀತಿ ವರ್ತಿಸುವುದು ಪುರುಷ ಲಕ್ಷಣವಲ್ಲ. ಕೆಲಸ ಬಿಟ್ಟು ಕೆಲಸಕ್ಕೆ ಬಾರದ ಪೂಜೆ ಪುನಸ್ಕಾರಗಳಲ್ಲಿ ವ್ಯಯಮಾಡಬೇಡ. ಸಂಸಾರಿಯಾಗು, ದುಡಿ, ಗಳಿಸು. ಇದನ್ನು ಬಿಟ್ಟು ಲಿಂಗಪೂಜೆ ಮಾಡುತ್ತ ಕುಳಿತರೆ ಏನು ಗಳಿಕೆಯಾಗುತ್ತದೆ. ಲಿಂಗಕ್ಕೆ ನೀರೆರೆದರೆ ನೆನೆಯುದು, ಬಿಟ್ಟರೆ ಅದೇನು ಬಾಡಿಹೋಗದು. ಅದೇ ಹಿತ್ತಲ ದಲ್ಲಿನ ಬಾಳೆಗಿಡಕ್ಕೆ ನೀರೆರೆದರೆ ಫಲಕೊಡುತ್ತದೆ. ಸಾಕು ನಿಲ್ಲಿಸು ನಿನ್ನ ಲಿಂಗಪೂಜೆಯನು, ದುಡಿದು ತಾಯಿಗೆ ಹಾಕಿದೆಯಾದರೆ ಅವಳು ನಿನ್ನನ್ನು ನೆನೆಸುತ್ತಾಳೆ. ಆಕೆ ಕುಂಟಿ, ನೀನು ಘಂಟ, ನಿಮಗೆ ನಾನು ದುಡಿದು ಹಾಕಿ ಸಾಕಾಗಿದೆ. ನನ್ನ ಕಷ್ಟ ನಿನಗೇಕೆ ತಿಳಿಯದು ? ನೀನೇನು ಮೂಕನೋ ? ನಿನ್ನ ವಚನ ಶಾಸ್ತ್ರದ ಹೊತ್ತಿಗೆಯನ್ನೇ ಹರಿದು ಹಾಕುವೆ ಎನ್ನುತ್ತ ಅವನ್ನು ಹರಿಯುವಳು. ಆಗ ಶರಣ ಶಿವಲಿಂಗೇಶನು ಹರಿಯಬೇಡಮ್ಮ ನಿನಗೆ ಕೇಡಾಗುವುದು ಎಂದು ಎಚ್ಚರಿಸಿದರೂ ಆಕೆ ಕೇಳಲೇ ಇಲ್ಲ. ಹರಿದುಹಾಕಿ ನಗುವಳು. ಲಿಂಗಪೂಜೆ ಬೇಡವೆಂದು ಹಠ ಹಿಡಿಯುವಳು. ಬಿಡದಾಗಲು ಅಡ್ಡಿ ಪಡಿಸುವಳು. ಆತ ಪ್ರತಿಯಾಗಿ ಕೋಪಿಸದೆ ಅತ್ತೆ ನಿನಗೆ ಜೀವನದ ಕೊನೆಗಾಲದಲ್ಲಿ ಎಲ್ಲಾ ತಿಳಿಯುವುದು ಎಂದು ನಗುವನು. ಹೀಗಿರಲು ಒಂದು ದಿನ ಶರಣ ಶಿವಲಿಂಗೇಶನು ಲಿಂಗಪೂಜೆಯಲ್ಲಿ ನಿರತನಾದಾಗ ಅವಳು ಕೋಪಿಸುತ್ತ ಬರಲು, ಆ ಕೋಪವೇ ಜ್ವಾಲೆಯಾಗಿ ಆತನ ಸುತ್ತೆಲ್ಲ ಪ್ರಜ್ವಲಿಸಿ ಉರಿಯತೊಡಗುವುದು. ಆಗ ಆಕೆ ಬಾಯ್ಮಾಡಿ ಅಳತೊಡಗುವಳು. ಜನ ಬರುವರು. ಆಗ ಉರಿ ಮಾಯವಾಯ್ತು. ಶರಣ ಶಿವಲಿಂಗೇಶನ ಸುತ್ತ ಏನೂ ಇರದ್ದನ್ನು ಕಂಡು, ಏನು ವೀರಾಂಬೆ ಗಾಬರಿಗೊಳಿಸಿದೆ ಯಲ್ಲ ಎಂದು ಆಕೆಯನ್ನೇ ಬೈಯ್ದು ಹೋದರು. ಆಗ ಸುವರ್ಣಾಂಬೆ ಅವರಿಗೆ ವೀರಾಂಬೆಯ ಮಾತೇನು ಸುಳ್ಳಲ್ಲ, ನನ್ನ ಮಗನೇ ಕುಟಿಲ ವಿದ್ಯೆ ಕಲಿತು ಏನೇನೋ ಇಂಥ ಪ್ರಯೋಗ ಮಾಡ್ತಾ ಇರ್‍ತಾನೆ ಎಂದಳು. ಇದನ್ನು ಕೇಳಿ ಕೆಲವರು ಶರಣ ಶಿವಲಿಂಗೇಶನಿಗೆ ಡಂಭಾಚಾರಿಯೆಂದೂ, ಕುಟಿಲನೆಂದೂ, ಮುಗ್ಧನೆಂದೂ ಇನ್ನೂ ಕೆಲವರು ಈತನ ಪರಿ ನಮಗೇನೂ ತಿಳಿಯದೆಂದು ಆಡಿಕೊಳ್ಳತೊಡಗಿದರು. ವೀರಾಂಬೆ ತನ್ನದು ತಪ್ಪಾಯ್ತೆಂದು ಗಲ್ಲ ಗಲ್ಲ ಬಡಿದುಕೊಂಡಳು. ಇನ್ನೊಮ್ಮೆ ಲಿಂಗಪೂಜೆಗೆ

ಅಡ್ಡಿಪಡಿಸುವದಿಲ್ಲವೆಂದಳು. ತಾಯಿ ಸುವರ್ಣಾಂಬೆ ತನ್ನ ಮಗ ನಿಜವಾದ ಶಿವಯೋಗಿಯೆಂದರಿತಳು. ಇಬ್ಬರೂ ಶರಣ ಶಿವಲಿಂಗೇಶನಿಗೆ ತಪ್ಪಾಯ್ತೆಂದು ಮೊರೆಹೋಗಲು ಅವರ ತಪ್ಪನ್ನು ಮನ್ನಿಸಿ ಶರಣ ಶಿವಲಿಂಗೇಶ ಅವರಿಗೆ ಲಿಂಗಪೂಜೆಯ ಮಹತ್ವವನ್ನು ತಿಳಿಸುವನು. ಆದರೂ ವೀರಾಂಬೆ ಶರಣ ಶಿವಲಿಂಗೇಶರ ಶಾಪಕ್ಕೆ ತುತ್ತಾಗಿ ಮೂರು ಜನ್ಮಗಳನ್ನೆತ್ತಬೇಕಾಯಿತು.

**ಸಂಧಿ ೧೦ :**

ಸುವರ್ಣಾಂಬೆ ಶ್ರೀಗಿರಿ ಮಲ್ಲಿಕಾರ್ಜುನನಲ್ಲಿಗೆ ಹೋಗಿ ಗಣಾರಾಧನೆ ಮಾಡಿಸಿ ಬರುವ ಹರಕೆ ಹೊತ್ತಿದ್ದಳು. ಅದನ್ನು ಪೂರೈಸಿ ಬರಲು ಮಗನಿಗೆ ತಿಳಿಸಿದಳು. ಆಗ ಆತ ನೀ ಹೊತ್ತ ಹರಕೆಯನ್ನು ನೀನೆ ಮುಟ್ಟಿಸಿ ಬಾ ಎನ್ನಲು, ಆಕೆ ನನಗೆ ವಯಸ್ಸಾಗಿದೆ ಶಕ್ತಿಯಿಲ್ಲ ನೀನೇ ಹೋಗೆನ್ನುವಳು. ಆಗಲಿ ಎಂದು ಶರಣ ಶಿವಲಿಂಗೇಶ ಭಕ್ತರೊಡನೆ ಹೊರಟ. ಮಾರ್ಗದುದ್ದಕ್ಕೂ ಭಜನೆ, ಶರಣರ ವಚನದನುಸರಣೆ ಮಾಡುತ್ತ ಹೊರಟನು. ಎದುರಿಗೆ ಬಂದ ಒಬ್ಬ ಶರಣ ಇವರಿಗೆ ಶ್ರೀಶೈಲ ಮಹಿಮೆ ಹೇಳತೊಡಗಿದ. ಶ್ರೀಗಿರಿಯ ಮಹಿಮೆ ನಾಗಪತಿಗೆ ಅಸದಳ. ಮನು ಮುನೀಂದ್ರರಿಗಗೋಚರ. ನಂದಿ ಮಂಡಲದಲ್ಲಿ ಶಿಲಾದನೆಂಬ ಮುನಿ ಪುತ್ರನನ್ನು ಬಯಸಿ ಉಗ್ರ ತಪಸ್ಸನ್ನಾಚರಿಸಿದ. ಒಂದು ತಿಂಗಳು ಕಲ್ಲನ್ನೇ ತಿಂದು ತಪಸ್ಸು ಮಾಡಿದ್ದಕ್ಕೆ ಆತನಿಗೆ ಶಿಲಾದನೆಂಬ ಹೆಸರಾಯ್ತು. ಶಿವ ಆತನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ನಿನಗೆ ಏನು ಬೇಕು ಬೇಡೆನ್ನಲು, ಶಿಲಾದ ಮುನಿ ನಿತ್ಯ ಭಜಿಸುವ ಭಕ್ತ ಕುವರನನ್ನು ಕರುಣಿಸೆನ್ನುವನು. ಆಗಲಿ ಎಂದು ಶಿವ ಅದೃಶ್ಯನಾಗುವನು. ಇತ್ತ ಮುನಿಗೆ ಭಕ್ತಿ ಜ್ಞಾನ ವಿರತಿಗಳುದ ಮಕ್ಕಳಾದರು. ಇದಕ್ಕೆಂದು ನಂದಿಮಂಡಲವೆನ್ನುವರು. ಈ ಮಂಡಲ ಮಧ್ಯದಲ್ಲೇ ಶ್ರೀ ಮಲ್ಲಿಕಾರ್ಜುನ ನೆಲೆಸಿರುವನು.

ಈ ಪರ್ವತದಲ್ಲಿ ನಾಗಲೋಕದ ವೀರಭದ್ರನಿರುವನು. ನಂದಿಮುಖದಲ್ಲಿ ತೀರ್ಥ ಬರುತ್ತಿದೆ. ಮುಂದೆ ಹೊಸ ಕೆರೆಯಿದೆ. ಮಲ್ಲಿಕಾರ್ಜುನನ ದೇವಾಲಯದಲ್ಲಿ ನಂದಿ ರಾರಾಜಿಸುವನು. ದೇವಾಲಯದ ಗರ್ಭಗುಡಿಯಲ್ಲಿ ಲಿಂಗವಿದೆ. ಐವರು ಗುರುಗಳ ಮಠಗಳೂ ಇವೆ. ಪರತರ, ಸಾರಂಗ, ಘಂಟಾ, ಪರಮ, ಭಸಿತ – ಇವೇ ಐದು ಮಠಗಳು. ಎಲ್ಲಿ ನೋಡಿದಲ್ಲಿ ಲಿಂಗಗಳೇ. ಇಲ್ಲಿಯೇ ಸಿದ್ಧರಾಮರಿಗೆ ಶ್ರೀಶೈಲ ಮಲ್ಲಿಕಾರ್ಜುನ ದರ್ಶನವಿತ್ತ ಅಮರಿಕೊಳ್ಳವಿದೆ. ಏಳು ನದಿಗಳ ಸಂಗಮವೇ ಪಾತಾಳಗಂಗೆಯೆನಿಸಿ ಅಲ್ಲಿದ್ದ ಪಾಪಿಗಳ ಪಾಪ ತೊಳೆಯುತ್ತಿರುವಳು. ಪಾಪನಾಶಿನಿಯಲ್ಲಿ ಸ್ನಾನ ಮಾಡಿದವರು ಪರಿಶುದ್ಧರಾಗುವರೆಂಬ ನಂಬಿಕೆ ಇಂದಿಗೂ ಜನರಲ್ಲಿದೆ. ಕದಳಿವನ, ಬಿಲ್ವವನ, ಬಸವ ಸರೋವರ, ಮಹಾಸಿದ್ಧರ ಕೂಪಗಳು, ಹಾಟಕೇಶ್ವರ ಲಿಂಗ, ಜ್ಯೋತಿರ್ಲಿಂಗ ಮುಂತಾದ ತಾಣಗಳಿರುವವು. ಶರಣ ಶಿವಲಿಂಗೇಶ ಇವನ್ನೆಲ್ಲ

ನೋಡುತ್ತ ಹರ್ಷಿತನಾಗಿ ನಂದಿ ಮುಖಜಲ ಸೇವಿಸಿ ಹೊಸ ಕೆರೆಯನ್ನು ದಾಟಿ ಮುನ್ನಡೆದ. ನಂದಿಯನ್ನು, ಬಸವನನ್ನು ಸ್ತುತಿಸಿ ಮುಂದೆ ಹೋಗಲು ಗಣಪತಿ ಗುಡಿ, ವೀರೇಶಾಲಯಗಳನ್ನು ಕಂಡು ಹರ್ಷಿತನಾದ. ಹಾಗೆಯೇ ಮುನ್ನಡೆಯಲು ಮಲ್ಲಿಕಾರ್ಜುನನ ಗುಡಿಯ ಗೋಪುರವನ್ನು ಕಂಡನು. ತನ್ನೊಡನೆ ಬಂದ ಭಕ್ತರನ್ನು ಬಿಟ್ಟು ಶರಣ ಶಿವಲಿಂಗೇಶ ಒಬ್ಬನೇ ನಡೆದನು. ಅವರು ಈತನನ್ನು ಕಾಣದೇ ಹರ ಹರಾ ಶರಣ ಶಿವಲಿಂಗೇಶಾ ಎಲ್ಲಿ ಹೋದೆಯೆಂದು ಹಂಬಲಿಸಿದರು. ಕರೆದು ತೋರಯ್ಯ ಮಲ್ಲಯ್ಯ ಎಂದು ಬೇಡಿಕೊಂಡರು. ಗುಡಿಯ ಎದುರಿಗೆ ಕುಳಿತರು. ಇತ್ತ ಶರಣ ಶಿವಲಿಂಗೇಶ ಗುಡಿಯ ಹಿಂಬದಿಯಲ್ಲಿ ಸ್ನಾನಮಾಡಿ ಶಿವಲಿಂಗ ಪೂಜೆಗೆಂದು ಒಂದು ಪತ್ರಿಗಿಡದ ಕೆಳಗೆ ಕುಳಿತ. ಪೂಜೆ ಮುಗಿಸಿ ಮೇಲೆ ನೋಡಲು ಗಿಡದ ಟೊಂಗೆಗೆ ಬುತ್ತಿ ಜೋತಾಡುತ್ತಿರುವುದನ್ನು ಕಂಡ. ಆಗ ಸಂತೋಷಗೊಳ್ಳಲು "ತೆಗೆದುಕೋ" ಎಂಬ ಧ್ವನಿಯಾಯ್ತು. ಆಗ ಅದನ್ನು ತೆಗೆದುಕೊಂಡ. ಅಷ್ಟರಲ್ಲಿ ಶಿವ ಬೇಡನ ವೇಷದಲ್ಲಿ ಬಂದು ದಾರಿ ತೋರುತ್ತ ಶರಣ ಶಿವಲಿಂಗೇಶನನ್ನು ಆತನ ಪರಸೆಯಿದ್ದೆಡೆಗೆ ಕರೆದೊಯ್ದ. ಅವರೆಲ್ಲ ಶರಣ ಶಿವಲಿಂಗೇಶಾ ನೀ ದೇವರಲ್ಲದೆ ಮತ್ತಾರೂ ಅಲ್ಲವೆಂದು ಕೊಂಡಾಡಿದರು. ಆಗ ಶರಣ ಶಿವಲಿಂಗೇಶ ನಡೆದುದೆಲ್ಲವನ್ನು ವಿವರಿಸಿದ. ಅವರೆಲ್ಲ ಸ್ನಾನಮಾಡಿ ಮಲ್ಲಿಕಾರ್ಜುನನಿಗೆ ನಮಿಸಿ ಪ್ರಸಾದ ಸೇವಿಸಿದರು.

ಒಬ್ಬ ಶ್ರೀಮಂತ ಶರಣ ಶಿವಲಿಂಗೇಶ ಇಳಿದುಕೊಂಡಲ್ಲಿ ಇಳಿದುಕೊಂಡಿದ್ದ. ಆತ ಹಗಲು ಹೊತ್ತು ಜಂಗಮರನ್ನು ತೃಪ್ತಿಪಡಿಸಿ ಮಲಗಿದ್ದ. ಮಧ್ಯರಾತ್ರಿಯಲ್ಲಿ ಹತ್ತು ಜಂಗಮರು ಬಂದು ನಾವು ಹಸಿದಿದ್ದೇವೆ ಪ್ರಸಾದ ನೀಡೆನ್ನುವರು. ಆಗ ಆತ ಎದ್ದು ಈಗೆಲ್ಲಿ ಪ್ರಸಾದ ಎಲ್ಲ ಮುಗಿದಿದೆ ಎನ್ನುವನು. ಇದನ್ನು ಕೇಳಿ ಶರಣಶಿವಲಿಂಗೇಶನು ಆಯಿತೆನ್ನದಿರು ಶಿವಭಕ್ತರಿಗೆ, ಕರೆ ಅವರನ್ನು ಎಂದು ಕರೆಸಿ ಕೂಡ್ರಿಸಿದನು. ಆ ಹೊತ್ತಿನಲ್ಲೇ ಹೋಳಿಗೆ, ಅನ್ನ ಬುಟ್ಟಿ ಬುಟ್ಟಿಯಲ್ಲಿ ತಂದು ಅವರನ್ನು ತೃಪ್ತಿಪಡಿಸಿದ. ಶೆಟ್ಟರೇ, ಶ್ರೀಮಂತರೇ ಭಯವೇಕೆ ಭಕ್ತರ ಬಂಧು ಮಲ್ಲಿಕಾರ್ಜುನನಿರಲು ಎನ್ನುವನು. ಬೆಳಿಗ್ಗೆ ಶರಣ ಶಿವಲಿಂಗೇಶ ಮತ್ತು ಸಿದ್ರಾಮಪ್ಪ ಬಹಿರ್ದೆಸೆಗೆ ಹೊರಗೆ ಹೋಗಲು ಸಿದ್ರಾಮಪ್ಪನೆದುರು ಒಂದು ಹುಲಿ ಬಂತು. ಶಿವಲಿಂಗೇಶನು ಓಡಿ ಬಂದು ಹುಲಿಯ ಮೈದಡವಲು ಅದು ಮೋರೆ ಕೆಳಗೆ ಹಾಕಿ ಬೆಟ್ಟದತ್ತ ಓಡಿತು. ಶರಣ ಶಿವಲಿಂಗೇಶ ಎಲ್ಲರೊಡನೆ ಊರಿಗೆ ಹಿಂತಿರುಗಿದ.

**ಸಂಧಿ ೧೧ :**

ಶ್ರೀ ಗಿರಿಯನ್ನು ಕಂಡು ಬಂದ ಶರಣ ಶಿವಲಿಂಗೇಶ ತಾಯಿಗೆ ನಮಿಸಿ ಸವಿಸ್ತಾರವಾಗಿ ತಾನು ನೋಡಿದುದನ್ನೆಲ್ಲ ತಿಳಿಸಿದ. ದೇವರ ಕಳಿಸುವ ಪ್ರಸ್ತದ ಸಿದ್ಧತೆ ಮಾಡಿದ. ಪಾಯಸ ಮಾಡಲು ಜಳಕೋಟೆ ಮಲಕಣ್ಣನಿಗೆ ತಿಳಿಸಿದ. ಆತ ಪಾಯಸ ಮಾಡತೊಡ

ಗಿದಾಗ ಶಿವಪ್ಪ ಸಾಧು ಅಲ್ಲಿಗೆ ಬಂದ. ಬರಲು ಮಲಕಣ್ಣ ಕೈಯಲ್ಲಿ ಸಟ್ಟುಗ ಹಿಡಿದು ನಿನಗೆ ಯಾರು ಇಲ್ಲಿಗೆ ಬರಲು ಹೇಳಿದರು? ನಿನಗೆಲ್ಲಿ ಅನ್ನ ಸಿಗಲಿಲ್ಲವೇ? ನೋಡು ಕೈಯಲ್ಲಿನ ಹುಟ್ಟನ್ನು ಎಂದ. ಆಗ ಆ ಸಾಧು, ಮಲಕಣ್ಣ ನಮ್ಮ ಕೂಡ ಅಣಕ ಮಾಡ ಬೇಡ ಎಂದಾಗ ಮಲಕಣ್ಣ ದನ ಸತ್ತಾಗ ಹದ್ದುಗಳು ಹೇಗೆ ಬಂದು ಎರಗುವವೋ ಹಾಗೆ ನೀವು ಎಲ್ಲೆಲ್ಲಿ ಅಡಿಗೆ ಸಿದ್ಧವಾಗಿರುತ್ತದೋ ಅಲ್ಲಿಗೆ ಧಾವಿಸಿ ಬರುವಿರಿ. ದುಡಿದು ತಿನ್ನಲಿಕ್ಕೇನಾಗಿದೆ. ನೊಣಗಳಂತೆ ಮುಸುರಿಗೆ ಮುತ್ತುವುದೇ ನಿಮಗೆ ಗೊತ್ತು, ನಿಮ್ಮಲ್ಲೇ ನಿದೆ ಸತ್ವ. ಅಂಥ ಸತ್ವವೇನಾದರೂ ಇದ್ದರೆ ಕುದಿಯುತ್ತಿರುವ ಈ ಪಾಯಸದಲ್ಲಿ ಕೈಹಾಕಿ ಬೆಲ್ಲವನ್ನು ಬೆರೆಸು ನೋಡುವಾ ಎನ್ನುವನು. ಆಗ ಆ ಸಾಧುವು ಮಲಕಣ್ಣನೇ ನನ್ನನ್ನು ಕೆದಕಬೇಡ ಹಿಂದೆ ಬಿಜ್ಜಳ ರೇವಣಸಿದ್ಧನಿಗೆ ಕುದಿವ ಪಾಯಸ ನೀಡಿಸಲು ಆತನ ಅರಮನೆಯೇ ಉರಿದುಹೊಯ್ತು. ನನ್ನೊಡನೆ ಜಿದ್ದಿಗೆ ಬಿದ್ದು ಕೆಡಬೇಡ ಎಂದರೂ ಮಲಕಣ್ಣ ಕೇಳದೆ ನಿಂದಿಸತೊಡಗಿದ. ಇಂಥ ಅನೇಕ ಸಾಧುಗಳನ್ನು ನಾನು ಕಂಡಿದ್ದೇನೆ ಎನ್ನಲು ಶಿವಪ್ಪ ಸಾಧು ಗುಡುಗುಡಿಸುತ್ತ ತೋಳೇರಿಸಿ ಕುದಿವ ಪಾಯಸ ದಲ್ಲಿ ಕೈಹಾಕಿ ಬೆಲ್ಲವನ್ನು ಬೆರೆಸುವನು. ವೀರಕೋಲಾಹಳಗೈಯುತ್ತ ಮಲ್ಯಾ ಸತ್ಯಾನಾಶಾಗಿ ಹೋಗೆಂದು ಶಾಪ ಹಾಕುವನು ಸಾಧು. ಸಾಧು ಕುಣಿಯತೊಡಗಿದ. ಶರಣ ಶಿವಲಿಂಗೇಶ ಅಲ್ಲಿಗೆ ಬಂದು ಆ ಸಾಧುವನ್ನು ಹೆಗಲಮೇಲೆ ಹೊತ್ತುಕೊಂಡು ತಮ್ಮ ಪೂಜಾ ಕೋಣೆಗೆ ಕರೆತಂದು ಆತನ ಕೈಯನ್ನು ತೊಳೆಯುವನು. ಆತನ ಕೈಗೆ ಏನೂ ಆಗಿರಲಿಲ್ಲ. ಆಗ ಸಾಧು, ಮಲ್ಯಾ ನೋಡು ಸಾಧು ಮಹಿಮೆಯನ್ನು ಎಂದು ಚೀರತೊಡಗುವನು. ಮಲಕಣ್ಣ ಬಂದು ತನ್ನದು ತಪ್ಪಾಯ್ತೆಂದು ಕ್ಷಮೆ ಯಾಚಿಸಿದನು. ಸಾಧು ಆತನ ತಪ್ಪನ್ನು ಮನ್ನಿಸಿದರೂ ಆತನ ವಂಶಜರಿಗೆ ಸುಟ್ಟ ಗುರುತು ಆಗುವುದು ತಪ್ಪಲಿಲ್ಲ. ಈಗಲೂ ಆತನ ವಂಶಜರ ಮೈಮೇಲೆ ಗುಳ್ಳೆಗಳೇಳುವವು. ಇದು ಸಂತ ಜನ ಶಾಪವಲ್ಲದೆ ಇನ್ನೇನು. ಒಂದು ದಿನ ಶರಣ ಶಿವಲಿಂಗೇಶ ಲಿಂಗಪೂಜೆ ಮುಗಿಸಿ ಕೊಂಡು ರಾತ್ರಿ ಮಲಗಿರಲು ಆತನ ಕನಸಿನಲ್ಲಿ ಚಾಂಗ್ಲೇರಿ ಗುರುಲಿಂಗಾಖ್ಯಸ್ವಾಮಿಗಳು ಬಂದು, ಶಿವಲಿಂಗಾ ನಿನ್ನ ಮನದಭೀಷ್ಟವೇನೆನ್ನುತ್ತ ಅದೃಶ್ಯರಾಗುವರು. ಇನ್ನೊಂದು ದಿನ ಅವರು ಸಾಧುಗಳ ವೇಷದಲ್ಲಿ ಬಂದು ಏನೈ ಶರಣ ಶಿವಲಿಂಗ, ಸಾಧಕನು ನೀನಿದ್ದು ಷಟ್‌ಸ್ಥಲದ ಹಾದಿಯಲ್ಲಿ ನಡೆ ಎಂದು ಎಚ್ಚರಿಸಬಂದಿದ್ದೆ ಅದನ್ನು ಮರೆತು ಹೀಗೆ ಕೊಡುವುದೆ ಎನ್ನಲು, ಶರಣ ಶಿವಲಿಂಗನು ಗಾಬರಿಯಾಗಿ ಗುರುಗಳ ಪಾದಕ್ಕೆರಗಿ ನಾನು ಕಿರಿಯ, ಮೂಢ ಗುಣಹೀನ ನನ್ನನ್ನು ಸಲಹಿರಿ, ನನ್ನನ್ನು ಎಚ್ಚರಿಸಿದಿರಿ ಎಂದು ಚಾಂಗ್ಲೇರಿ ಗುರುಗಳಿಗೆ ನಮಸ್ಕರಿಸಲು ಅವರು ಕೈಹಿಡಿದೆತ್ತಿ ಆಶೀರ್ವದಿಸುವರು. ಷಟ್‌ಸ್ಥಲ ಮಾರ್ಗ ಬೋಧಿಸುವರು. ಅಂಗ–ಲಿಂಗ ಒಂದೇ. ಅಂಗವೇ ಲಿಂಗಮಯ ವಾಗುವುದು. ಹೀಗಾಗಿಸಿಕೊಳ್ಳಲು ಸಾಧನೆ ಮಾಡಬೇಕು. ಯೋಗಾಂಗ, ತ್ಯಾಗಾಂಗ, ಭೋಗಾಂಗಗಳನ್ನು ಪರಿಚಯಿಸುವರು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗ,

ಶರಣ–ಐಕ್ಯ ಇವಾರು ಷಟ್‌ಸ್ಥಲಗಳು. ಗುರು ಕೊಟ್ಟ ಜ್ಯೋತಿರ್ಲಿಂಗವೇ ನೀನೆಂದರಿತು ಆಚರಿಸಿದಾಗ ನೀನೇ ಶಿವನಾಗುವಿಯೆಂದು ಬೋಧಿಸುವರು. ಚಾಂಗ್ಲೇರಿ ಗುರುಗಳು ಹೇಳಿದಂತೆ ನಡೆದು ತೋರಿಸಿದರು. ಜಂಗಮ ತೃಪ್ತಿಪಡಿಸುವುದು ಕೆಲದಿನಗಳ ನಂತರ ಹಣದ ಕೊರತೆಯಿಂದ ಆಗದಾಗಲು ಸಾಲವನ್ನೂ ಮಾಡಿದರು. ಸಾಲಮಾಡಿ ಜಂಗಮ ರಿಗೆ ಚಿನ್ನ, ಬೆಳ್ಳಿ, ಕರಡಿಗೆ, ಶಿವಪೂಜಾ ಸಾಮಗ್ರಿ ಮುಂತಾದವುಗಳನ್ನಿತ್ತರು. ಕೆಲ ದಿನಗಳ ನಂತರ ಚಾಂಗ್ಲೇರಿ ಗುರುಗಳು ಶರಣ ಶಿವಲಿಂಗೇಶನನ್ನು ಕರೆದು ಮಗನೇ ಸಾವಿಸ್ನು ಹೋಗುವೆವು. ಈ ಕಾರ್ಯವನ್ನು ನೀನು ಮುಂದುವರಿಸೆಂದು ಹೇಳಿ ಹೋಗುವರು. ಚಾಂಗ್ಲೇರಿ ಗುರುಗಳು ಹೋದ ನಂತರ ಅವರಿಗೆ ಸಾಲಕೊಟ್ಟವರು ಶರಣ ಶಿವಲಿಂಗೇಶನ ಬಳಿ ಬಂದು ಧನ, ಕನಕ, ಬೆಳ್ಳಿ ಎಲ್ಲವನ್ನೂ ತಿರುಗಿ ಕೊಡೆಂದು ಕೇಳುವರು. ಆಗ ಶರಣ ಶಿವಲಿಂಗೇಶ ನೀವು ಸಾಲ ಕೊಟ್ಟದ್ದು ಸುಳ್ಳಲ್ಲ ತಡೆಯಿರಿ ಎಂದು ಆರಳುಗುಂಡಿಗೆಯ ಶರಣ ಬಸವರಿಗೆ ಈ ವಿಷಯ ತಿಳಿಸಲು ಅವರು ಬಂದು ಆ ಸಾಲವನ್ನು ತೀರಿಸುವರು.

ಸಂಧಿ ೧೨ :

ಶರಣ ಶಿವಲಿಂಗೇಶರ ಕೀರ್ತಿ ಪಸರಿಸಲು ಭಕ್ತ ಸಮೂಹ ಅವರತ್ತ ಧಾವಿಸಿ ಬರತೊಡಗಿತು. ಚಿಮ್ಮಡದ ಅಲ್ಲಪ್ಪನೆಂಬೊಬ್ಬ ಕಾಡಸಿದ್ಧೇಶ್ವರರ ಭಕ್ತ. ಗುರುಗಳು ಲಿಂಗೈಕ್ಯರಾಗಲು ಈತ ಬಹು ದುಃಖಿತನಾಗಿ ಕಾಡುಮೇಡು ಅಲೆಯುವನು. ತನ್ನ ನ್ನಾರು ಕಾಪಾಡುವರೆಂದು ಹಲುಬುವನು. ಒಂದು ದಿನ ಈತನ ಕನಸಿನಲ್ಲಿ ಕಾಡ ಸಿದ್ಧೇಶ್ವರರು ಬಂದು, ಭಕ್ತಾ ಚಿಂತಿಸಬೇಡ ಮೊಗಲಾಯಿ ಪ್ರಾಂತದಲ್ಲಿ ಶರಣ ಶಿವಲಿಂಗೇಶ ನಿರುವನು. ನೀನಲ್ಲಿಗೆ ಹೋದೆಯಾದರೆ ಅಲ್ಲಿ ನಿನ್ನ ಇಷ್ಟಾರ್ಥ ಸಿದ್ಧಿಸುವವು ಎನ್ನುವನು. ಅಲ್ಲಪ್ಪ ಹಾಗೆಯೇ ಮಾಡಿದ. ಭೀಮಾನದಿಯ ಸಮೀಪದ ಮಣ್ಣೂರಿಗೆ ಬಂದು ಅಲ್ಲಪ್ಪ ಒಬ್ಬ ಓರಿಯನನ್ನು ಕರೆದು ಮೊಗಲಾಯಿ ಇನ್ನೆಷ್ಟು ದೂರವಿದೆಯೆಂದು ಕೇಳುವನು. ದೂರವಿಲ್ಲ ಆದರಾಚೆ ಇದೆ ಎನ್ನಲು, ಅಲ್ಲಪ್ಪ ಅಲ್ಲಿಂದ ಮಾಶ್ಯಾಳಕ್ಕೆ ಬಂದ. ಅಲ್ಲಿ ಶರಣ ಶಿವಲಿಂಗೇಶ್ವರರ ಬಗ್ಗೆ ವಿಚಾರಿಸಲು, ಅಲ್ಲೊಬ್ಬ ಹಿಪ್ಪರಗಿಯಲ್ಲಿ ರುವರೆಂದು ತಿಳಿಸುತ್ತ ಆ ಊರು ಇನ್ನೇನು ದೂರವಿಲ್ಲ ಇಂದು ಸಂಜೆ ನೀನಲ್ಲಿಗೆ ಹೋಗುವಿ ಎಂದ. ಈತ ಬರಲು ದಾರಿಯಲ್ಲಿ ಕತ್ತಲಾಗುವುದು. ಅಲ್ಲೇ ದಾರಿಯಲ್ಲಿ ಕೂಡ್ರುವನು. ಇದು ಶರಣ ಶಿವಲಿಂಗೇಶ್ವರರಿಗೆ ಹೊಳೆಯುವುದು. ಅವರೇ ಭಕ್ತನಿಗೆ ದಾರಿ ತೋರಿಸಲು ಬರಲು, ಅಲ್ಲಪ್ಪ ಅವರಿಗೆ ನಮಸ್ಕರಿಸಿ ಅವರೊಂದಿಗೆ ಬರುವನು.

ಮಸಳಿ ಗ್ರಾಮದ ಶೈವ ಬ್ರಾಹ್ಮಣನ ಶಿಷ್ಯ ಮಲ್ಲಪ್ಪನ ತಂಗಿ ಭೀಮಾಂಬೆಯೆಂಬು ವವಳು ನವಮಾಸದ ಗರ್ಭಿಣಿಯಾಗಿದ್ದರೂ ಅವಳಿಗೆ ಹೆರಿಗೆಯೇ ಆಗಿರಲಿಲ್ಲ. ಮುಂದೆ ಮೂರು ವರ್ಷ ಕಳೆದರೂ ಹೆರಿಗೆಯಾಗದ್ದರಿಂದ ಎಲ್ಲರೂ ಚಿಂತಾಕ್ರಾಂತರಾದರು

ಮಲ್ಲಪ್ಪನ ಗುರುವಿನ ಕನಸಿನಲ್ಲಿ ಯಾರೋ ಬಂದು ಇದನ್ನು ಶರಣ ಶಿವಲಿಂಗೇಶರು ಪರಿಹರಿಸುವರು ಎಂದಂತಾಯ್ತು. ಆತ ಮಲ್ಲಪ್ಪನನ್ನು ಕರೆಸಿ ಈ ವಿಷಯ ತಿಳಿಸಿದ. ಆ ಕ್ಷಣವೇ ಮಲ್ಲಪ್ಪ ತನ್ನ ತಂಗಿಯನ್ನು ಚಕ್ಕಡಿಯಲ್ಲಿ ಕೂಡ್ರಿಸಿಕೊಂಡು ಮಾದನ ಹಿಪ್ಪರಗಿಯತ್ತ ಹೊರಟ. ದಾರಿಯಲ್ಲಿ ಕತ್ತಲಾಯ್ತು. ಗಾಡಿ ಕೆಸರಲ್ಲಿ ಸಿಕ್ಕಿಕೊಂಡುದುದ ರಿಂದ ಎಷ್ಟು ಪ್ರಯತ್ನಿಸಿದರೂ ಹುಗಿದ ಗಾಲಿ ಮೇಲೆ ಬರಲೇ ಇಲ್ಲ. ಆಗ ಮಲ್ಲಪ್ಪ ಶರಣ ಶಿವಲಿಂಗೇಶರನ್ನು ಸ್ಮರಿಸಿದ. ಅವರು ಕೆಲ ಶಿಷ್ಯರನ್ನು ಕರೆಯಲು ಕಳಿಸಿದರು. ಮಲ್ಲಪ್ಪ ಬರಲು ಶರಣ ಶಿವಲಿಂಗೇಶರು ಆತನ ಕುಶಲ ವಿಚಾರಿಸಿದರು. ಮಲ್ಲಪ್ಪನ ತಂಗಿ ಶರಣ ಶಿವಲಿಂಗೇಶ್ವರರಿಗೆ ನಮಿಸಲು ಅವರು ಅವಳಿಗೆ ಆಶೀರ್ವಾದ ಮಾಡುತ್ತ ನೀನು ಪುತ್ರನ ತಾಯಿಯಾಗುವಿ ಎಂದರು. ಆ ಪ್ರಕಾರ ಅವಳು ಗಂಡುಮಗುವೊಂದಕ್ಕೆ ಜನ್ಮ ನೀಡುವಳು. ಆ ಮಗುವಿಗೆ ಶಿವಲಿಂಗೇಶ ಎಂದು ಹೆಸರಿಟ್ಟು ಗುರುವನ್ನು ಕೊಂಡಾಡುವರು.

**ಸಂಧಿ ೧೩ :**

ಶರಣ ಶಿವಲಿಂಗೇಶರು ಬರಗಾಲದಲ್ಲಿ ಕಾಯಕ ನೇಮ ನಡೆಸುತ್ತ ಜಂಗಮರನ್ನು ತೃಪ್ತಿಪಡಿಸುವರು. ಜಂಗಮರಿಗೆ ಪ್ರತಿದಿನವೂ ಪ್ರಸಾದ ಸಂತರ್ಪಣೆಯನ್ನು ನಡೆಸುವರು.

ಒಂದು ದಿವಸ ಜಂಗಮನೊಬ್ಬ ಅವರ ಮನೆಗೆ ಬಂದನು. ಅವರ ಪಾಲಿನ ಭಕ್ಕರಿ ಸೇವಿಸಿ ನುಚ್ಚಿದೆಯಾ ಎಂದು ಕೇಳಿದ. ಸುವರ್ಣಾಂಬೆ ಇಲ್ಲೆನ್ನಲು ಕಲ್ಲಪಾಯಸ ಇದೆ ಯಲ್ಲಾ ಅದನ್ನೇ ಕೊಡಿ ಎನ್ನಲು ಅದು ಎಂಜಲಾಗಿದೆ ಎನ್ನುವರು. ಆದರೂ ಆತ ಕೇಳದಾದಾಗ ಅದನ್ನು ನೀಡುವರು. ತೃಪ್ತಿಪಟ್ಟು ಹೋಗುವಾಗ, 'ನಾನಾರು ಗೊತ್ತೇ' ಎಂದು ಕೇಳಲು ಶರಣ ಶಿವಲಿಂಗೇಶ 'ನೀ ಶಿವನಲ್ಲವೇ' ಎಂದರು. ಅದೇ ಜಂಗಮ ವೇಷದಲ್ಲಿ ಆತ ಅಮೃತರಾಯಗೌಡನ ಮನೆಗೆ ಬಂದ. ಅಲ್ಲಿ ಭವತಿ ಭಿಕ್ಷಾಂದೇಹಿ ಎನ್ನಲು ಗೌಡ ಹೊರಗೆದ್ದು ಬಂದು ಪ್ರಸಾದ ಸಿದ್ಧವಾಗಿದೆ ಸ್ವೀಕರಿಸಿ ಎನ್ನುವನು. ಆಗ ಆತ ಮಗ, ಮಗಳನ್ನು ಬಿಟ್ಟು ಹೇಗೆ ಸ್ವೀಕರಿಸಲಿ ಎನ್ನಲು, ಎಲ್ಲಿದ್ದಾರೆ ಅವರನ್ನೂ ಕರೆಸೋಣ ಎನ್ನುವನು. ಆಗ ಆತ ಇಲ್ಲೇ ಶರಣ ಶಿವಲಿಂಗಪ್ಪನ ಮನೆಯಲ್ಲಿದ್ದಾರೆಂದು ಅಲ್ಲಿಗೇ ಪ್ರಸಾದ ಕಳಿಸಿ ಕೊಡಲು ತಿಳಿಸಿದ. ಸುವರ್ಣಾಂಬೆ ಪ್ರಸಾದ ಸ್ವೀಕರಿಸಿ ನಾವು ಭಕ್ಕರಿ ಪ್ರಸಾದ ನೀಡಿದ್ದಕ್ಕೆ ದೇವರು ಇಂಥ ಪ್ರಸಾದ ಕಳಿಸಿದನೆನ್ನಲು ಶರಣ ಶಿವಲಿಂಗೇಶ ಇದನ್ನುಣ್ಣುವ ಭಕ್ತರು ಬೇರಿದ್ದಾರೆ ಎನ್ನುತ್ತ ಮ್ಯಾಂದರಗಿಯಿಂದ ಬಂದ ಭಕ್ತರಿಗೆ ಆ ಪ್ರಸಾದ ನೀಡಿ ತೃಪ್ತಿಪಡಿಸಿದರು. ಅಮೃತಗೌಡರಿಗೆ ಅನಂತರ ಪ್ರಸಾದ ಸ್ವೀಕರಿಸಿದವ ಶಿವನೇ ಎಂಬುದು ತಿಳಿಯಿತು. ಅದನ್ನು ಶರಣ ಶಿವಲಿಂಗೇಶರಿಗೆ ತಿಳಿಸುತ್ತ ನೀವು ಪುನೀತರಾದಿರಿ ಎಂದು ಹೇಳಿದ.

ಚರನೊಬ್ಬ ಮಠದಲ್ಲಿಳಿದು ಪ್ರಸಾದ ಸೇವಿಸಿ ಹೋಗುವಾಗ ಬಸವನ ಹಣೆಯ ಮೇಲಿನ ಆರಳೆಲೆಯನ್ನು ಕದಿಯುವನು. ಮರುದಿನ ಬೆಳಿಗ್ಗೆ ಆತ ಬೇಗನೇ ಹೋಗಲಣಿಯಾದಾಗ ಶರಣ ಶಿವಲಿಂಗೇಶ ಇಷ್ಟೇಕೆ ಅವಸರ ಇನ್ನೆರಡು ದಿನ ಇರ್ರಿ ಎಂದರೂ ಬೇಡ ಬೇಡ ಎಂದು ಹೋಗಿಯೇ ಬಿಟ್ಟ. ಆತ ಹೋದ ಮೇಲೆ ಆರಳೆಲೆ ಹೋದುದನ್ನು ಅರ್ಚಕ ಶರಣ ಶಿವಲಿಂಗೇಶರಿಗೆ ತಿಳಿಸಿದ. ಅದು ದೇವರದು ದೇವರಿಗೇ ಸಂದಿದೆ ಬಿಡು ಎಂದರು. ಜನರೆಲ್ಲ ಆ ಜಂಗಮನನ್ನು ಥಳಿಸಿ ತರುವೆವೆಂದರು. ಚಿನ್ನಣ್ಣನೆಂಬುವವ ಆ ಜಂಗಮನನ್ನು ಹಿಡಿತರಲು ಹೊರಟಾಗ ಶರಣ ಶಿವಲಿಂಗೇಶರೇ ಬೇಡವೆಂದು ಬಿಡಿಸಿದರು.

ಒಂದು ದಿನ ಶರಣ ಶಿವಲಿಂಗೇಶರು ಉಳವಿ ಯಾತ್ರೆಗೆ ಹೋಗಬೇಕೆಂದು ಹೊರಟರು. ಅವರ ಹಿಂದೆ ಒಬ್ಬ ಕಟುಕ ಕರುವನ್ನು ತರುತ್ತಿದ್ದುದನ್ನು ಕಂಡು ಅದನ್ನುಳಿಸಿಕೊಂಡರೆ ಉಳವಿಗೆ ಹೋಗುವದಕ್ಕಿಂತ ಮಿಗಿಲೆಂದು ಭಾವಿಸಿ ಆ ಕರುವನ್ನು ಕ್ರಯಕ್ಕೆ ತೆಗೆದುಕೊಳ್ಳುವರು. ಆ ಕಟುಕನಿಗೆ ಕೆಡುಕೆನಿಸಿತು. ತಾನು ಮಾಡಿದ್ದು ಸರಿಯಲ್ಲವೆಂದು ಭಾವಿಸಿ ಆ ಕ್ರಯವನ್ನೂ ಅವರಿಗೆ ತಿರುಗಿ ಕೊಟ್ಟು ನಮಸ್ಕರಿಸಿ ಹೋದ.

ಒಮ್ಮೆ ಒಬ್ಬ ಜಂಗಮ ಬಂದು ಶರಣ ಶಿವಲಿಂಗೇಶರು ಉಡುವ ಕೌಪೀನ ಬೇಡಲು, ಅದರಲ್ಲೇ ಅರ್ಧ ಹರಿದು ಆತನಿಗೆ ಕೊಟ್ಟರು. ತಾಯಿ 'ಮಗನೇ ನೀನೇನು ಡುವಿ ಇನ್ನೊಂದನ್ನಾದರೂ ನೇಯು' ಎನ್ನುವಳು. ಶರಣ ಶಿವಲಿಂಗೇಶರು ಮಗ್ಗದ ಮೇಲೆ ಕುಳಿತು ಶಿವಧ್ಯಾನಾಸಕ್ತರಾದರು. ತಾಯಿ ಈತ ಕಣ್ಣು ಮುಚ್ಚಿ ಕೂತುದನ್ನು ಕಂಡು ಕೆನ್ನೆಗೆ ಥಳಿಸಿದಳು. ಏನು ಹುಚ್ಚ ನೀನು, ಹೀಗಾದರೆ ಹೇಗೆ ಸಂಸಾರ ಮಾಡುವಿ ಎನ್ನುವಳು. ಮರುದಿನ ಎರಡು ಬಟ್ಟೆ ನೇಯ್ದು ತಾಯಿಗೆ ತೋರಿಸುವರು. ತಾಯಿ ಕಂದಾ ನಿನ್ನನ್ನು ಸುಮ್ಮನೆ ಹೊಡೆದೆನೆನ್ನುವಳು. ತಾಯಿ ನೀನು ನನ್ನನ್ನು ಹೊಡೆದು ಎಚ್ಚರಿಸಿದ್ದರಿಂದಲೇ ಎರಡು ಬಟ್ಟೆ ನೇಯುವ ಶಕ್ತಿ ಬಂತು ಎನ್ನುವರು.

**ಸಂಧಿ ೧೪ :**

ಶರಣ ಶಿವಲಿಂಗೇಶ್ವರರ ಶಾಪದಿಂದ ಅತ್ತೆ ವೀರಮಾಂಬೆ ಹರಿಣಿಯಾಗಿ ಅಡವಿಯಲ್ಲಿರಲು ಭಕ್ತನೋರ್ವ ಅದನ್ನು ಮನೆಗೆ ತರುವನು. ಆತನ ತಂದೆ ಇದು ನಮಗೇಕೆ ಬೇಡೆನ್ನಲು ಅದನ್ನಾತ ಮಠಕ್ಕೆ ತಂದೊಪ್ಪಿಸಿದ. ಶರಣ ಶಿವಲಿಂಗೇಶರು ತನ್ನ ತಾಯಿಗೆ ವೀರಮ್ಮ ಈ ರೂಪದಲ್ಲಿ ಬಂದಿದ್ದಾಳೆ ಎನ್ನಲು, ಸತ್ತವಳು ಹೇಗೆ ಬರುತ್ತಾಳೆ ಹೇಳೆನ್ನುವಳು. ಎರಳೆ ಜನ್ಮ ತೊಟ್ಟು ತನಗರಿಯದೇ ಹೀಗೆ ಬಂದಿರುವಳು ಎನ್ನುವರು. ಅವರು ಅದನ್ನು ಸಲಹುವರು. ಒಂದು ದಿನ ನಾಯಿಗಳು ಆ ಎರಳೆಯನ್ನು ಕಚ್ಚಿ ಕೊಂದವು. ಅದನ್ನು ಶರಣರ ಬಳಿ ತರಲು ಅದನ್ನು ತೊಳೆದು ಸಂಸ್ಕಾರ ಮಾಡಿ, ಇನ್ನಿದು ವಡ್ಡರ ಮನೆಯಲ್ಲಿ ಜನಿಸುವುದೆಂದರು.

ಒಮ್ಮೆ ಮೈಂದರಗಿ ಭಕ್ತರು ಸಕ್ಕರಿಯಲ್ಲಿ ಹಣ ಬೆರೆಸಿ ಸಕ್ಕರಿ ಇದೆ ತೆಗೆದುಕೊಳ್ಳಿರಿ ಎಂದು ಶರಣ ಶಿವಲಿಂಗೇಶರಿಗೆ ಹೇಳಿದರು. ಅವರು ಒಲ್ಲೆನ್ನಲು, ತಕ್ಕೊಳ್ಳಿ ಎಂದು ಒತ್ತಾಯಿಸುವರು. ಮನ ಕೆಡಿಸುವ ಹಣವಿದೆ ಇದರಲ್ಲಿ ಎನ್ನಲು, ಅವರು ಇಲ್ಲೆನ್ನುವರು. ಇವರು ಇದೆ ಎನ್ನುವರು. ಹಾಗಾದರೆ ಅದರಲ್ಲಿ ರೂಪಾಯಿ ಎಷ್ಟಿವೆ ಹೇಳಿರಿ ಎಂದು ಅವರು ಕೇಳಿದಾಗ ಶರಣ ಶಿವಲಿಂಗೇಶರು ಐದೆಂದು ಹೇಳುವರು. ಗಂಟು ಬಿಚ್ಚಿ ನೋಡಲು ಅದರಲ್ಲಿ ಐದು ರೂಪಾಯಿಗಳಿದ್ದುದು ಕಂಡು ಬಂದಿತು. ಅವರು ಶರಣ ಶಿವಲಿಂಗೇಶರಿಗೆ ತಪ್ಪಾಯಿತೆಂದು ನಮಸ್ಕರಿಸಿ ತೆರಳುವರು.

ಬಸವ ದೇವಾಲಯ ಕಟ್ಟಿಸಲು ಶರಣ ಶಿವಲಿಂಗೇಶರೇ ಸ್ವತಃ ಕಲ್ಲು ತರಿಸಿ ಕಲ್ಲು ಕುಟಿಗರಾಗಿ ಕೆಲಸ ಮಾಡಿದರು. ಬೊಂತಲಾಪುರದ ಸಿದ್ಧಲಿಂಗನನ್ನು ಕರೆಯಿಸಿ ಬಸವ ಮೂರ್ತಿಯನ್ನು ಪ್ರತಿಷ್ಠಾಪಿಸಿದರು.

ಹರಿಣಿ ಜನ್ಮವನ್ನು ತೊರೆದು ವೀರಮಾಂಬೆ ಮಂಗಲಗಿ ವಡ್ಡರ ಉದರದಲ್ಲಿ ಜನಿಸಿದುದನ್ನು ಶರಣ ಶಿವಲಿಂಗೇಶರು ತಾಯಿಗೆ ತಿಳಿಸುವರು. ಆಕೆ ಮತ್ತೇಕೆ ಹುಟ್ಟಿದಳೆನ್ನುವಳು. ಆ ಹುಡುಗಿ ಬೆಳೆದು ದೊಡ್ಡವಳಾಗುವಷ್ಟರಲ್ಲಿ ತಾಯ್ತಂದೆಗಳು ತೀರಿ ಹೋದರು. ಹೊಟ್ಟೆಪಾಡಿಗಾಗಿ ಆಕೆ ಆ ಊರ ಗೌಡರ ಮನೆಯಲ್ಲಿ ಸೆಗಣಿ ಬಳಿದು ಜೀವಿಸತೊಡಗಿದಳು. ಗೌಡರು ಶರಣ ಶಿವಲಿಂಗೇಶರ ಮಹಿಮೆಯನ್ನು ಕೊಂಡಾಡುತ್ತಿರುವುದನ್ನು ಆ ಹುಡುಗಿ ಕೇಳಿಸಿಕೊಂಡಳು. ಅವಳಿಗೆ ಹಿಂದನದೆಲ್ಲ ನೆನಪಾಯ್ತು. ಆಕೆಯನ್ನು ಶರಣರ ಬಳಿಗೆ ಕರೆದೊಯ್ಯಲು ಅಲ್ಲಿ ಆಕೆ ರೋಧಿಸತೊಡಗುವಳು. ಅಲ್ಲೇ ಕೆಲದಿನವಿದ್ದು ಮರಣಹೊಂದಿದಳು. ಶರಣರು ವಡ್ಡರನ್ನು ಕರೆಸಿ ಅವಳ ಅಂತಿಮ ಸಂಸ್ಕಾರ ನೆರವೇರಿಸಲು ಹೇಳಿದರು. ಅವರು ಇವಳಾರೆಂದು ಶರಣ ಶಿವಲಿಂಗೇಶರಿಗೆ ಕೇಳಲು ಈಕೆ ಇನ್ನೊಮ್ಮೆ ಬರುವಳು. ಕೊನೆಗೆ ನಮ್ಮೊಡನೆ ಕೂಡಿ ಸಾಗುವಳು ಎಂದರು.

ಭಕ್ತರು ಪ್ರತಿನಿತ್ಯ ಮಠದಲ್ಲಿ ಭಜನೆ ಮಾಡುತ್ತಿದ್ದರು. ಮೋಹರಂ ದಿನ ಭಜನೆ ಮಾಡಬಾರದೆಂದು ತಹಶೀಲ್ದಾರರ ಹುಕುಮ ಇದ್ದರೂ ಶರಣ ಶಿವಲಿಂಗೇಶರ ಅಪ್ಪಣೆಯಂತೆ ಭಕ್ತರು ಭಜನೆ ಮಾಡಿದರು. ತಹಶೀಲ್ದಾರ ಅವರನ್ನು ಹಿಡಿತರಲು ಸಿಫಾಯಿಗಳನ್ನು ಕಳಿಸಿದ. ಎಲ್ಲರೂ ಓಡಿ ಹೋಗಲು ಚಟ್ಟರಕೀ ಬಮ್ಮಣ್ಣ ಒಬ್ಬನೇ ಸಿಕ್ಕನು. ಆತನನ್ನು ಸರಕಾರದೆದುರು ಹಿಡಿದು ತರಲು ತಹಸೀಲ್ದಾರ ಆತನಿಗೆ ಹೊಡೆದು ಒಂದು ಕೋಣೆಯಲ್ಲಿ ಊಟವಿಲ್ಲದೆ ಕೂಡಿ ಹಾಕಿದನು. ಆತ ಶಿವ ಶಿವಾ ಎಂದು ಒರಲತೊಡಗುವನು. ಈ ಕೂಗು ಶರಣ ಶಿವಲಿಂಗೇಶರಿಗೆ ಮುಟ್ಟುವುದು. ಅವರು ಅಲ್ಲಿಂದಲೇ ತಹಶೀಲ್ದಾರನ ಹೊಟ್ಟೆ ಕಡಿಯುವ ಹಾಗೆ ಮಾಡಿದರು. ತಹಶೀಲ್ದಾರ ಸಂಕಟದಿಂದ ಹೊರಳಾಡಿದ. ಔಷಧಿ ಸೇವಿಸಿದರೂ ಕಡಿಮೆಯಾಗಲಿಲ್ಲ. ಆತ ಅಮೃತರಾಯಗೌಡರನ್ನು ಕರೆಸಲು, ಗೌಡ ಇದಕ್ಕೊಂದು ಔಷಧಿ ಇದೆ. ಅದೇನೆಂದರೆ,

ನೀವು ಶರಣ ಶಿವಲಿಂಗೇಶರ ಬಳಿ ಹೋಗಿ ಭಜನೆ ನಿಲ್ಲಿಸಿದ್ದು ತಪ್ಪಾಯ್ತೆಂದು ಬೇಡಿ ಕೊಳ್ಳಿರಿ ಎಂದರು. ತಹಶೀಲ್ದಾರರು ಬಮ್ಮಣ್ಣನನ್ನು ಬಿಡಿಸಿ ಶರಣ ಶಿವಲಿಂಗೇಶರ ಬಳಿ ಹೋಗಿ ಕ್ಷಮೆ ಯಾಚಿಸಲು ಆತನ ಹೊಟ್ಟೆ ನೋವು ಕಡಿಮೆಯಾಯಿತು. ಮರಳಿ ಆತ ತನ್ನ ಸ್ಥಾನಕ್ಕೆ ಹೋದನು.

ಗಾಳಿದೇವನೆಂಬೊಬ್ಬ ಹಠ ವೈರಾಗಿ ಕಾಜೋಳ ಪಟ್ಟಣದ ಮಠದಲ್ಲಿದ್ದ. ಆತ ಶರೀರದ ಮೇಲೆ ಮೋಹವಿರಿಸದೆ ಮೂರೇಣೆರುವ ಮೂರು ಕಲ್ಲುಗಳನ್ನಿರಿಸಿ ಶಿರ, ನಡು, ಹಿಮ್ಮಡಗಳನ್ನು ಊರುತ್ತ ಮಲಗಿದ. ಈ ರೀತಿ ಮಾಡುತ್ತಿರಲು ಒಂದು ದಿನ ಚನ್ನಪ್ಪನೆಂಬೊಬ್ಬ ಭಕ್ತ ಪ್ರಸ್ತವ ಮಾಡಲು ಎಲ್ಲ ಚರರೂ ಊಟಕ್ಕೆ ಬಂದರು. ಶರಣ ಶಿವಲಿಂಗೇಶರು ಗಾಳಿದೇವನಿಗೆ ಬಿನ್ನಹವಿದೆಯೋ ಎಂದು ಕೇಳಲು, ಇರುವು ದೆನ್ನುವನು. ಆಗ ಎಲ್ಲ ಚರರು ಆತ ನಮ್ಮ ಪಂಕ್ತಿಯಲ್ಲಿ ಕೂಡ್ರುವುದು ಬೇಡೆನ್ನು ವರು. ಆತ ಗುಣಹೀನ, ಅವಧೂತ ಮಾರ್ಗಿ ಎನ್ನುವರು. ಆಗಲಿ ನಿಮ್ಮಂತೆಯೇ ಎನ್ನಲು ಎಲ್ಲರೂ ಊಟಕ್ಕೆ ಕುಳಿತರು. ಅವರ ಎಡೆಯಲ್ಲಿ ಬಾಲ ಹುಳುಗಳಾದುವು. ಆಗ ಚರರೆಲ್ಲ ಸಾವೊಲ್ಲೆ ಎಂದು ಎದ್ದು ನಿಲ್ಲಲು ಚನ್ನಪ್ಪ ಭಕ್ತ ಶರಣ ಶಿವಲಿಂಗೇಶರ ಬಳಿ ಓಡಿಬಂದು ನಡೆದುದೆಲ್ಲವನ್ನು ಹೇಳುವನು. ಆಗ ಅವರು ಗಾಳಿದಾಸನ ಚರಣೋ ದಕ ಕೊಡುವರು. ಅದನ್ನು ತಂದು ಎಲ್ಲರ ಎಡೆಯ ಮೇಲೆ ಚಿಮುಕಿಸಲು ಹುಳುಗಳು ಮಾಯವಾಗಿ ಪಾಕ ಶುದ್ಧವಾಯಿತು. ಎಲ್ಲ ಚರರೂ ತಮ್ಮದು ತಪ್ಪಾಯಿತೆಂದು ಭೋಜನ ಮಾಡುವರು.

**ಸಂಧಿ ೧೫ :**

ಶರಣ ಶಿವಲಿಂಗೇಶರು ಒಂದು ದಿನ ಶಿವಧ್ಯಾನದಲ್ಲಿ ತಲ್ಲೀನರಾಗಿ ನಿದ್ರಿಸುತ್ತಿರಲು, ಶಿವ ಕನಸಿನಲ್ಲಿ ಬಂದು ಮಗನೇ ಶಿವಲಿಂಗಾ ಶರಣರ, ಜಂಗಮರ ಸೇವೆಗೈದಿ ಇನ್ನು ನಿನ್ನ ಮನ ಶಿವನಿಗರ್ಪಿತವಾಯ್ತು, ಶ್ರಮವಿನ್ನು ಬೇಡ, ಸಾಯುಜ್ಯ ಪದವಿ ಹೊಂದು ಎನ್ನುವನು. ದೇವಾ ನನ್ನ ತಪ್ಪು ಮನ್ನಿಸೆನ್ನಲು, ಶಿವಲಿಂಗೇಶಾ ನೀನಾದರಿಸಿ ಕೇಳು ಆ ದುರ್ಗಿ ಜಗದ ಜೀವಿಗಳನ್ನು ಹಿಂಡಿ ರಕ್ತ ಕುಡಿಯುತ್ತ ಧರೆಗೆ ಬರುವಳು. ಕಾದು ಕೊಂಡಿರು ನೀ ಎಂದು ಹೇಳಿ ಅದೃಶ್ಯನಾಗುವನು.

ನಿದ್ರೆ ತಿಳಿದೆದ್ದ ಮೇಲೆ ಶರಣ ಶಿವಲಿಂಗೇಶರು ಶಿವ ಶಿವಾ ನೀನು ಕನಸಿನಲ್ಲಿ ಬಂದು ಸುವಿಚಾರವನ್ನು ಪರಿಪರಿಯಾಗಿ ಹೇಳಿಹೋದೆಯಲ್ಲ ಎಂದು ಆ ದುರ್ಗಿಯ ಬರವನ್ನು ನಿರೀಕ್ಷಿಸತೊಡಗುವರು. ಮುಂದೆ ದುರ್ಗಿ ಬಂದು ಜನರನ್ನು ಗೋಳಾಡಿಸತೊಡಗುವಳು. ಜನ ತತ್ತರಿಸಿತು. ಗ್ರಾಮ ಪಟ್ಟಣಗಳಲ್ಲಿ ಹೆಣಗಳೇ ತುಂಬಿದುವು. ಜನರೆಲ್ಲ ಊರು ಬಿಟ್ಟು ಹೋಗತೊಡಗುವರು. ಶರಣ ಶಿವಲಿಂಗೇಶರು ಮಾತ್ರ ಮಠದಲ್ಲೇ ಇರತೊಡ ಗುವರು. ಭಕ್ತರು ಬಂದು ಊರ ಹೊರಗೆ ಬರಬೇಕೆಂದು ಕೇಳುವರು. ಆಗ ಅವರು

ಬೇಡವೆಂದು ಅಲ್ಲೇ ಇರತೊಡಗುವರು. ಶರಣ ಶಿವಲಿಂಗೇಶರು ಎಲೆ ದುರ್ಗಿಯೇ ಭಕ್ತ ಪುತ್ರರನ್ನು ಕೊಲ್ಲದಿರು ಎನ್ನುತ್ತ ಬಸವ ದೇವಾಲಯದ ಬಾಗಿಲ ಮುಂದೆ ನಿಂತು ಚೀರುತ್ತ ಬಾ ದುರ್ಗಿಯೇ ನನ್ನೊಳು ಸೇರು ಎನ್ನುವರು. ಪ್ಲೇಗಿಣಿ ಆ ರಾತ್ರಿ ಶರಣ ಶಿವಲಿಂಗೇಶನೆದುರು ಮಂಡಿಯೂರಿ ಕುಳಿತುಕೊಳ್ಳುವಳು. ಶರಣ ಶಿವಲಿಂಗೇಶರು ತಾಯೆ, ನಮ್ಮ ಭಕ್ತರನ್ನು ಸಾಯಿಸಬೇಡ ನಿನಗೇನುಬೇಕು ಹೇಳು ಕೊಡುವೆನೆನ್ನುವರು. ಆಗ ಆಕೆ ಮೃದುವಾದ ನಿನ್ನ ಕಾಯವನ್ನು ಕೊಟ್ಟೆಯಾದರೆ ಈ ಊರ ಜನರನ್ನು ಬಿಡುವೆನೆನ್ನುವಳು. ಆಗಲಿ ನಾನು ನಿನ್ನೊಡನೆ ಬರುವೆ ಈ ಊರನ್ನು ಬಿಟ್ಟು ದೂರಾಗು ಎನ್ನುವರು. ಆಕೆ ಹಾಗೆಯೇ ಮಾಡುವಳು. ಆ ರಾತ್ರಿ ಶರಣ ಶಿವಲಿಂಗೇಶರು ಪರಶಿವನನ್ನರ್ಚಿಸಿ, ಶಿಷ್ಯ ಗುರುಮೂರ್ತಿಯನ್ನು ಬಳಿ ಕರೆದು ನನಗೆ ಚರಮೂರ್ತಿಗಳನ್ನು ತೃಪ್ತಿಪಡಿಸುವ ಆಸೆಯಾಗಿದೆ ಎಲ್ಲರನ್ನು ಕರೆಯಿಸು ಎನ್ನುವರು. ಆತ ಎಲ್ಲ ಚರರನ್ನು ಕರೆಸಿದನು. ಶರಣ ಶಿವಲಿಂಗೇಶರು ಭಕ್ಷ್ಯ ಭೋಜ್ಯಗಳನ್ನು ಮಾಡಿಸಿ ಎಲ್ಲರೂ ತೃಪ್ತಿಯಾಗುವಂತೆ ಉಣಬಡಿಸಿ ತಾಂಬೂಲಿತ್ತರು. ಮರುದಿನವೇ ಶರಣ ಶಿವಲಿಂಗೇಶರಿಗೆ ರೋಗ ತಗಲಿತು. ಶಿಷ್ಯರೊಡನೆ ಊರ ಹೊರಗೆ ಎಲ್ಲರಿಗೂ ಭೆಟ್ಟಿಯಾಗಲ್ಕು ನಡೆದರು. ದಾರಿಯಲ್ಲಿ ಸತ್ತ ಹಾವೊಂದನ್ನು ಕಂಡರು. ಶಿಷ್ಯ ಗುರುಮೂರ್ತಿ ಸತ್ತ ಹಾವಿದೆ ಇದು ಅಪಶಕುನ ಎನ್ನುವನು. ಆಗ ಅವರು ಹರನ ಆಭರಣವಿದು ಇದ್ದೇಗೆ ಅಪಶಕುನವಾಗುವುದು ಮರುಳ ಶಿಷ್ಯನೆ ನಡೆ ಎಂದರು. ಎಲ್ಲ ಗುಡಿಸಲುಗಳಿಗೂ ಹೋದರು. ಜನರೆಲ್ಲ ಶರಣ ಶಿವಲಿಂಗೇಶರನ್ನು ಕಣ್ಣಾರೆ ಕಂಡು ಹರ್ಷಿತರಾದರು. ಅವರಿಗೆ ನಮಸ್ಕರಿಸಿ ಬಂದ ಸಂಕಟವನ್ನು ದೂರ ಮಾಡಿರೆಂದು ಬೇಡಿಕೊಂಡರು. ಪ್ಲೇಗಿಣಿ ನಮ್ಮನ್ನು ಕೊಂದುಹಾಕುತ್ತಿರುವಳು. ದಿಟವಾಗಿ ದೇವರು ನೀವೇ ನಮ್ಮನ್ನು ರಕ್ಷಿಸಿರಿ ಎಂದು ಬೇಡಿಕೊಳ್ಳಲು, ಶರಣರು ನಾನೇನು ಶಿವನೇ, ಶಿವನನ್ನು ಸ್ಮರಿಸಿರಿ ಶಿವನೇ ನಿಮ್ಮ ಸಂಕಟವನ್ನು ಪರಿಹರಿಸುವನೆಂದು ಹೇಳಿದರು. ಶರಣ ಶಿವಲಿಂಗೇಶರು ಊರ ಹಿರಿಯರಿಗೆ ಇನ್ನು ಸಮಾಧಿ ಸಿದ್ಧಗೊಳಿಸಿರಿ ಎನ್ನುವರು. ಆಗ ಭಕ್ತರೆಲ್ಲ ಹೀಗೇಕೆ ಗುರುಗಳೇ ಎಂದು ಒರಲಿದರು, ದುಃಖಿಸಿದರು. ನಮಗಾರು ಇನ್ನು ಗತಿ ಎಂದು ಗೋಳಿಟ್ಟರು. ಗುರುಮೂರ್ತಿಗೆ ಕೃತಕ ಕಪಟ ಬಿಟ್ಟು ಸತತ ಸನ್ಮಾರ್ಗದಲ್ಲಿ ನಡೆಯೆಂದು ಬೋಧಿಸಿದರು. ದಿನ ದಿನಕ್ಕೆ ಶರಣ ಶಿವಲಿಂಗೇಶ್ವರರ ಪ್ರಕೃತಿ ಕೆಡುತ್ತ ಬಂದಿತು. ರೋಗ ಉಲ್ಬಣಿಸಿತು. ಭಕ್ತರು ದುಃಖಿಸತೊಡಗಿದರು. ವೀರಮಾಂಬೆಯೂ ತಮ್ಮ ಸಂಗಡ ಬರುವಳು, ಆಕೆಗಿದು ಮೂರನೆಯ ಜನ್ಮವೆನ್ನುವರು.

ಗುರುಮೂರ್ತಿ ಶರಣ ಶಿವಲಿಂಗೇಶ್ವರರ ಪಾದದಮೇಲೆ ಬಿದ್ದು ಉರುಳಾಡಿದನು. ಗುರುಗಳು ಆತನನ್ನೆಬ್ಬಿಸಿ ಬಿಗಿದಪ್ಪಿ ಅಶ್ರುತರ್ಪಣಗೈದರು. ಜೀವನ್ಮುಕ್ತಿಯ ವಿಚಾರ ಅರುಹಿದರು. ಶಿಷ್ಯನಿಗೆ ಬೋಧಿಸುತ್ತ ಬೋಧಿಸುತ್ತ ಶರಣ ಶಿವಲಿಂಗರು ಚಿಜ್ಜ್ಯೋತಿಯಲ್ಲಿ ಬೆರೆತರು. ಸದ್ಭಕ್ತರು ಉಘೆ ಉಘೆ ಎಂದು ಘೋಷಿಸಿದರು.

ಶಾಲಿವಾಹನ ಶಕೆ ೧೮೬೬ (ಇಸ್ವಿಸನ್ ೧೯೦೪) ಮಾಘ ಶುದ್ಧ ಪಂಚಮಿ ಗುರು ವಾರ ದಿನ ಹನ್ನೊಂದು ಗಳಿಗೆ ಸಂದ ಸಮಯದಿ ಶರಣ ಶಿವಲಿಂಗೇಶ್ವರರು ಲಿಂಗೈಕ್ಯ ರಾದರು. ಬಸವ ದೇವಾಲಯದೆದುರು ಕೂಡ್ರಿಸಿದರು. ಭಕ್ತರೆಲ್ಲ ಭಜನೆ ಮಾಡ ತೊಡಗಿದರು. ನಾಡಗೌಡ, ಸೆಟ್ಟಿ, ಜಂಗಮರು, ದೇಸಾಯರು, ದೊರೆಗಳು, ಅಧಿಕಾರಿ ಗಳು ಮತ್ತು ವರ್ತಕರು ಎಲ್ಲರೂ ಅಂತಿಮ ಸಂಸ್ಕಾರಕ್ಕೆ ಧಾವಿಸಿ ಬಂದರು. ಬಸವ ದೇವಾಲಯದೆದುರು ಅವರನ್ನು ಸಮಾಧಿಗೊಳಿಸಿದರು.

ಶರಣ ಶಿವಲಿಂಗೇಶ ಮಹಾತ್ಮನ ಚರಿತ್ರೆಯನ್ನು ಪ್ರೀತಿಯಿಂದ ಕೇಳಿದವರಿಗೆ, ಓದಿದವರಿಗೆ ಭೂಮಿ–ಧನ–ಕನಕ–ಸಂತಾನ ಸಂಪದವೊದಗುವುದು, ಕೈವಲ್ಯ ಪದವಿ ಲಭಿಸುವುದು.

ಶಾಲಿವಾಹನ ಶಕೆ ಹದಿನೆಂಟುನೂರಾ ಅರವತ್ತಾರು ಶೀಲಮಾಸ ಘನ ಅಷ್ಟಮಿ ಯಂದು ಸೋಮವಾರ ಶರಣ ಶಿವಲಿಂಗೇಶ್ವರರ ಪುರಾಣ ಲಿಖಿಸುವುದು ಸಮಾಪ್ತಿ ಯಾಯಿತು. ಪುರಾಣದ ಮೂಲ ಪ್ರತಿ ಈಗ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿಡಲಾಗಿದೆ.

**ಶೈಲಿ :**

ಪ್ರಸ್ತುತ ಪುರಾಣದ ಶೈಲಿ ಸರಳವಾದುದು. ಜನ ಸಾಮಾನ್ಯರಿಗೆ ಸುಲಭವಾಗಿ ತಿಳಿಯುವಂಥದು. ಓದು ಬಲ್ಲವರೆಲ್ಲರೂ ಇದನ್ನು ಓದಿ ಅರ್ಥಮಾಡಿಕೊಳ್ಳಬಲ್ಲರು. ಭಾಮಿನೀ ಷಟ್ಪದಿಯಲ್ಲಿ ರಚನೆಗೊಂಡ ಈ ಪುರಾಣದಲ್ಲಿ ಕವಿ ಹೆಚ್ಚಾಗಿ ಜನಪದ ಭಾಷೆ ಯನ್ನೇ ಬಳಸಿದ್ದಾನೆ. ಛಂದೋನಿಯಮಗಳನ್ನೇನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿಲ್ಲ. ವ್ಯಾಕರಣ ದೋಷಗಳೂ ಅಲ್ಲಲ್ಲಿ ಇವೆ. ಕವಿ ಇವುಗಳತ್ತ ಅಷ್ಟಾಗಿ ಲಕ್ಷ್ಯವಹಿಸಿಲ್ಲ ಮೇಲಾಗಿ ಆತ ಪುರಾಣ ರಚಿಸಿದುದು ಜನಸಾಮಾನ್ಯರಿಗಾಗಿ. ಅವರಿಗೆ ತಿಳಿಯುವಂತೆ ಅವರ ಮಾತಿನಲ್ಲೇ ಪದ್ಯ ರಚಿಸುವತ್ತ ಆತ ಆಸಕ್ತಿವಹಿಸಿದ್ದಾನೆ. ವ್ಯಾಕರಣ, ಛಂದೋ ನಿಯಮಗಳಿಗಿಂತ ಪುರಾಣದ ಕಥೆಯೇ ಜನ ಸಾಮಾನ್ಯರಿಗೆ ಪ್ರಮುಖವಾದುದು. ಕಥೆ ಸ್ಪಷ್ಟವಾಗಿ ತಿಳಿದರೆ ಸಾಕು, ಅವರೇನು ಅಂಥ ಪಂಡಿತರಲ್ಲ, ಅಂಥವರನ್ನೇ ಕವಿ ದೃಷ್ಟಿ ಯಲ್ಲಿರಿಸಿಕೊಂಡು ಪುರಾಣ ರಚಿಸಿದುದರಿಂದ ಭಾಷೆ ಅತ್ಯಂತ ಸರಳವಾಗಿದೆ. ಸಂಸ್ಕೃತ ಪದಗಳಾಗಲೀ, ಪದ್ಯಗಳಲ್ಲಿ ಪ್ರೌಢತೆಯಾಗಲೀ ಇಲ್ಲ. ಪದ್ಯಗಳ ರಚನೆ ಜಾಳಾಗಿದೆ. ಅಷ್ಟೊಂದು ಬಿಗಿ ಬಂಧವನ್ನು ಕಲಾತ್ಮಕತೆಯನ್ನು ಕಾಣೆವು. ಒಟ್ಟಾರೆಯಾಗಿ ಕವಿಯ ಲಕ್ಷ್ಯ ತಾನು ಹೇಳುವ ಕಥೆ ಜನತೆಗೆ ಮನಂಬುಗುವ ಹಾಗೆ ತಿಳಿಯಬೇಕೆಂಬುದರತ್ತ ಇರುವುದನ್ನು ಗುರುತಿಸಬಹುದು. ಉದಾಹರಣೆಗಾಗಿ ಕೆಲ ಪದ್ಯಗಳನ್ನಿಲ್ಲಿ ನೋಡ ಬಹುದು :

ನಾಡೆ ಸೊಗಸಿಂ ಮೆರೆವ ಪುರವಿದು
ನಾಡಿನೊಳು ನಾಮಾಂಕಿತವು ಸಿರಿ
ಗೂಡಿ ಶ್ರೀ ಮದ್ವೀರಶೈವರ ಬೀಡ ಸುಖವೀಡು
ಕೂಡಿ ನೈಜಾಂ ಹದ್ದು ಜಹಗಿರೆ
ಗೌಡ ಸರಕಾರ ಶಾನು ಭೋಗನು
ಪ್ರೌಢ ಜನಕಾಶ್ರಯದ ಸ್ಥಲಮಾಗಿಂತು ರಾಜಿಪುದು ॥

(ಸಂಧಿ-೨, ಪದ್ಯ-೨೮)

ಕಣ್ಣು ಕಾಂಬುದಕೇಕೆ ಕನ್ನಡಿ
ಬಣ್ಣ ಚರ್ಮದ ಪೆಣ್ಣು ಹೊನ್ಮೇ
ಣ್ಮಣ್ಣು ಮೂರಿವುಗಳನು ಮೋಹಿಸುವವ ಜಂಗಮನೆ
ಮಣ್ಣು ಹೊನ್ಪೆಣ್ಣುಗಳ ಬಯಸುತ
ಸುಣ್ಣನಂದದಿ ಕುದಿವ ಮೋಹವ
ಸಣ್ಣಸುತ ಸುಖ ಶಾಂತಿಯಾದವನವನೆ ಜಂಗಮನು ॥

(ಸಂಧಿ-೫, ಪದ್ಯ-೨೨)

ಹರಿಣೆ ಜನ್ಮವನುಳಿದ ವೀರೌ
ವರ ಮಂಗಲಿಗಿ ವಡ್ಡರುದರದೆ
ಯರರೆ ಭಂಗಾರೆವ್ವಮೀಧಿನ ಜನ್ಮಿಸಿದಳೆಂದು
ಕರದ ಚಪ್ಪಾಳೆಯನು ಬಾಜಿಸೆ
ತರುಳ ಮತ್ತೇಕ್ಹುಟ್ಟಿದಳು ಮಾ
ಡಿರುವ ಪಾಪಕ್ಕೆನಲು ಮುಂದ್ಹತ್ತೆಂಟು ವರುಷದಲಿ ॥

(ಸಂಧಿ-೧೪, ಪದ್ಯ-೨೨)

ಈ ಮೇಲಿನ ಪದ್ಯಗಳಲ್ಲಿ ನಾಡೆ, ನೈಜಾಂ, ಹದ್ದು, ಜಹಗಿರೆ ವಡ್ಡ, ಹತ್ಹೆಂಟು ಮುಂತಾದ ಸಾಮಾನ್ಯ ಜನರಾಡುವ ಪದಗಳು ಬಳಕೆಗೊಂಡುದನ್ನರಿಯಬಹುದು. ಜನಸಾಮಾನ್ಯರ ದೈನಂದಿನ ಬಳಕೆಯ ಮಾತುಗಳೇ ಇಲ್ಲಿ ಮೈವೆತ್ತಿ ಬಂದುದನ್ನರಿಯ ಬಹುದು. ಕವಿ ಪಾಂಡಿತ್ಯ ಪ್ರದರ್ಶನದ ಗೀಳಿಗಂಟಿಕೊಳ್ಳದೆ ಭಾಷೆಯನ್ನು ಸರಳ ಗೊಳಿಸಬಳಸಿದ್ದಾನೆ. ಜನತೆಗೆ ಧರ್ಮದ ತತ್ವಗಳು ಪರಿಣಾಮಕಾರಿಯಾಗಿ ತಿಳಿಯ ಲೆಂದು ನುಡಿಗಟ್ಟುಗಳನ್ನು, ಪಡೆನುಡಿಗಳನ್ನು, ಗಾದೆ ಮಾತುಗಳನ್ನು ಪುರಾಣದುದ್ದಕ್ಕೂ ಹೇರಳವಾಗಿ ಬಳಸಿದುದನ್ನು ಕಾಣುವೆವು. "ಕಣ್ಣು ಕಾಂಬುದಕೇಕೆ ಕನ್ನಡಿ" ಎಂಬ ಗಾದೆ ಮಾತನ್ನು ಹೆಣ್ಣು, ಹೊನ್ನು, ಮಣ್ಣು ನಂಬಿದವ ಮಣ್ಣು ಮುಕ್ಕಿದ ಎಂಬ ಅನುಭವದ ನುಡಿಯನ್ನು ಔಚಿತ್ಯಪೂರ್ಣವಾಗಿ ಬಳಸಿದುದನ್ನು ಮೇಲಿನ ಪದ್ಯದಲ್ಲಿ ಕಾಣಬಹುದು. ಮೋಹವೆಂಬುದು ದುರಾಸೆ. ಇಂಥದನ್ನು ಬೆಂಬತ್ತಿದವ ಸುಣ್ಣದ

ಕಲ್ಲನ್ನು ನೀರಲ್ಲಿ ಹಾಕಿದಾಗ ಅದು ಹೇಗೆ ಕತಕತನೆ ಕುದಿದು ಕರಗಿ ಹೋಗುವುದೋ ಹಾಗೆಯೇ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವನೆಂದು ಮಾರ್ಮಿಕವಾಗಿ ತಿಳಿಯಪಡಿಸ ಲೆತ್ನಿಸಿದ್ದಾನೆ. ಮೇಲೆ ಉದಾಹರಿಸಿದ ಪದ್ಯದಲ್ಲಿ. ನೀತಿಬೋಧೆಯನ್ನು ಸಾಮಾನ್ಯ ಜನರ ಮಾತಿನಲ್ಲೇ ಅವರಲ್ಲೇ ಪ್ರಚಲಿತವಿರುವ ಕಥೆಗಳ ಮೂಲಕ ತಿಳಿಸಿರುವುದೊಂದು ಆತನ ವೈಶಿಷ್ಟ್ಯವಾಗಿದೆ. ಜನಪದ ಭಾಷೆಯನ್ನು ಕವಿ ಹದವರಿತು ಬಳಸಿದುದರಿಂದ ಪುರಾಣಕ್ಕೆ ಕಳೆ ಬಂದುದಲ್ಲದೆ, ಅದು ಜನಸಾಮಾನ್ಯರಿಗೂ ಅಪ್ಯಾಯಮಾನವಾಗಿದೆ. ದಿನ ನಿತ್ಯದ ಭಾಷೆಯೇ ನಿರಾಡಂಬರವಾಗಿ ಅಭಿವ್ಯಕ್ತಗೊಂಡುದರಿಂದ ಪುರಾಣಕಾರನ ಉದ್ದೇಶ ಸಫಲವಾಗಿದೆಯೆನ್ನಬಹುದು. ಇಂಥ ಪುರಾಣಗಳು ಸಾಮಾನ್ಯ ಜನರ ಬದುಕಿನಲ್ಲಿ ಭರವಸೆ ಮೂಡಿಸಿ ಅವರನ್ನು ಸನ್ಮಾರ್ಗದಲ್ಲಿ ಮುನ್ನಡೆಸುವವು. ಆದುದ ರಿಂದ ಇಂದೂ ಪುರಾಣ ರಚನೆ ಮುಂದುವರಿದುದನ್ನು ಕಾಣುವೆವು. ಪ್ರಸ್ತುತ ಪುರಾಣ ಅಂಥವುಗಳಲ್ಲಿ ಒಂದೆನ್ನಬಹುದು.

— ಡಾ. ಮ. ಗು. ಬಿರಾದಾರ
ಡಾ. ವ್ಹಿ. ಜಿ. ಪೂಜಾರ

## ಸಂಧಿ ೧

ಭಾರತದಿ ವರ ವೀರಶೈವಾ
ಚಾರ ಸಮಯದ ಶರಣ ಸ್ಥಲವಂ
ಸೂರೆಗೊಳಿ ಜನಿಸಿದ ಶಿವಲಿಂಗೇಶನು ಭವನಾಶನು ॥ ಪಲ್ಲ ॥

ಶ್ರೀಗುರುವೆ ಭಕ್ತಾಳಿಗಳ ಭವ
ರೋಗ ಪರಿಹಾರಕನೆ ಶೃತಿ ತತಿ
ಯಾಗಮಜ್ಞನೆ ಯೋಗಿವಂದ್ಯನೆ ಪರತರಾಪ್ತಹನೆ
ನಾಗ ಸುರಹರಿ ಬ್ರಹ್ಮವಂದ್ಯನೆ
ಭೂಗಗನ ಪರಿಪಾಲಕನೆ ಸುಖ
ಸಾಗರನೆ ಕರುಣಾಳು ಸಜ್ಜನ ಶರಣ ಹೃದ್ವಾಸಂ ॥ ೧ ॥

ಶ್ರೀ ಮಹಾಕೈಲಾಸ ನಗದೋ
ದ್ಧಾಮ ಶಂಕರ ಸೋಮಶೇಖರ
ಕಾಮ ಸಂಹರ ಕಾಳಿ ಪ್ರಿಯಕರ ಭೀಮ ಭವಹರಣಾ
ವ್ಯೋಮ ಕಚಗಣಸ್ತೋಮ ಪಂಡಿತ
ಶಾಮ ಕಂಧರ ಶಾಂತ ಶಾಶ್ವತ
ಸ್ವಾಮಿ ಮಂಗಲ ನಾಮ ಮಹಿಮಾತುಂಗ ಮದ ಭಂಗ ॥ ೨ ॥

ಬ್ರಹ್ಮ ಸಾಕ್ಷಾತ್ಕಾರ ವಹಿಸುತ
ಬ್ರಹ್ಮ ಪದದಲಿ ಮುಳುಗಿ ನಿರ್ಮಲ
ಬ್ರಹ್ಮ ಮಾನಸನಾಗಿ ಚಿತ್ಕಲ ಬ್ರಹ್ಮದಡಗಿದನೆ
ಬ್ರಹ್ಮ ಪೂರ್ವಾಬ್ರಹ್ಮ ನೀನಿರೆ
ಬ್ರಹ್ಮಜಾಂಡದಿ ಬಳಲಿದವರನು
ಬ್ರಹ್ಮವೆನಿಸುವ ಲೋಸುಗದಿ ಘೆರದಾದಿ ಶಂಕರನೆ ॥ ೩ ॥

ಗುರುವೆ ಗುಣ ಗಂಭೀರೆ ಸೌಂದರ್ಯೆ
ವರಸ್ವೈವೆ ಭವಿ ನಿತ್ಯ ನಿರ್ಮಲೆ
ಗಿರಿಜೆ ಗುರುವರನರಸೆ ಮಂಗಲಮೂರ್ತೆ ವಿಖ್ಯಾತೆ
ಕರಿವದನ ಗುಹವೀರ ಮಾತೆಯೆ
ಧರಣಿ ಪಾವನನೆ ಪರಮ ಪಾರ್ವತಿ
ಸುರ ನರೋರಗ ಸ್ತುತ್ಯೆ ಗೌರೀ ವರವ ಕೊಡುದಾತೆ ॥ ೪ ॥

ಸರ್ವ ಮಂಗಳೆ ಶಾಂಭವಿಯೆ ಶಿವೆ
ಸರ್ವ ಸಾಧಿಕೆ ಶರ್ವ ಪ್ರೀಯಳೆ
ಗರ್ವಮದ ಸಂಹಾರಿ ಶಮೆಯುಮೆ ಪರ್ವತಾತ್ಮಜೆಯೆ
ತೋರ್ವ ಜಗದ ಸುಪೂರ್ವರೂಪಿಣಿ
ಶರ್ವ ಶರಣನ ಕೃತಿಗೆ ಮಂಗಲ
ಪರ್ವಿಸುತ ಕಾಯಂ ನಕಾತ್ಯಾಯಿನಿಯೆ ಕರುಣಾಂತೆ ॥ ೫ ॥

ಗಜವದನ ಗಣಪತಿಯೆ ಗುಣನಿಧಿ
ಭಜಕಜನ ಕಲ್ಪದ್ರುಮನೆ ಶ್ರುತಿ
ವಿಜಯ ವಿಕಸಿತನೇಕದಂತನೆ ವಿದ್ಯದಧಿಕಾರಿ
ಭುಜಗ ಕಟಿಸೂತ್ರಿಕನೆ ಗುಹನಾ
ಗ್ರಜನೆ ಲಂಬೋಧರನೆ ಶಿವಸುತ
ನಿಜದಿ ಪಾಲಿಸು ಶರಣ ಚರಿತೆಗೆ ವಿಘ್ನರಹಿತವನು ॥ ೬ ॥

ಋಷಿಯ ಪತ್ನಿಯರಲ್ಲಿ ಜನಿಸುತ
ವಿಷಮನೇತ್ರನ ವಾಕ್ಯದಂದದಿ
ಪಿಸುಣ ತಾರಕ ದೈತ್ಯ ಶಿರವಂ ತರಿದು ಪರಶಿವಗೆ
ವಸೆದು ಮೂಲ ಸುಮಂತ್ರಕರ್ಥಂ
ದಶದ್ವಿಕೋಟಿಯ ಪೇಳ್ದ ಷಣ್ಮುಖ
ಕುಶಲ ಮತಿಯನಿತ್ತು ಪಾಲಿಸು ಶರಣ ಚರಿತೆಯನು ॥ ೭ ॥

ಪಕ್ಷಿರಥ ಪದ್ಮಜನ ಶಕ್ರರ
ತಕ್ಷಣದಿ ಕರದೊಯ್ದು ವೈರದಿ
ದಕ್ಷ ಸೂಗವನೆಸಗೆ ಶಿವ ಫಣೆಯಕ್ಷದಗ್ನಿಯಲಿ
ಆಕ್ಷಣದಿಯವತರಿಸಿ ದುರ್ಜನ
ದಕ್ಷ ಶಿರವಂ ತರಿಯುತಮರರ
ಶಿಕ್ಷಿಸಿದ ಲಾಕ್ಷಸುತ ವೀರೇಶ ಭವನಾಶ ॥ ೮ ॥

ಆದಿ ಶಿವಲಿಂಗಕ್ಕೆ ವಾಹನ
ವಾದ ನಂದೀಶ್ವರನೆ ಸೂ ಶೈ
ಲಾದ ಮುನಿಯಿಂದುದಯಿಸುತ ಸುರಪನನು ಸೋಲಿಸುತ
ಮೇಧಿನಿಗೆ ಬರುತಾ ಖರಾಸುರ
ಬಾಧೆಯಂ ನೀಗಿಸುತ ಕಾಶಿಯೊ
ಳ್ಬಾದರಾಯಣನಸ್ಥಸ್ತ ಖಂಡಿಸಿದವನೆ ದಯವಾಗು ॥ ೯ ॥

ಭುವನ ಚತುರ್ದಶ ಜೀವಭಿಮಾ
ನವನು ಕಾಯಲು ಹರನ ಸುಹೃತ್
ಕುವಲಯದಿ ಜನ್ಮಿಸುತ ದೇವಾಂಗಾಖ್ಯ ನಾಮದಲಿ
ವಿವಿಧವಾನೇಕೋಸ್ತ್ರಗಳನೆ
ಲ್ಲವನಿಗಿತ್ತ ಸುದೇವವವನೇ
ಜವದಿ ಸಾಗಿಸು ಶರಣ ಶಿವಲಿಂಗೇಶ ಕವನವನು ॥ ೧೦ ॥

ಶಾರದೆಯೆ ತವ ಕರುಣ ರಸವಂ
ಪೂರಿಸುತ ಮಮರಸನೆಯೊಳು ವರ
ಚಾರು ಶರಣನ ಚರಿತೆಗಾವುದು ದೋಷ ದುಃಶಬ್ದ
ಬಾರದೊಲು ಮಾಡುವುದು ಬಡಮತಿ
ಭಾರಸಿಂನದು ಸಕಲಸುವಿದ್ಯಾ
ಧಾರೆ ಸುಗುಣಾಕಾರೆ ಶಿಖಿಸು ವಿಹಾರೆಯಜನೀರೆ ॥ ೧೧ ॥

ಶಂಭು ಸೋಮೇಶ್ವರ ಸುಲಿಂಗದ
ಬಿಂಬದಿಂದೋದ್ಭವಿಸಿ ಚರಿಸುತ
ಜಂಬು ಮೊದಲಾದೇಳು ದ್ವೀಪಗಳೆಲ್ಲ ಶಿವತತ್ವ
ಕುಂಭ ಜಾತಗೆ ತಿಳಿಸಿ ಮುಂನೂ
ರ್ಸಂಭ್ರಮದ ಸತಿಯರನು ವರಸಿದ
ಕಂಬುಗ್ರೀವನೆ ರೇಣುಕಾರ್ಯನೆ ಪಾಹಿಮದ್ಗುರುವೆ ॥ ೧೨ ॥

ಪರಮ ಪಾವನ ಪೂಜ್ಯ ಲಿಂಗಂ
ಶರಣ ಮಾನಸ ಕಮಲ ಭೃಂಗಂ
ಕರಕು ರಂಗಮನಂಗ ಭಂಗಂ ಗಿರಿಜೆಯರ್ಧಾಂಗಂ
ಮರಣರಹಿತ ಸುಮಂಗಲಾಂಗಂ
ವರದ ಕರ ಕಪ್ಪಡಿಯ ಲಿಂಗಂ
ಪೊರೆವುದೈ ಶಿವಲಿಂಗ ಶರಣನ ಕಾವ್ಯಕತಿ ಸೊಬಗಂ ॥ ೧೩ ॥

ಗಂಗ ಶಿರಪುರ ಭಂಗ ಗಿರಿಸುತೆ
ಸಂಗಜಿನ ಮಾತಂಗ ಪರಿವೃತ
ತಿಂಗಳಿಂಗಳ ಪಿಂಗಳಾಕ್ಷ ಕುರಂಗಯುತ ಹಸ್ತ
ಅಂಗಜಾಂತಕ ಮಂಗಲಾಂಗ ಭು
ಜಂಗ ಭೂಷಿತ ಶೃಂಗಿದನು ಕರ
ತುಂಗ ಶಿವಪುರದೀಶ ಶಿವಲಿಂಗೇಶ ಕೊಡುಮತಿಯ ॥ ೧೪ ॥

ಭೃಂಗಿ ಶಾಪದ ಪೊರೆಯನಿಳುಹಲು
ತುಂಗ ಸುಗ್ಗಲೆಗುದಿಸಿ ಶ್ರೀಗಿರಿ
ಲಿಂಗವಂ ಸೊನ್ನಲಿಗೆಯಲಿ ಭರಿಸುತಲಧೋದೈತ್ಯ
ಳಂಗ ಹಸು ಬರನಳಿಸಿ ನರಕದಿ
ಭಂಗ ಬಡುತಿಹ ಬೊಮ್ಮನ ನುತೆಗೆ
ದಂಗ ಭವಹರ ಸಿದ್ಧಕುಲ ಚಕ್ರೇಶನ ತಪೋಷ ॥ ೧೫ ॥

ವೀರಶೈವ ಸುಸಾರ ಸಮುಯಾ
ಚಾರ ಸುತತ್ವಾಧಾರ ಶಿವನವ
ತಾರ ಜಗದೋದ್ಧಾರ ಪ್ರಣಮಾಕಾರ ಸುಕುಮಾರ
ಮಾರ ಹರಸಾಜ್ಞಾನುಸಾರದಿ
ಧಾರುಣಿಯೊಳವತರಿಸಿಯೇಕಾ
ಕಾರ ಶಿವಮತಗೈದ ಬಸವಾರಾಧ್ಯ ಕರುಣಿಪುದು ॥ ೧೬ ॥

ಒಮ್ಮೆ ಗಣಪತಿಗೊಮ್ಮೆ ಗುಹನಿಗೆ
ಯೊಮ್ಮೆ ಮುಖಹರಗೊಮ್ಮೆ ಭೃಂಗಿಗೆ
ಯೊಮ್ಮೆ ಸೊನ್ನಲ ಸಿದ್ಧರಾಮಗೆ ಮಣಿದು ನತನಾಗಿ
ಒಮ್ಮೆ ಪ್ರಭುದೇವರಿಗೆ ಬಸವಗೆ
ಯೊಮ್ಮೆ ರೇವಣಸಿದ್ಧ ದೇವಗೆ
ಯೊಮ್ಮೆ ಶ್ರೀ ಗುರುಚನ್ನಬಸವಗೆ ಶರಣ ಸಂಕುಲಕೆ ॥ ೧೭ ॥

ಅಂದಿಗಿಂದಿಗೆ ಮುಂದೆ ಗುರುಪದ
ಗೊಂದಿಸುತ ಭವದಿಂದ ಮುಕುತಿಯ
ಸುಂದರಿಗೆ ಮನಸಂದ ಗಣಕುಳ ವೃಂದಗೆರಗುತಲಿ
ಹಿಂದೆ ಸಕ್ಕದವರ್ನುಕೊಸ್ತುಕ
ದಿಂದೆ ನುತಿಸಿದ ಶಿವಸುಕವಿಗಳಿ
ಗೊಂದಿಸುತ ಶಿವಲಿಂಗ ಶರಣರ ಚರಿತೆ ವಿರಚಿಸಿದೆ ॥ ೧೮ ॥

ಮಾನವರ ಕವಿವರರು ರಚಿಸಿದ
ನೂರಾರು ಪೌರಾಣವಿರುತಿರೆ
ಸಾರಿದನುಮಿವನೇಕ ಮತ್ತಿದು ವ್ಯರ್ಥವೆನಬೇಡಿ
ಧಾರುಣಿಪ ದರ್ಶನಕೆ ಪೋಗಲ್
ದ್ವಾರಪಾಲರು ಸಗುತೆ ವಶ್ಯವು
ಧಾರುಣಿಯೊಳದರಂತೆಯಿದು ತತ್ಕೃತಿಗೆ ಸಾಧನವು ॥ ೧೯ ॥

ವಚನ ಮನ ಕಾಯದೊಳಗೊಮ್ಮೆಯು
ಮಚಲಸುತವರನಲ್ಲದ್ದೊಗಳದ
ಪ್ರಚುರನುದ್ಭಟ ಕಾಳಿದಾಸ ಮಯೂರ ಮಲುಹಣನ
ಸುಚಿತ ಬಾಣನ ಭೋಜ ಭಾರವಿ
ನಿಚಯ ಕವಿಪದ ಪದ್ಮಕೆರಗುತ
ರಚನೆಗೈದೆನು ಶರಣ ಶಿವಲಿಂಗೇಶ ಚರಿತೆಯನು ॥ ೨೦ ॥

ಪರಮ ಜಂಭುದ್ವೀಪದೊಳು ವರ
ಭರತಖಂಡದರೊಳ್ವಿರಾಜಿಪ
ಸರಸ ಕರ್ನಾಟಕದ ಪೂರ್ವದ ಸೀಮೆ ಕಲ್ಯಾಣ
ಪುರದ ಸರಣಿಯ ಮಾದನ ಹಿ
ಪ್ಪರಗಿ ಭಕ್ತರು ಬಂದು ಎನಗೀ
ಶರಣ ಶಿವಲಿಂಗೇಶ ಚರಿತೆಯ ರಚಿಸಿರೆನಲಾಗ ॥ ೨೧ ॥

ತಿಳಿದು ಶರಣರ ಮೂಲ ಜನ್ಮದ
ಚೆಲುವ ಚರಿತೆಯಮವರು ಗೈದಿಹ
ಸಲೆ ಮಹತ್ವಗಳಿನಗೆ ಗುರ್ತಿಲ್ಲೆನಲು ಮಠದಿರುವ
ಲಲಿತ ಲಚ್ಯಾಣ್ ಸಿದ್ಧಲಿಂಗನ
ನಳಿನ ಪದ ಶಿಷ್ಯೋತ್ತಮಂ ಗುಣ
ತಿಲಕ ಖಟ್ಟೆಯ ಶಿದ್ಧರಾಮಪ್ಪೆಂಬ ಸಂಗ್ರಹಕಂ ॥ ೨೨ ॥

ಶ್ರಮವಿದುಂ ಸಂಸಾರ ಸಾಗರ
ಶ್ರಮ ದಮಾದಿಗಳ್ಬಲದಿಯಿದನಾ
ಕ್ರಮಿಸಲಹುದೆಂದಿಚ್ಛಿಸುತ ತಾನಿರ್ದು ಸತತಲ್ಲಿ
ವಿಮಲ ಮೂರ್ತಿಯ ಮೂಲ ಮಹಿಮೆಯ
ಕ್ರಮದಿ ತಿಳಿದವನಾಗಿ ಬಿಡದಲೆ
ಸುಮನ ಭಾವದಿ ಸಾರ್ದ ಸೇವಕ ವೃತ್ತಿಯಿಂದೆನಗೆ ॥ ೨೩ ॥

ಕೇಳಿ ಶರಣರು ಶಿವನಿಗಿಂದಂ
ಮೇಲೆನಿಪ ಶೈವಾಗಮಂಗಳ
ಜಾಲವೊರೆಯುತ್ತಿರುವ ಕಾರಣ ಚರಿತೆ ವಿರಚಿಸಿದೆ
ನೀಲಕಂಠನ ಭಜಕ ಭಕ್ತರು
ಲೀಲೆಯಿಂದಾಲಿಸಿರಿ ನಿಮ್ಮಯ
ಬಾಲ ನಾನೆಂದೆನುತ ಘನ ಸುವಿಶಾಲ ಕರುಣದಲಿ ॥ ೨೪ ॥

ಶರಣ ಪ್ರಥಮರ ಸೌಖ್ಯ ನಡೆಯಾ
ಚರಣೆ ಧರ್ಮ ವಿಚಾರ ನೀತಿಯು
ಧರಣಿ ತಲದಲಿ ಪರ್ಬಿ ಜಗದುದ್ಧಾರಕನುವಾದ
ವರ ಕವಿತೆಯಂ ಬರೆದು ಪಾವನ
ಪರಮ ಪದದಾಶ್ರಯವನ್ನೊಂದ
ಲ್ಪರದೆನಿದ ನಾನೇನು ಬಲ್ಲೆನು ಗುರುವೆ ಬಲ್ಲನದ ॥ ೨೫ ॥

ಛಂದ ಗಣ ಪ್ರಾಸಗಳು ಯತಿ ಪದ
ಸಂಧಿ ಲಕ್ಷಣ ಸರಳ ನುಡಿಗಡ
ನೊಂದು ಲಕ್ಷಕೆ ತಂದುದಿಲ್ಲಾಗದತ್ತದೊಲುಮೆಯುಲಿ
ತಂದೆ ಶಿವಲಿಂಗ ಶರಣ ಮಹಿಮೆಯು
ದಂದ ಕಾವ್ಯವನೆಸಗಿದೆ ಸುಮಹಾ
ನಂದವೀಯಲಿ ಬಂಧನದ ಜನನ ಮರಣ ಭೇಷಜವು ॥ ೨೬ ॥

ಘಟ ಗಡಿಗೆಯಂ ಬಲ್ಲಿ ಶಬ್ದಕೆ
ಘಟಿಪುದಲ್ಲದೆ ಭೇದ ಜಗದೊಳು
ಘಟಿಪುದೇತವ್ವಬ್ದ ಜನ್ಯ ಜ್ಞಾನದಲಿ ಭೇದ
ದಿಟವ ತಿಳಿದರೆ ಸಾಕು ಯಮಗತಿ
ಕಠಿಣ ತರದುರ್ಜೇಯ ಸಂಸ್ಕೃತ
ಶಠಣೆ ಶಾಸ್ತ್ರದ ವಾಸನಾ ಮಲಲೇಪವೇ ಬೇಡಾ ॥ ೨೭ ॥

ರಸದೊಳರ್ಥದೊಳ್ಭಾವದೊಳು ಪದ
ವಿಸರದೊಳು ಕಾವ್ಯದೊಳು ಲಕ್ಷಣ
ದೆಸಕದೊಳು ತಪ್ಪುಳ್ಳೊಡಿದರೊಳು ಪರರು ನಗದಂತೆ
ಸಸಿನೆ ಮಾಳ್ಪುದು ತಿದ್ದುವುದು ಕವಿ
ಬಿಸಜ ಪದಕಂ ನಮಿಸಿ ಬೇಡುವೆ
ಶಿಶುವೆನಗೆ ಕುಂದಿಲ್ಲಯಿಂನ್ಬರ ಭಾರ ನಿಮ್ಮಾಗಿ ॥ ೨೮ ॥

ರೋಗಿ ಪಳಿವನುಮಂಮೃತದಂನವ
ಭೋಗಿ ಸವಿಯನುಮದನೆ ಮುದದೊಳು
ಮೀಗಳಿನ್ನಯ ಕವನ ಸೊಗಸಲ್ಲದಿರೆ ಮೂರ್ಖರಿಗೆ
ನಾಗ ಕಂಕಣ ಭಕ್ತರೊಲಿದನು
ರಾಗದಿಂದಲಿ ಕೇಳ್ದಡಾಯಿತು
ರೋಗಿ ದುಃಷ್ಕವಿ ಜನರು ಪಳಿಯಲು ಕುಂದದೇನಹುದು ॥ ೨೯ ॥

ರೋಗಿ ಪಳಿದರೆ ಪಾಲು ಪುಳಿಯೆ
ಗೂಗೆ ನಿಂದಿಸೆ ರವಿಗೆ ಕುಂದೇ
ಕಾಗೆ ಹಂಸನ ಗತಿಗೆ ಕುಂದಿಡೆ ಕುಂದೆ ದುರ್ಜನರು
ಶ್ರೀ ಗಣಾಧಿಪ ಶರಣ ಚರಿತೆಗೆ
ಹಾಗೆ ಹೀಗೆಂದಂದು ನುಡಿದರೆ
ಮಾಗಿ ಕೋಗಿಲೆ ಕಂಠಗತವಾಗೇನು ಗೈಯ್ತುಮಮ ॥ ೩೦ ॥

ತಂದೆತಾಯ್ಗಳು ತಮ್ಮ ಶಿಶುವಿನ
ಹೊಂದಿ ಹೊರಳದ ನುಡಿಗೆ ಮನ ಮುದ
ದಿಂದ ಪಿಗ್ಗುವ ತೆರದೊಳಿನ್ನಯ ಕೃತಿಯನಾಲಿಪುದು
ಮಂದಮತಿಗಳು ಮುಂದುಗಾಣದೆ
ನಿಂದಿಸಿದಡೇನಾಯ್ತು ಮುಕುರವ
ನಂಧಕನು ದೂಷಿಸಿದ ಪರಿಕಾವ್ಯಕ್ಕೆ ಕುಂದಹುದೆ ॥ ೩೧ ॥

ಸಾರ ಕವಿಗಳು ಪೇಳ್ದ ಪೌರಾ
ಣ್ಸಾರವನೆ ಕೈಕೊಂಡು ಶರಣರ
ಪಾರ ಚರಿತೆಯ ಪೇಳಿಹನುಮಿವನೆಂಥ ಕವಿಯೆಂದು
ಹಾರೈಸಿ ನಗದಿರಿ ಜನ ಧರೆ
ನೀರ ನಲವಾಕಾಶವ ನಿಲವು
ಬೇರೆ ಪೊಸತಾದರೆಯು ಸಾರುತಲಿರ್ದೆ ಪೊಸ ಕವಿತೆ ॥ ೩೨ ॥

ಪಂಕ ಬಿತ್ತಿಯನೆಂತು ನೂಂಕಲು
ಮಂಕಿತಾಗ್ವದು ಬರೇ ಪ್ರವಚನಗ
ಳಂಕ ಡೊಂಕಿನ ಕವನವದರಂತಲ್ಲವೀ ಕವಿತೆ
ಸಂಕ್ರೊರಾರಿಯ ಶಿಲೆಯ ನಿರ್ಮಿತ
ಶಂಕರನ ವರ ನಿಲಯ ಪರಿಯ ಕ
ಲಂಕ ಭಾಮಿನಿ ಷಟ್ಪದಾಳಿಯು ಸರವು ಗಂಭಿರವು ॥ ೩೩ ॥

ಪರಮ ಕವಿಗಳು ಪೇಳ್ದ ಕವಿತಾ
ಸರಣಿಯಂ ಪಳಿಯುವರು ದುಷ್ಟರು
ಕಿರಿಯ ಪಂಡಿತನೆನ್ನ ರಚನೆಗೆ ಪಳಿಯದಿರ್ದಪರ
ಹರನ ಭಕ್ತರು ಕರುಣಿ ವಿಬುಧರು
ಹರುಷವಪ್ಪುವ ತೆರದಿ ಬರೆದೀ
ಚರಿತೆಯಿಂಬಹ ನಿಂದೆ ನುತಿಗಳು ಶರಣರಡಿಗಿರಲಿ ॥ ೩೪ ॥

ಭರತ ಖಂಡದಿ ಪಡುವ ದೆಸೆಯಿಂ
ಬರುವ ಭೀಮಾತೀರದಗ್ರದೊ
ಳಿರುವ ರೋಡಿಗಿ ಪುರವ ಭವಗಜಸಿಂಹನೆಂಪೆಸೆಪ
ಪರಮಗುರು ಶಿವಲಿಂಗ ಶರಣರ
ಚರಣ ಸೇವಕ ಮಡಿವಳಾಖ್ಯನು
ಬರೆದ ಶರಣರ ಚರಿತೆ ಧರೆಯೊಳು ಮೆರೆಯಲನವರತ ॥ ೩೫ ॥

ಮಾರಹರ ಶರಣಾಗ್ರಗಣ್ಯರ
ಸಾರಮಹಿಮಾ ಚರಿತೆಯುಂ ಬಲು
ಧಾರುಣಿಯ ಮಂಡಲದಿ ಭಕ್ತಿಜ್ಞಾನದಾಗರವು
ಘೋರ ಸಂಸಾರಾಂಬುಧಿಯ ಪರ
ತೀರ ಕಾಣಲಪಾರ ಪಡಗಂ
ಸೇರಿದವನೆಂದನ್ಯದನ್ಯಂ ಪುಣ್ಯನವಮಾನ್ಯಂ ॥ ೩೬ ॥

ಕಥೆಯು ಕಾದಂಬರಿಯಿದಲ್ಲವು
ನ್ನತ ನುಡಿಯ ಚಾರಿತ್ರಮಲ್ಲವು
ಹತಿಸಿ ಪ್ರಾಣವ ಗತಿಯಗಾಣದ ಪಾಳ್ಕಥನವಲ್ಲಂ
ಸತತ ಮಾಯಾ ಮೋಹ ಯುದ್ಧವ
ಜಿತಿಸಿ ಜೀವನ್ಮುಕ್ತನೆನಿಸಿದ
ಯತಿಯು ಶಿವಲಿಂಗಾರ್ಯ ಶರಣರ ಕೃತಿಗೆ ಸಮವುಂಟೆ ॥ ೩೭ ॥

ಸಾದರದಿ ಕಥೆಯಾಣ್ಮನುಂ ದು
ರ್ಬೋಧಕಂ ತಾನಾಗೆ ಸದ್ಗುಣ
ವೇದ್ಯನೆನುತಂ ಕಾವ್ಯದೊಳು ಕವಿ ಪೊಗಳಬೇಕೆಂಬಾ
ಹಾದಿಯಿಂದಂ ಪೇಳ್ದುದಲ್ಲವು
ಮಾಧವನ ಪದದಾಣೆ ಸತ್ಯವು
ಸಾಧು ಶಿವಲಿಂಗಾರ್ಯ ಶಿವಶರಣೆಂದು ನಂಬುವುದು ॥ ೩೮ ॥

ಎಸೆವ ಜ್ಞಾನಾಮೃತದ ಚರಿತೆಗೆ
ಅಸಮ ಶಿವಲಿಂಗೇಶನೊಡೆಯನು
ಕುಶಲ ಸದ್ಗುರು ಲಿಂಗ ಚರರಧಿ ದೈವಗಳು ಮತ್ತೆ
ಹಸನಮಕ್ಕುಂ ಕಷ್ಟಗಳು ಕೈ
ವಶವು ಭೋಗಾಪೇಕ್ಷೆ ಮೋಕ್ಷವು
ಸುಸಿಲ ಭಾವದಿ ಶ್ರವಣ ಪಠಣ ಧ್ಯಾಸ ನಿಜಮಾಗೆ ॥ ೩೯ ॥

ಇಂತು ಗುರುಚರಲಿಂಗ ಭಾಗ್ಯದಿ
ಸಂತ ಶಿವಲಿಂಗಾರ್ಯ ಶರಣನು
ಪಂಥ ವಿಶಿಷ್ಟಾದ್ವಯ ಕ್ರಿಯಾಚಾರವನು ಪೊಂದುತಲಿ
ಅಂತಕಾರಿಯ ಪದವ ಸೇರ್ದ
ತ್ಯಂತ ಮಹಿಮೆಯ ಮೆರೆದು ತವನಿಜ
ವಾಂತ ಶರಣರ ಚರಿತಕಾವುದು ಮೊದಲದೆಂತೆನಲು ॥ ೪೦ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳಿ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ಪೀಠಿಕಾ ಸಂಧಿ ॥ ೪೧ ॥

# ಸಂಧಿ ೨

ವಿರತ ಶಿವಲಿಂಗೇಶನೊರವಿಂ
ಶರಣ ಶಿವಲಿಂಗಾಖ್ಯ ಜನಿಸಿದ
ಪರಮ ಮಾದನ ಹಿಪ್ಪರಗಿ ಪುರದೊಳಗೆ ಜಗವರಿಯೆ ॥ ಪಲ್ಲ ॥

ವ್ಯೋಮಕೇಶನೆ ಸಾಮಗಾನ ಸು
ಪ್ರೇಮಿ ಕಾತ್ಯಾಯನಿಯಳಿವರ
ವಾಮ ಶೋಭಿತ ಭೀಮ ಭವಹರ ತ್ರಿಪುರ ಸಂಹರನೆ
ಸೋಮ ಸುತೆಯಾಣ್ಮದಟನಾಶನ
ಶಾಮ ಕಂಧರ ಸುಮನ ಸಾರ್ಚಿತ
ಸ್ವಾಮಿ ಶಿವಪುರವಾಸ ಶಿವಲಿಂಗೇಶ ಪೊರೆಯೆನ್ನಂ ॥ ೧ ॥

ಪೊಡವಿ ಸತಿಯಳು ತನ್ನ ನಡುವಿಗೆ
ಬೆಡಗಿನೋಸುಗ ರಜತದೊಡ್ಯಾ
ಣಡುತ ಬಿಗಿದಿಹಳೆಂಬ ಮಾಳ್ಕೆಲೆ ಕಡಲು ಥಳಥಳಿಸಿ
ಕಡು ಸೊಬಗದದರಿಡುವ ಮಡುವಲಿ
ಮಡುಗಿ ಹೊಡಮಡು ಜಲಚರಂಗಳು
ಘುಡದ ವಡಭಾನಳದಿ ವಾರುಧಿ ಗಡಬಡೇನೆಂಬೆ ॥ ೨ ॥

ವಿರಸ ಸುಧೆದಧಿಯಿಕ್ಷುರ ಸಸುರೆ
ಪರಮ ಶುದ್ಧೋದಕವು ಸರ್ಪಿ
ಪರಿಯ ನಾಮದಿ ಮೆರೆವ ವಾರಿಧಿ ಸಪ್ತಕೆಂಬುವವು
ಹರಗೆ ಚಂದ್ರನು ಹರಿಗೆ ಲಕ್ಷ್ಮಿಯು
ಸುರಪಗೈರಾವತವು ಮಿಕ್ಕಿನ
ಸುರರಿಗಮೃತವನಿತ್ತೆನೆಂದುಘ್ಘಡಿಸುತುಕ್ಕೇರೆ ॥ ೩ ॥

ಸುತನು ಗುರುದ್ರೋಹಕನು ಮತ್ತೆಯು
ಸುತೆಯಳತಿ ಚಂಚಲೆಯು ಸುತೆಪತಿ
ಕ್ಷಿತಿಯೊಳಗೆ ಭವರೋಗಿ ಪೌತ್ರನು ಸಿತಗನರಿಯಲಿಕೆ
ಮತಿವಿಹಿನ ಪಿರಿ ಪೌತ್ರನಾತನ
ಸತಿಯು ಸಿರಿ ಹೀನಾದಳೆನ್ನನು
ಯತಿ ತಿಲಕ ಭಂಗಿಸಿದನೆನುತ್ಸಾರುಧಿಯುವಳಗಾಂತು ॥ ೪ ॥

ಸುರಪನೋಜ್ರದ ಭಯಕೆ ಹೆದರುತ
ಗಿರಿಯು ಮೈನಾಕೋಡಿ ಬಂದಾ
ಶರಧಿ ಪೊಗಲುರೆ ತಮ್ಮ ಗೋತ್ರಕೆ ಕುಂದುಬಹದೆಂದು
ಭರದಿ ಪೊರಗಿದಿರಾ ಬರುತಿಹ
ಗಿರಿಗಳೋ ಪೇರ್ದೆರೆಗಳೋ ಮದ
ಕರಿಗಳೋಯೆಂಬಂತೆ ಘೋರ್ಗರೆದುಬ್ಬಿ ಪೊರಸೂಸೆ ॥ ೫ ॥

ಇಂತು ಸಪ್ತಾಂಬುಧಿಯ ಗರ್ಭದೊ
ಳಂತು ಜಂಬೂಪಕ್ಷ ಕುಶ ಕೌಂಚ
ಚಾಂತ್ರ ಶಾಖಾ ಶಾಲ್ಮಲೀ ಪುಷ್ಕರವು ಸಪ್ತಾಗಿ
ಮುಂತೆ ಈಶನು ಸಕಲ ಸೂದ್ವೀ
ಪಾಂತ ಭಾಗ್ಯವನೆಲ್ಲವಿದಕಿ
ತ್ತಂತೆ ಕಾಣಿಸಿ ಮೆರೆವ ಜಂಬೂದ್ವೀಪ ಮಿಗಿಲೆನಿಸಿ ॥ ೬ ॥

ಎಸೆವ ಜಂಬೂದ್ವೀಪರನ್ನೆಯು
ಮಿಸುಪ ದರ್ಪಣದಂತೆ ಭಾರತ
ವಸುಮತಿಯು ಸದ್ಧರ್ಮದಾಗರಮಾಗಿ ರಂಜಿಸುತೆ
ಶಶಿಧರನ ಪದಕಾಗಿ ತಪಿಸುವ
ಅಸಮ ಸಂಯಮಿ ಜನಕೆ ಸುಸ್ಥಲ
ವಿಸರಮಾಗಿಹ ವೀರನೃಪರುದಯಕ್ಕೆ ತಾ ಮುಖ್ಯ ॥ ೭ ॥

ಸಕಲ ಜಾಣ್ಮೆಯ ಜಾಣರಿಂದಂ
ಸಕಲ ಧಾತುಗಳ್ವೃದ್ಧಿಯಿಂದಂ
ಸಕಲ ಮಂಗಲಮಯದೊಳಷ್ಟಾಷಷ್ಟಿ ತೀರ್ಥಗಳು
ಸಕಲ ಫಲ ತರು ಕುಸುಮ ಸರಂ
ಸಕಲ ಸಂಪದ ಸುಖದ ತಾಣಂ
ಸಕಲ ಧಾನ್ಯದ ಮೂಲ ಜನ್ಮತೆ ಮಾತೆ ಗರ್ಭವಿದು ॥ ೮ ॥

ಭಕ್ತಿಮುದಾಯಕರು ವಚನಾ
ಸಕ್ತ ಗುಣನಿಧಿ ಜ್ಞಾನಕ್ರಿಯದವಿ
ಮುಕ್ತ ಮಹಿಮರು ಮಂತ್ರುತಂತ್ರಾಮ್ನಾಯ ಸ್ಮೃತಿಹಿತರು
ಭಕ್ತರೇಕೀಕರಣರುಂ ಶಿವ
ಭಕ್ತಿಯಿಂ ಕುಲಜಾತಿ ಮೀರಿದ
ಶಕ್ತ ಶರಣರ ಸೀಮೆ ಭಾರತನಾಮ ಸುಖದಾಮ ॥ ೯ ॥

ಶಿವನಿಲಯ ಶಿವಧ್ಯಾನ ಚಿಂತನ
ಶಿವಭಜನ ಶಿವಭಕ್ತಿ ಶಿವಜಪ
ಶಿವಧರ್ಮ ಶಿವಲಿಂಗ ಪೂಜನ ಸ್ತವನ ಕೀರ್ತನವ
ಶಿವಚಿದಾನಂದಾತ್ಮಜ್ಞಾನದಿ
ಶಿವಯೋಗದಲಿ ರಮಿಪ ಲಿಂಗಾಂ
ಗ್ಯವನಿಸಿದ ಸುಖದವನಿ ಭಾರತ ಜನನಿ ಗುಣ ಸದನಿ ॥ ೧೦ ॥

ಸುಮಗಳೊಳು ವರಜಾಜಿ ಕವಿಕುಲ
ವಿಮಲರಲಿಯಾ ಕಾಳಿದಾಸಂ
ಸುಮನರಲಿಯಮರೇಂದ್ರು ಪುರುಷರಲಧಿಕ ಮಹವಿಷ್ಣು
ರಮಣಿ ರತ್ನದಿ ರಂಭೆ ಮಣಿಗಳ
ಕ್ರಮದಿ ಚಿಂತಾಮಣಿಯ ನದಿಗಳ
ಲಮರಗಂಗೆಯು ಮೇಲೆನಿಪವೋಲ್ಮೆರೆವ ಭಾರತವು ॥ ೧೧ ॥

ಎಲ್ಲ ದೇಶಂಗಳೊಳುಮಧಿಕಂ
ಸಲ್ಲಲಿತ ಭಾರತವುಮಿದರೊಳು
ಬಲ್ಲತನದಿಂ ಮೆರೆವ ಕರ್ನಾಟಕದ ವಿಸ್ತರವ
ಬಲ್ಲೆನೇ ನಾನೇನು ಪೇಳಲಿ
ಸೊಲ್ಲಿಸಲುಯೆನ್ನಳವೆಯೆಲ್ಲವು
ಫುಲ್ಲನಾಭನ ಶಯನಸರಸನೆಗೆ ಪೇಳಲರಿವಾಗಿ ॥ ೧೨ ॥

ಪುದಿದ ಕನ್ನಡನಾಡು ಸಿರಿಯಿಂ
ಸದಮಲಾಸ್ತಿಕ ವಿಭವದಿಂ ಗುಣ
ಚದುರಿನಿಂಕೃಷ್ಯಾದಿ ಕರ್ಮಗಳೊದವಿನಿಂ ಮತ್ತೆ
ಸದಯಮನ ಸದ್ವೃತ್ತಿಯಿಂದಂ
ಮದನ ಹರನನೊಲಿಸಿ ಪುಣ್ಯದ
ಫದವಿಗಾಶ್ರಿತರಾಗಿ ಮೆರೆಯುವ ಸುಭಾಗ್ಯ ತತಿಯಿಂದಂ ॥ ೧೩ ॥

ಮೆರೆವ ಕನ್ನಡಸೀಮೆ ತಾನುಂ
ತೊರೆಗಳಿಂ ಪೇರ್ಗೆರೆಗಳಿಂದಂ
ಪರಿವ ಕಾಲುವೆ ಕೊಳನ ಸುಂದರ ಮರಗಳಿಂ ಮತ್ತೆ
ಹರ ಮಹಾಕ್ಷೇತ್ರಂಗಳಿಂ ಗುಹೆ
ಪರಮ ಗೋಪುರವೀಶ ನಿಲಯಂ
ಪರಿವ ನದಿಗಳು ತೀರ್ಥ ಮಠ ವನ ಪುಣ್ಯವಲಯಗಳು ॥ ೧೪ ॥

ಅಲ್ಲಿಗಲ್ಲಿಗೆ ಮೆರೆವ ಗಿರಿಗಳು
ಅಲ್ಲಿಗಲ್ಲಿಗೆ ದುರ್ಗ ಗಿಡಗಳು
ಅಲ್ಲಿಗಲ್ಲಿಗೆ ನಗರವಾಗರ ಪುಷ್ಪವಾಟಿಗಳು
ಅಲ್ಲಿಗಲ್ಲಿಗೆ ಕೂಪಕಾವಲಿ
ಅಲ್ಲಿಗಲ್ಲಿಗೆ ಬಾಳೆ ಕಿತ್ತಳೆ
ಅಲ್ಲಿಗಲ್ಲಿಗೆ ಮದನ ಬಾಣದ ಬೆಳೆಗಳೆಸೆದಿಹವು ॥ ೧೫ ॥

ಎಲ್ಲಿ ನೋಡಲು ಪುಣ್ಯಕ್ಷೇತ್ರಗ
ಳೆಲ್ಲಿ ನೋಡಲು ನೀರಿನರವಟಿ
ಗೆಲ್ಲಿ ನೋಡಲು ಫುಲ್ಲನೇತ್ರರು ಕಲಶ ತುಂಬ್ಹಿಡಿದು
ನಿಲ್ಲಲಾ ಪಥವಿಡಿದು ಬರುವವ
ರೆಲ್ಲ ತೋಯವ ಕುಡಿವ ಸೆವದಿಂ
ದಲ್ಲಿ ಕುಳಿತಾ ಸುಂದರಾಂಗಿಯರಂದ ಕಂಡಳುಪಿ ॥ ೧೬ ॥

ಮಾರನಸ್ತ್ರದ ಘಾಯದಲಿ ಬಾ
ಯಾರಿ ನಡೆಗೆಟ್ಟೇಳದಲೆ ಧರೆ
ಗೂರಿ ಕೈಮುಗುಳೆದ್ದುಪೋಗುವ ಪಥಿಕರನು ಕಂಡು
ನಾರಿಯರು ಹಾಸ್ಯವನು ಮಾಡುತೆ
ದಾರಿಯವರಿಗೆ ನೀರನೆರೆಯುತ
ತೋರಮುರುಬಿನ ಭಾರದಿಂದರವಟೆಯೊಳ್ರಾಜಿಪರು ॥ ೧೭ ॥

ಅಸಮ ವನ ತೀರ್ಥಾದಿ ಕ್ಷೇತ್ರಗ
ಳೊಸೆದು ಪಡೆದಿಹಳಲ್ಲದೇ ಬಹು
ಕುಶಲಮತಿ ಕವಿ ಕರುಣೆವಿಬುದಾಳಿಗಳ ಪೆತ್ತಾಕೆ
ಬಸವ ಮುಖ್ಯ ಪ್ರಮಥವರ್ಯರ
ವಿಸರ ಶಿವಶರಣಾಗ್ರಗಣ್ಯರ
ಪಶುಪ ಭಕ್ತರ ಪಡೆದ ರನ್ನೆ ಸುಕನ್ನಡದ ಚೆನ್ನೆ ॥ ೧೮ ॥

ಮಿಂತು ನಾನಾಸೊಬಗಿನಿಂ ಮೆರೆ
ವಂಥ ಕನ್ನಡ ಸೀಮೆ ಬಳಿಯೋ
ಳ್ಮಂತೆ ಪಾವನೆಯೆನಿಸಿ ಪರಿವಳು ಭೀಮೆ ನದಿನಾಮೆ
ಸಂತ ಜನಕಂ ಶಾಂತಿ ಕರಮುತೆ
ಪಂಥಕಾರರ ತೃಷವ ಪೂರಿತೆ
ಚಿಂತೆಪಾವಕ ನಾರಿಪೆನಗಾರ್ಸಾಟಿಯಿಲ್ಲೆನುತೆ ॥ ೧೯ ॥

ಸಾಗಿ ಧ್ವನಿಗೈಯ್ಯುತಲಿ ಭೂಮಿಯ
ಮೇಗೆ ನಿರ್ಮಲೆಯಾಗಿ ಬಲು ಶುಭ
ಮಾಗಿ ಸಚರಾಪ್ರಾಣಿಚಯಕಂ ಪ್ರೀಯಕರಮಾಗಿ
ಭೂಗಗನ ಬ್ರಹ್ಮಾಂಡವೆಲ್ಲಕೆ
ಸಾಗರನೆ ಮತ್ಪ್ರೀಯನೆನುತಲಿ
ಕೂಗಿ ಸಾಗುವ ತೆರದಿ ಪರಿಯುತ್ತಿರ್ದಳುರೆ ಭೀಮೆ ॥ ೨೦ ॥

ಸಣ್ಣ ಸೆಳೆ ನಡು ಸುಳಿಯ ನಾಭಿಯು
ತಿಣ್ಣ ಕುಚವರ ಸಂಚಿ ಪ್ರಭೆಯುತೆ
ಕಣ್ಣು ಝಷಮುಖ ಪದ್ಮಪುಳಿನವಜ ಘನಮಯವಾಗೆ
ಬಣ್ಣ ಜಲವರ ಕುಂತಲಾಳಿಯು
ಚೆನ್ನೆ ಭೀಮಾನದಿ ರಮಣಿ ತಾ
ತನ್ನ ಪುರುಷನ ಕೂಡಲೆಳಿಸುವ ತೆರದಿ ಭರಸಾಗೆ ॥ ೨೧ ॥

ಸಡಗರದ ಹೊಯ್ಲುಗಳ ತೆರೆಗಳ
ಗಡತಿಮಿಂಗಿಲ ಮಚ್ಛ ಕಚ್ಛಪ
ವಡಸಿ ತುಂಬಿದ ಚಾರು ಪಾನೀಯ ಪ್ರವಾಹದಲಿ
ಕೆಡಕು ನಕ್ರವ್ರಾತದಿಂ ಭೋ
ರಿಡುವ ಭೀಕರಧ್ವಾನದಿಂದು
ಪ್ಪಡಿಸಿ ಪರಿಯುತ್ತಿರ್ದಳುರೆ ವರಭೀಮ ಜಲಧಾಮೆ ॥ ೨೨ ॥

ಸುಧೆ ನಿರಸವಾದುದಕ ಸಂಚಯ
ಮದನೆ ಹರಗಂ ವಿಷವನಿತ್ತವ
ಪುದಿದ ವಡಭಾನಲನ ಮುನಿಯಿಂ ಭಂಗತಾಳ್ದವನೀ
ಸದಯ ಸದ್ಗುಣೆಯಾನು ಸರಿನದಿ
ಸುದತೆರಲಿ ಸನ್ಮಾನವತಿಯೆಂ
ದೊದರಿ ಪೇಳುವ ತೆರದಿ ಗುಳುಗುಳಿಸಿದುದು ಭೀಮಾಂಬು ॥ ೨೩ ॥

ಪರಮ ಪತಿವ್ರತೆ ತನ್ನ ನಿಜವಾ
ಸರ ಮನೆಯದಿಂದ್ದೊರಗೆ ಚರಿಸಲು
ಭರದಿ ದುಜಗ ನಿಂದೆಯುದರಂತಾನು ಕಂಡಕಡೆ
ಚರಿಸಿದರ ಧರೆ ಜನರುಯೆನ್ನಂ
ಪರಿಪರಿಯುಲ್ಲಳಿಯುವರು ಎನುತಂ
ಬಿರಗುವಟ್ಟೊಡಲೊಳಗೆ ಪರಿವಳು ಪಾಂಟಲಳವೆನೆಸಿ ॥ ೨೪ ॥

ಸರ್ವಮಂಗಲೆಯಿಂದ ಶರ್ವಗೆ
ಸರ್ವಮಂಗಲನಾಮ ರೂಪಗ
ಛ್ರೋರ್ವತೆರದಿಂ ಭೀಮೆಯಾದೆಂನಿಂದ ಸಾಗರಕೆ
ಉರ್ವಿಯೊಳು ಪ್ರಖ್ಯಾತ ಪಾವನ
ಸಾರ್ವನಾಮವದಾಯ್ತೆನುತಂ
ಪೂರ್ವವಾಹಿಂನಿ ಪುರುಷನಂ ಬಿನದಿಸುತ ಪರಿಯುವಳು ॥ ೨೫ ॥

ಇಂತು ಸೊಗಸೊಯ್ಯಾರದಿಂ ಪರಿ
ವಂಥ ಭೀಮೆಯ ತಟದ ಪೂರ್ವಕೆ
ಪ್ರಾಂತ ಮೊಗಲಯಿ ಸೀಮೆ ಬಳಿಗೂಡಿರುವ ಮಧ್ಯದಲಿ
ಮಂತು ಮಿಂತೆನಲಾರದಿಹ ಧರೆ
ಕಾಂತೆನೊಸಲಲಿ ಕಸ್ತೂರಿಯ ತಿಲ
ಕಾಂತ ಪರಿಯಲಿ ಮೆರೆವ ಮಾಧನ ಪುರವು ಹಿಪ್ಪರಿಗೆ ॥ ೨೬ ॥

ಎಂತು ಬಣ್ಣಿಪೆ ಕೋಟೆ ಕೊತ್ತಳ
ನಂತ ಡೆಂಕಣೆಯಾಳವೇರಿಗ
ಳಂತರಂತರಮಾಗೆ ರಂಜಿಪುದಗುಸೆ ಹುಲಿ ಮುಖದ
ಚಿಂತೆ ನೀಗಿಪವು ಪವನಂಗಳು
ಮಂತರಂಗದ ಸುಖದ ಸಾಧನ
ವಾಂತ ಶಿವನಿಲುಯಾಂತ ಸ್ಥಲವಾನಂತ ಶೋಭಿಪವು ॥ ೨೭ ॥

ನಾಡೆ ಸೊಗಸಿಂ ಮೆರೆವ ಪುರವಿದು
ನಾಡಿನೊಳು ನಾಮಾಂಕಿತವು ಸಿರಿ
ಗೂಡಿ ಶ್ರೀಮದ್ವೀರಶೈವರ ಬೀಡು ಸುಖದೀಡು
ಕೂಡಿ ನೈಜಾಂಹದ್ದು ಜಹಗಿರೆ
ಗೌಡ ಸರಕಾರ್ ಶಾನುಭೋಗ ಸು
ಪ್ರೌಢ ಜನಕಾಶ್ರಯದ ಸ್ಥಲಮಾಗಿಂತು ರಾಜಿಪುದು ॥ ೨೮ ॥

ಪುರದ ಉತ್ತರ ದಿಕ್ಕಿನೊಳಗಾ
ಪರಮ ಸಂಗಮ ತೀರ್ಥವಿರುವದು
ಹರನ ಭಕ್ತನು ಬಸವನಾ ಕಲ್ಯಾಣದಿಂ ಕೊನೆಗೆ
ಪೊರಟು ಸಂಗಮಕ್ಕೈದುತಿರಲ
ಲ್ಲಿರದೆ ಲಿಂಗಾರ್ಚನೆಯನೆಸಗಿದ
ಕುರುಹು ಸಂಗಮ ತಾಣವೆಂದುಂ ಪಿರಿಯರೊರೆಯುವರು ॥ ೨೯ ॥

ಮೆರೆವ ವೀಥಿಯ ರಾಜಮಾರ್ಗದಿ
ತರತರದವಂಗಡಿಗಳೋರಣ
ಪುರಜನರು ಪರಜನರ ಗೊಂದಣ ಶಾಸ್ತ್ರ ಪಾಠಕರು
ಪರಮ ಸಾತ್ವಿಕ ಸತ್ಯವಂತರು
ನಿರುತ ಲಿಂಗಾರ್ಚನೆಯ ನಿಷ್ಟರು
ಮೊರೆಗಳತ್ಯಾಂತಧಿಕವಿತ್ತರು ದಾನ ಧಾರ್ಮಿಕರು ॥ ೩೦ ॥

ಸೋಮಶೇಖರ ಭಕ್ತಿಪ್ರೀತರು
ಆ ಮಹಾಶಾಸ್ತ್ರವನು ಬಲ್ಲರು
ಪ್ರೇಮಿ ಜಂಗಮ ಲಿಂಗ ಗುರು ದಾಸೋಹಿ ಮಾನಿಗಳು
ಕಾಮಹರ ಸಖನಂತೆ ಧನದಬಿ
ರಾಮದಿಂದ್ರನ ಸರಿಯ ಸುಖಿಗಳು
ಸಾಮಜಾರಿಯ ಭಕ್ತರಲ್ಲದರಿಲ್ಲ ಪುರದೊಳಗೆ ॥ ೩೧ ॥

ಹರನ ಭಕ್ತರ ಗೃಹಗಳೈನೂ
ರಿರುವ ಜನಮೂರ್ಸಾಸಿರು ಕೃಷಿ
ಕರರು ವಾಣಿಜ್ಯಮಾಲಗಣ ದೇವಲರು ನೈಕರರು
ಮರುತಭಾಂಡಕ ತೈಲಕಾದೀ
ಪರಮವೀರ ಸುಶೈವರಿರುತಿಹ
ಪುರವು ಸರಿಯಿಲ್ಲದಕೆ ಶಿವಪುರವೆಂದು ನುಡಿಯುವರು ॥ ೩೨ ॥

ಲಿಂಗಚರಪೂಜಕರುಮೆಲ್ಲರು
ತುಂಗವೀರ ಸುಶೈವರಲ್ಲದೆ
ಯಂಗ ಕಾಯಕದಿಂದ ಹಿರಿಕಿರಿದೆಂಬ ನಾಣ್ನುಡಿಯು
ಬಂಗದವಮಿಸುವ ತರತರಹ ನಾ
ಮಂಗವಿಸೆ ಮನುಜೆಂಬ ನಾಮವ
ಸಂಗಿಸಿದ ತೆರನಂತೆ ವೀರಸುಶೈವ ಮಹತತ್ವ ॥ ೩೩ ॥

ಇಂತು ಸೊಬಗಂದಳೆದ ಪುರವಿದು
ಮೆಂತು ಬಣ್ಣಿಸೆ ಬಗೆಗಗೋಚರ
ಶಾಂತಲಿಂಗ ಸುಪಟ್ಟದಾರ್ಯರ ಮಠವು ಗುರುತಟವು
ಶಾಂತಸೈರಾಭಾರಿ ವಿರತ ಮ
ಹಂತ ಶಿವಲಿಂಗೇಶ ಶಿವಯೋ
ಗಾಂತ ಜಗವಿಖ್ಯಾತ ಮಠವತ್ಯಂತ ಶುಭಚರಿತಾ ॥ ೩೪ ॥

ವೀರಶೈವೋತ್ಕರ್ಷ ಧರ್ಮೋ
ದ್ಧಾರ ತಾರಕ ಪ್ರಮಥ ನಾಯಕ
ಮಾರಹರ ಶರಣಾಳಿ ಸಾಹ್ಯಕ ಬಸವ ಗುಣತಿಲಕಾ
ಸಾರಮಹಿಮೆಯ ಮೆರೆದ ಕ್ಷೇತ್ರಾ
ಗಾರ ಕಲ್ಯಾಣ್ಣವಿದೆನಿಸಿತು
ವೀರ ಶಿವಲಿಂಗ್ವಿರತ ಮಹಿಮೆಯ ಕಾರಣದ ಬಲವು ॥ ೩೫ ॥

ಇಲ್ಲಿ ದೇವಾಂಗ್ಮುನಿಯ ಗೋತ್ರಜ
ರಲ್ಲಿ ಹಿಮಕೇದಾರ ಪೀಠಕ
ಬಲ್ಲ ರಾಮ ಸುಲಿಂಗ ಸೂತ್ರಕ ದೇವ ದಾಸಮಯರ
ಸಲ್ವನೈಪರ ಸಾಂಪ್ರದಾಯಕ
ಸಲ್ಲಲಿತ ಬಸವಣ್ಣನೊಂಶಜ
ಮಲ್ಲಿಕಾರ್ಜುನನೆಂಬ ನಾಮಕನುಲ್ಲಸಿತನಾಗಿ ॥ ೩೬ ॥

ಪರಮ ಸಾತ್ವಿಕನೆನಸಿ ಲೌಕಿಕ
ರಿರವಿನಲಿ ಪ್ರಿಯನಾಗಿ ಜಗದಲಿ
ಕರೆವ ನಂದಿಕೋಲಿನವರೆಂಬಾಡ ನಾಮದಲಿ
ಪುರದ ಮಧ್ಯದಿ ತನ್ನ ತಾಣದ
ಲಿರುತ ಸ್ವಸರ ಕಾಯಕಂ ತಾ
ನರಿದು ಮಾಡುತ ಲಿಂಗ ಗುರುಚರ ಭಕ್ತಿಯಲಿ ಮೆರೆವ ॥ ೩೭ ॥

ತಂದೆ ತಾಯಿಗಳಾಜ್ಞೆಯೆಂಬಾ
ನಂದವನ ಸಿಧಿಯೀಸಿ ಮಾಡುತ
ಮಂದಿರದ ಕೆಲಸವನು ತನ್ಮನದಂದ ತಿಳಿವುದಕೆ
ಸಂದ ಜಂಗಮ ಲಿಂಗವಿರತರ
ಚಂದಪದ ವೃಂದವನು ಕಾಣಲು
ಒಂದು ಬಾರಿಯುಮವರ ಘತಕಾನಂದದಿಂ ಬರುವ ॥ ೩೮ ॥

ಭಕ್ತಿಗುಣದ ಭಾಗ್ಯಶಾಲಿ ಕು
ಯುಕ್ತಿ ನುಡಿ ಭಿಡೆ ಭೀತಿ ಭುಜಗಣ
ಯುಕ್ತನಲ್ಲವು ಭೂತಿ ದಾರಿಣಿ ಭೇದ ಬೈಷ್ಕಾರಂ
ಸೌತ್ರತ್ಯ ಲಿಂಗ ಸುಭೋಗಿ ಭೌತಿಕ
ಸತ್ಯವಜ್ಞನು ಭಂಗವಿರಹಿತ
ಮುಕ್ತ ಭಾಷ್ಪಾಳಿಗನು ಶುಭಕಾರಗಳ ಪಂಕ್ತಿಗನು ॥ ೩೯ ॥

ಈ ತೆರನಂ ಇವನಿರವು ರೀತಿಯು
ಮಿೂತನಂಗನೆ ಪುಣ್ಯವತಿ ರೂ
ಪಾತಿಶಯುದೊಳು ಪುರುಷ ಭಕ್ತಿಯೋಳೋಕ್ತಿಯೊಳು ಮತ್ತೆ
ನೀತಿಯೊಳು ಸರ್ವಾಭಿಮಾನದಿ
ಭೂತಳದಿ ಸರಿಯುಲ್ಲೆನಿಪ ವಿ
ಖ್ಯಾತಿ ತವರ್ಮನೆಯೆನಿಸಿ ಬಾಳುತಿರ್ದಳಾ ಮಹಿಳೆ ॥ ೪೦ ॥

ಪರಮ ಪತಿವ್ರತೆ ಕರುಣ ಗುಣವತೆ
ನಿರುಪಮಾಘನ ಹೃದ್ವಿರಾಜಿತೆ
ದುರಿತ ಪಾತಕ ಭೀತೆ ಲಜ್ಜಾವಿನಯ ಶಾಂತಿಯುತೆ
ಸರಳ ಮನಸು ವಿವೇಕಪೂರಿತೆ
ಪರನ ಪೂಜೆಯುಗ್ಯೈವ ಮತಿಯುತೆ
ತರುಣಿಮಣಿ ಶಿರೋರನ್ನೆ ಸುಕುಲೋತ್ಪನ್ನೆ ಚಿನ್ನಾಂಬೆ ॥ ೪೧ ॥

ಶರಣ ಜಂಗಮರನುಪಚರಿಸುತೆ
ತಿರುಪಿಗಳಿಗಂ ಭಿಕ್ಷೆವೀಯುತೆ
ಹಿರಿಯಜನ ಮಾವತ್ತೆ ಹಿತವಚನೋಕ್ತಿ ಪಾಲಿಸುತೆ
ಗುರುವೆ ಪತಿಯೆಂದ್ಧರಸಿ ಭಜಿಸುತೆ
ಪರಜನಕೆಯು ಪ್ರಕೃತಿಯಗ್ಯೈಯ್ಯುತೆ
ನಿರುತ ಸೇವಿಸುತಿರ್ದಳುರೆತವನಾಥನೊಳ್ಕೂಡಿ ॥ ೪೨ ॥

ವಿಗಡ ಸ್ತ್ರೀಯರ ನಡತೆಯುಂದದಿ
ಬಗೆಯದಲೆ ಪುರುಷನನು ಬೈಯ್ಯುತ
ಹಗರಣೆಸಿ ಬಳಿ ರುಳಿ ಸರಿಗೆ ವಡ್ಯಾಣ ವಂಕಿಗಳ
ಬೊಗಳಿ ಬೇಡುತ ತರಿಸಿ ಋಣದಾ
ಲಗಳೆ ಹೇರುತ ಪತಿಯ ಬೆನ್ನೊಳು
ಮಗುಳೆ ದುಡಿಸುವಳಲ್ಲ ನಾರಿಯು ಮಾರಿಯೇ ನಿಜವು ॥ ೪೩ ॥

ಉಣ್ಣ ಕುಳಿತರೆ ಬೇಕೆನೆಂಬಳು
ತಣ್ಣಗಿರೆ ಬೇಡ್ವಾರದೆಂಬಳು
ಕಣ್ಣು ಬಿಡುತಿರಲ್ನೋಡಿ ನೋಡಲಿಯಲ್ಲಿ ನಾ ತಂದು
ಸಣ್ಣ ಭಾಂಡಮದಾಯ್ತು ಪಾಕವ
ನುಣ್ಣುವಿಂನೇನ್ಮಣ್ಣು ನೀಡಲಿ
ಬಣ್ಣಗಿತ್ತಿಯು ಹೊರಗೆ ಪೋಗುತಲುಣ್ಣುವಳು ಬಂದು ॥ ೪೪ ॥

ಈ ತೆರದ ಸತಿಯಲ್ಲ ಸಂಪದ
ಘಾತೆ ದುರ್ನೀತಾಂತೆ ನರಕ
ವ್ರಾತೆಯಂತಕ ದೂತೆ ದುರ್ದರ ಕೋತೆ ಕಡುಕುಚಿತೆ
ಬಾತು ಕೂಡಲು ಬೇಡ ಗೃಹಸ್ಥನ
ರೀತಿಯಲ್ಲವು ಸನ್ಯಾಸತ್ವವೆ
ಸಾತಿಶಯ ಸುಖವೆಂದ ಜ್ಞಾನಿಯು ಮತಕೆ ದಿಕ್ಕಾರವು ॥ ೪೫ ॥

ನಾರಿ ಸರ್ವಾಧಾರಿ ಸುರತರು
ಸಾರಿಮಣಿ ಚಿಂತಾಮಣಿಯು ಗುಣ
ನಾರಿ ಪರುಷದ ಖಣಿಯುಮಮೃತವತೀವಿದಪಳು ಕು
ನಾರಿ ಮುನಿಯದ ದಾರಿ ಸ್ವರ್ಗದ
ದೂರವಿಲ್ಲವಪಾರ ಸದ್ಗತಿ
ಸೇರುವದೆ ನಿಜ ಧನ್ಯಮೀ ಗೃಹಸ್ಥಾಶ್ರಮದ ಸುಖವು ॥ ೪೬ ॥

ಇಂಥ ಗೃಹಸ್ಥಾಶ್ರಮದ ಸದ್ಗುಣ
ಪಂಥಿ ಸುವರ್ಣಾಂಬೆ ವೈಭವ
ವಾಂತ ನಾಮವೆ ತನ್ನದಾಗಿರೆ ಶಾಂತಮಯಳಾಗಿ
ಮುಂತೆ ನಾನೇನ್ಬೇಡೆ ಮೊದಲೆನೆ
ಗಾಂತ ಬಂಗಾರೆಮ್ಮ ನಾಮವ
ನಿಂತ ಆಭರಣೆರಲು ಪತಿಯಂ ಬೇಡದಧ್ದುರುಹಿಪಳು ॥ ೪೭ ॥

ಸುಂದರಾಂಗಿ ಸುನೀತಿವಂತಳು
ಬಂಧು ಜನರೊಳು ಪ್ರೀತಿಯುಕ್ತಳು
ಪೊಂದಿ ಶಾಂತಿಯು ಭ್ರಾಂತಿರಹಿತಳು ಜಾಣೆ ಶುಕವಾಣಿ
ಮಂದಯಾನೆ ಪುನೀತೆ ಪುಣ್ಯಾ
ನಂದ ನುಡಿ ನಡೆಯೊಂದು ಕುಂದಣ
ದಂದ ಬಂಗಾರೆಮ್ಮ ಬಹುತರ ಜ್ಞಾನವುಳ್ಳಮ್ಮ ॥ ೪೮ ॥

ಬಡತನದ ಬಾಳುವೆಯು ನಡೆಸುತ
ಬಿಡದೆ ಪತಿಸೇವೆಯನು ಬೀಳ್ನುಡಿ
ನುಡಿಯುಳವಳೀಂ ಬುದ್ಧಿವಂತೆಯೊ ಬೂದಿಮುಚ್ಚಿರ್ದಾ
ಕಿಡಿಯು ತೆರದಲಿ ಬೆಳಗಿ ಬೇಸರ
ವಡಸೆ ಬೈಗಳ ಬೊಗಳ್ವ ಬೋಯಿಸಿ
ಕಡಿದಳೆಂ ಜಾ ಬಮ್ಮದಡಗಿಸಿ ಬಾಹ್ಯಮರತಿಹಳು ॥ ೪೯ ॥

ಹರುಷದಲಿ ಸತಿಪತಿಗಳಿರುತಿರ
ಲರಿದು ಪರತರ ಭಕ್ತಿ ನಡೆಸುತ
ಪರಮ ಸದ್ಗತಿದಾತ ಸುತರಿಲ್ಲದಕೆ ಮನ ಮರುಗಿ
ಪುರುಷನಡಿದಾವರೆಗೆ ನಮಿಸುತ
ಕರವ ಜೋಡಿಸಿ ನುಡಿದಳೆಮ್ಮಾಯ
ಬರಹ ಫಣೆಯೊಳಿರಲುಮೇತರ ಬಾಳ್ವೆ ಪತಿ ಕೇಳು ॥ ೫೦ ॥

ಪುತ್ರರಿಲ್ಲದ ಮನೆಯು ಶೃಂಗರ
ಚಿತ್ರವಿಲ್ಲದ ಮಂಟಪವು ಹಸಿ
ವತ್ರ ತಾಯ್ತಂದಿಲ್ಲದ ಶಿಶುವಿದ್ದು ಫಲವೇನು
ಧಾತ್ರಿಯಿಲ್ಲದ ರಾಜ ಸುಡು ತಾ
ಪತ್ರಕಿಲ್ಲದ ಬಂಧು ಸುಡು ಸ
ತ್ಪುತ್ರ ಫಲ ಪುಣ್ಯಾತ್ಮರಿಗೆ ಎಮಗೆಂತು ಲಭಿಸುವುದು ॥ ೫೧ ॥

ಪುತ್ರರಿಂದಲೆ ಬಂಧು ಬಳಗವು
ಪುತ್ರರಿಂದಲೆ ನೆಂಟರಿಪ್ಪರು
ಪುತ್ರರಿಂದಲೆ ಸಕಲ ಸಿರಿ ಸೌಭಾಗ್ಯ ಸಂಪದವು
ಪುತ್ರರಿಂದಲೆ ವಂಶವೃದ್ಧಿಯು
ಪುತ್ರರಿಂದಲೆ ಮೋಕ್ಷಸಿದ್ಧಿಯು
ಪುತ್ರರಿಲ್ಲದ ಬಾಳ್ವೆ ಸುಡು ಸದ್ಗತಿಯದೆಲ್ಲಿಯದು ॥ ೫೨ ॥

ಎಷ್ಟು ಸಿರಿಯಿರ್ದೇನು ಬಹುದಿನ
ಸೃಷ್ಟಿಯೊಳು ಬಾಳಿರ್ದರೇನು
ತುಷ್ಟರೂಪದ ತ್ರಿಪುರ ಸುಂದರಿಪೋಲ್ವ ರೂಪಿರ್ದೇಂ
ಕಷ್ಟ ಸಂಸಾರದೊಳು ತನ್ನೊಡು
ಪೊಟ್ಟೆಯಿಂ ಶಿಶು ಪುಟ್ಟದಿರಲದು
ಪೊಟ್ಟೆಯೆಲ್ಲವು ಹರಕು ಚರ್ಮದ ಮೊಟ್ಟೆಯೇ ನಿಜವು ॥ ೫೩ ॥

ನಾನು ಪೂರ್ವದೊಳೇನು ಪಾಪದ
ಹೀನ ಕಾರ್ಯವಗೈದೆನೊ ಘನ
ಜ್ಞಾನಿ ಶರಣರ ಪಳಿದೆನೋಚರ ಧನವಮಡುಗಿದೆನೊ
ಭಾನು ನಯನನ ನೆನೆಯದಾದೆನೊ
ಹಾನಿ ಮನ ವಿಷಯಕ್ಕೆ ಸೋತೆನೋ
ದೀನರನು ಧಿಕ್ಕರಿಸಿ ಭಕ್ತರ ನಿಂದೆ ಕೇಳಿದೆನೋ ॥ ೫೪ ॥

ಮುನ್ನ ಮಾಡಿದ ದೋಷವೆನ್ನಯ
ಕಣ್ಣಿನಿಂ ಕಾಣದಿರೆ ಕರುಳ್ಗಳು
ನನ್ನಿಯಿಂದಘವಡಿಸಿದುದು ನಿಜವೆಂದು ಪೇಳುವವು
ಹುಣ್ಣುಮಿರದಲೆ ಬಣ್ಣವಾಗ್ಪುದೆ
ಮಿನ್ನಿದಕೆ ಗತಿಯೇನು ಶಿವಶಿವ
ಧನ್ಯಳೆನಿಸುವ ಧರ್ಮ ನಿನ್ನದು ನನ್ನದೇನಿಹುದು ॥ ೫೫ ॥

ಪ್ರಾಯದೊಳುಮಾ ತರಳನಂ ಪೆ
ತ್ತಾಯಕಯು ಮೃದು ಕರಂಗಳಿಲೆ
ಪ್ರೀಯದಿಂ ಮೇಲಕ್ಕೆನೆಗಹುತ್ತೆತ್ತಿ ನಗನಗಿಸಿ
ಮಾಯ ಮೋಹದಿ ಮಗನ ಗಲ್ಲದಿ
ಬಾಯನಿಟ್ಟಲುಗಿಸುತ ಕುಲಕುಲು
ಶ್ರೀಯ ಶಬ್ದವ ಕಾಣ್ಬುದುಂ ಪಡೆದಿಲ್ಲವಾಂ ಮೊದಲು ॥ ೫೬ ॥

ಯೆರೆದು ಮಜ್ಜನ ಶಿಶುಗೆ ಮೃದುತರ
ಪರಮ ಪಾಸಿಕೆಪಾಸಿ ತೊಟ್ಟಿಲೊ
ಳೊರಗಿಸುತ ವಸ್ತ್ರವನು ಪೊದಿಸುತ ಚಪ್ಪರಿಸಿ ಮತ್ತೆ
ಯಿರದೆ ಗುಗ್ಗಲ ಧೂಪಹೊಗೆಕೊ
ಟ್ಟರುಪಮಿಗೆ ಜೋಗುಳವಪಾಡುತೇ
ಭರದಿ ತೊಟ್ಟಿಲ ತೂಗುವಂದವ ದೊರೆವುದಂತಕಟಾ ॥ ೫೭ ॥

ಮೊಲೆಯನೊಂದಂ ಕುಡಿಯುತಿರಲಾ
ಮೊಲೆಯಪಾಲಂ ಸೋರ್ವವೆನುತಲಿ
ನಲಿದು ಕರವಂ ಪೊಂದಿಸುತ ಮೊಲೆಯುಂಬು ಮಗುವೆಂತೊ
ಸುಲಭವಲ್ಲಿದು ಸಕಲರಿಗೆ ಸ
ತ್ಕುಲಜೆಗಲ್ಲದೆ ದೊರೆಯದಕಟೀ
ನೆಲದೊಳೇಂಬಲು ಸುಕೃತವತಿ ಸಂತಾನಿ ಶುಭವದನಿ ॥ ೫೮ ॥

ಎಂದು ತನುಜರ ಚಿಂತೆಯಲಿ ಮನ
ನೊಂದು ತತ್ಕುಲವನುತೆ ಮುಖಕಳೆ
ಕುಂದಿ ನುಡಿಯಲು ಮಲ್ಲಿಕಾರ್ಜುನ ಪತಿಯು ನಸುನಕ್ಕು
ಸುಂದರಾನನೆ ಕೇಳು ಪೂರ್ವದಿ
ಕಂದು ಕಂಧರನೊಲಿಸಿ ಪಡೆದರು
ಹಿಂದೆ ಮಾದರಸನಿಗೆ ಬಸವನು ಕಂದನೆನಿಸಿದನು ॥ ೬೯ ॥

ವನಜನಾಭನು ತಪವನೆಸಗುತ
ತನುಜ ಶಂಭುವ ಪಡೆಯಲಿಲ್ಲವೆ
ಮುನಿಯ ಶುಕನು ತಪಗೈದು ಮುಚ್ಚಿಸೆ ಪ್ರಭುವೆ ಮಗನಾದ
ಘನ ಶಿಲಾದ ಮಹೋಗ್ರತಪದಲಿ
ಮನಸಿಜಾರಿಯನೊಲಿಸೆ ಗುಣಯುತ
ನನಘಸುತ ನಂದೀಶನನು ಪಡೆದುದನು ನೀನರಿಯೆ ॥ ೭೦ ॥

ಮಂಡಲಾಧಿಪತಿ ದೇವರಾಯಗೆ
ಪುಂಡ ಮಳಿರಾಜೆಂಬ ಕುವರನ
ಖಂಡ ಶಶಿಧರಮೂರ್ತಿ ಕರುಣಿಸಿಕೊಟ್ಟ ಪರಿಯಂತೆ
ದಂಡಧರ ಹರನಮಲ ನಿಃಕಲ
ಪಿಂಡ ಪ್ರಕೃತಿಯ ಜ್ಞಾನಿ ನಿರ್ಮಲ
ನಂಡಜಾಂಡಗಳಾಗು ಹೋಗನು ಬಲ್ಲ ಶಿವಯೋಗಿ ॥ ೭೧ ॥

ಶೀಲ ಸದ್ಗುಣ ಲೋಲಸತಜನ
ಕಾಲಕರ್ಮಗಳ್ಕೆಡಿಸಿ ಮಾಯಾ
ಜಾಲಮಂ ಪರಿಹರಿಸಿ ಪಾಲಿಪ ನಿನ್ನಭಿಷ್ಟವನಂ
ಹಾಳುಯೋಚನೆ ಬೇಡ ಜಗದ ಸು
ಲೀಲ ವಿಗ್ರಹ ನಿರ್ವಿಕಲ್ಪನು
ತಾಳಿ ಶಿವಲಿಂಗೇಶ ನಾಮವ ಮಠದಿ ಮೆರೆದಿಹನು ॥ ೭೨ ॥

ರೂಪಿಗೆ ರೂಪಾಗಿ ರೂಢಿ ನಿ
ರೂಪಿಗಾ ನಿಃಶೂನ್ಯನಾಗುತ
ಪಾಪ ಸಂಸ್ಕೃತಿ ತಾಪ ಶರಧಿಗೆ ಕುಂಭ ಸಂಭವನು
ಆ ಪರಮ ಕಲ್ಯಾಣ್ಬಸವ ಸ
ಲ್ಲಾಪನಲ್ಲಮ ಪ್ರಭುಚರಾರ್ಯನೆ
ಯೀ. ಪುರದ ಶಿವಲಿಂಗ ದೇವನು ವರದ ಕರನಿಹನು ॥ ೭೩ ॥

ವಿರತ ವೀರನು ಪರವಿದೂರನು
ಚರವರಾರ್ಯನು ಪರಮ ಸಾರನು
ನಿರಘನಿರುಪಮ ನಿತ್ಯ ಚಿನ್ನಿಧಿ ಚಿತ್ಕಲಾವರನು
ವರಕುಮಾರ ಸುಸಮಯ ಪಾಲನು
ಶರಣ ಜನಮನ ಕಲ್ಪಭೂಜನು
ತರುಣಿ ನಿನ್ನೀಪ್ಸಿತ ಕುಮಾರನ ಕೊಡನೆ ನೀ ಪೋಗೆ ॥ ೬೪ ॥

ಎಂದು ಸತಿಯಳ ಮನಕೆ ಶಾಂತಿಯ
ನಂದು ಪೇಳೆ ಚರಾಗ್ರಗಣ್ಯರ
ಸುಂದರದ ಪದಮಹಿಮೆ ಬಲವದು ಸತ್ಯ ಸಿದ್ಧಾಂತೆ
ಅಂದನುಡಿಯೆಂದೆಂದು ಹುಸಿಯನು
ಇಂದು ಸಫಲಾಯ್ತೆನ್ನ ಜನ್ಮವಿ
ದೆಂದು ಸಂತಸವಾಂತು ಸೈರಣೆ ತಾಳಿದಳುಮರರೆ ॥ ೬೫ ॥

ಕಲಿಗಳಾಗಲಿ ಕವಿಗಳಾಗಲಿ
ಮಲಿನ ಮನದವರಾಗಲೀ ಯತಿ
ತಿಲಕರಾಗಲಿ ತಿರಿದು ತಿಂಬುವ ತೀರ ಬಡವಿರಲಿ
ನೆಲದ ಪತಿಯಾಗಿರಲಿ ಧನದೊಡೆ
ಯ ಲಘುಮತಿ ಸುಜ್ಞಾನರಾಗಲಿ
ಸಲೆಯ ಪಡೆಯುಲೆಳಸುವರು ಪುತ್ರಾವಸ್ಯವೆನಿತುಂಟೊ ॥ ೬೬ ॥

ಕಮಲ ರವಿ ಕುಮುದೇಂದು ಶುಕ್ತಿಗ
ಳಮಿತ ಸ್ವಾತಿಗೆ ಬಾಯ್ದೆರದ ಪರಿ
ವಿಮಲ ಮನ ಹೃದಯದಲಿ ಶಿವಲಿಂಗೇಶನನುನೆನಿಸಿ
ಸುಮನಗಣನುತ ದೇವ ಚರರಾ
ಶ್ರಮಕೆ ಶಾಂತಿಯ ಕ್ರಮದಿ ಬರುತಾ
ಕ್ರಮಿಸಿ ನಮಿಸಿದಳಮಿತ ಭಕ್ತಿಯ ವಿಮಳೆಮುಖಿ ಕಮಳೆ ॥ ೬೭ ॥

ಆರು ನೀನಾರವ್ವೆನಮಗೇಂ
ಕಾರಣಂ ನೀಂ ನಮಿಪ ಬಗೆಯ ವಿ
ಚಾರವೇನೀ ಮಾತಿದೆಲ್ಲಿದು ಸಾರುತ್ಪರಸಾರು
ವೀರ ವಿರತರೆ ತವ ಪದದ್ವಯ
ವಾರಿಜದ್ದೂಳನವಶ್ಯೇವಿಪಾ
ಧಾರೆ ಸುತದರಿದ್ರೆ ತಮ್ಮಯ ಕರುಣಮಭಿವೃದ್ಧೆ ॥ ೬೮ ॥

ಕರುಣವಾವುದು ಮಾವುಗೈವದು
ತರುಳರೀಪ್ಸಿತ ವರವನೀವುದು
ಮರರೆ ನಾನೇಂ ಶಂಭು ಶಂಕರ ಶಿವನೆ ಪರಿಜನೆ
ಶರಣು ಪರಕರವಾರಿ ನೀನೈ
ಆ ರವಿ ಕಿರಣ ತೇಜ ಪಡೆದವ
ಶರಣ ಭಕ್ತರಿಗೊರದನೆಂಬುವ ಬಿರುದು ನಿನಗುಂಟು ॥ ೭೯ ॥

ಆವ ಬ್ರಹ್ಮನು ಮಾವಗಿಮ್ಮನು
ಮಾವ ವಿಷ್ಣುವು ಮಾವಗಿಷ್ಣುವು
ಮಾವರುದ್ರನು ಮಾವಗಿದ್ರನು ನೀನೆ ನಿಜದೇವ
ಪಾವನದ ತಜ್ಜೀವ ನೀನೈ
ಪಾವನಾಕಾರಕನು ನೀನೈ
ಪಾವಕನ ಪರಿದಗ್ಧ ಜನನ್ಮರಣಾಗ್ರ ಪದ ನೀನೈ ॥ ೭೦ ॥

ಸಾವುಗೈಪದು ಸೃಜಿಪರಕ್ಷಿಪ
ತ್ರಿವಿಧಕೆ ಕಾರಣನು ನೀನೈ
ಸೇವ್ಯ ಜನ ಸಂತಾನ ಚಿಂತನ ದೂರಿಸುವತಾರಿ
ದೇವ ನೀ ಬಸವೇಶ ಭಕ್ತಿಯು
ಭಾವ ಪುತ್ರನು ಬಾಲಸಂಗನು
ಭುವಿಯರಿಯಲು ಮೆರೆದ ಪ್ರಭು ಶಿವಲಿಂಗ ಭಕ್ತಾಂಗ ॥ ೭೧ ॥

ಬ್ರಹ್ಮ ಸೃಷ್ಟಿಕರ್ತನೆಂದರೆ
ಗಮನಾಶಿರ ರಚಿಸಿಕೊಳ್ಳನೆ
ತಿಮ್ಮ ಸಲಹುವನಾದರಾ ಕೃಷ್ಣಾವತಾರದಲಿ
ಚುಮಬೇಡನ ಬಾಣ ಹತಿಯಿಂ
ಸುಮ್ಮನೇತಕೆ ಮಡಿದುಪೋದನು
ತಮ್ಮ ಪದ ಸತ್ಕೃತ್ವಕಾತ್ರಯಮೂರ್ತಿ ಸಮರಹರೆ ॥ ೭೨ ॥

ಬ್ರಹ್ಮನೀಂ ಪರಬ್ರಹ್ಮ ಚಿತ್ಕಲ
ಬ್ರಹ್ಮಪದಮೇಕಾತ್ಮ ನಿರ್ಮಲ
ಬ್ರಹ್ಮ ಪೂರ್ವಾಬ್ರಹ್ಮ ನಿಷ್ಕಲ ಬ್ರಹ್ಮ ಪರಬ್ರಹ್ಮ
ಬ್ರಹ್ಮಾಂಡದಿ ಬಳಲಿದವರಿಗೆ
ಬ್ರಹ್ಮ ಸಾಕ್ಷಾತ್ಕಾರ ಗೈಸುವ
ಬ್ರಹ್ಮಮು ಶಿವಲಿಂಗ ಚರ ಲಿಂಗಾಂಗ ಸೂಸಂಗ ॥ ೭೩ ॥

ಎಂದು ಪಲತೆರದಿಂದ ಭಜಿಸುವ
ನಂದನೆಯು ಮನದಂದ ಸುತನಾ
ನಂದ ಚರಪದಕ್ಕೊಂದೆ ಹಸದೋಜ್ವಲಿಸಿ ಪೊರಸೂಸಿ
ಇಂದು ನಿನ್ನಯ ಬಯಕೆ ಸಫಲಾ
ಯ್ತೊಂದನೇನುಂ ನೆನೆಯಬೇಡೌ
ಮುಂದೆ ಪೊಂದುವಿ ಪರಮಸುತನೆಂದಂದು ಹರಸಿದನು ॥ ೭೪ ॥

ಶೀಲ ಶಿವಯೋಗಿಗಳೆ ಜಗದಲಿ
ಕಾಲ ಕರ್ಮದ ಬಾಧೆಗಳಲುವ
ಬಾಲನಾದರೆ ಬೇಡ ಸುತರಾಗೊಡವೆಯೇ ಬೇಡಾ
ಬಾಲೆ ನಿನ್ನಯ ಮೂಲ ವಂಶೋ
ಜಾಲವುದ್ಧರಿಪುದಕೆ ನಾನೇ
ಬಾಲನಾಗುವೆ ನಿನಗೆ ಪೋಗೌ ನಾಮ ಶಿವಲಿಂಗ ॥ ೭೫ ॥

ಎನುತ ಜೀವ ಶಿವೈಕ್ಯಗೊಳಿಸಿದ
ವನಜಜಾಂಡ ಸುಭುವನ ಮಹಿಮರು
ಸನುತೆ ಕನಿಕರಯುತೆ ಸುವರ್ಣಾಂಬೆಯಳ ಸಮ್ಮತಿಸಿ
ಮನೆಗೆ ಕಳಪುತ ಗುಣಗಣಾಢ್ಯರು
ಘನದಯಾನಿಧಿ ದ್ವಂದ್ವರಹಿತರು
ಮಿನುಗುತಿರ್ದರು ಮೂರು ಲೋಕದ ಮಹಿಮ ಬಲ್ಲವರು ॥ ೭೬ ॥

ಯೋಗಿಯಪ್ಪಣೆಯಾಂತು ಮುದದಲಿ
ಸಾಗಿ ಬಂಗಾರೆಮ್ಮ ಪತಿಪದ
ಬಾಗಿ ನಮಿಸುತ ದೇವ ಶಿವಲಿಂಗೇಶನಭಿಮತವಾ
ಬೇಗನುಸುರಲು ಕೇಳಿ ಸಂತಸ
ವಾಗಿ ಶಿವಶಿವ ಧನ್ಯ ಮಹಿಮರು
ಭೂಗಗನದೊಳಗಿಂಥ ಮಹಿಮರ ಮಹಿಮೆಯೆಂಥ ಘನವೋ ॥ ೭೭ ॥

ಹಿಂದೆ ಜಗದ ಗುರು ರೇವಣಸಿ
ದ್ಧೇಂದ್ರ ಶಿವಸಂಜಾತ ಶಿಷ್ಯರ
ವೃಂದವನು ಪರಿಪಾಲಿಸುತ ಬರೆ ಸೊನ್ನಲಾಪುರದ
ಚಂದ ಸೀಮೆಯೊಳಿಳಿದು ದಂಡಿಗೆ
ಯಿಂದ ಹಾರೈಸುತಲಿ ತವಪದ
ದಂದ ಹಾವುಗೆ ಕಳೆದು ಮೈಯ್ಮಿಕ್ಕೊಂದಿ ಪುಳಕಿಸುತೆ ॥ ೭೮ ॥

ಭಾವ ಬೆರಗಿಸುತೋವಿ ಕಂಪಿಸಿ
ಭೂವಿಗಡಿಯಾಪರಿಸದಂದದಿ
ತೀವಿ ಮುದನಿಂದಡಿಗಡಿಗೆ ನೆನೆನೆನೆದು ಪರುಪಿಸಲು
ದೇವ ನಿಮಗೇಕೀ ಕೃತಾರ್ಥತೆ
ಯಾವ ಕಾರ್ಯಕ್ಕೀ ಸ್ಥಲದಿ ಮಪ
ದೇವ ಗೃಹ ತೀರ್ಥಂಗಳಿಲ್ಲವುಮೆಂದರಾಚಕರು ॥ ೭೯ ॥

ಉದಕ ವಿರಹಿತ ತೀರ್ಥಶಿಲೆನಾ
ಪೊದಗದಿರು ಶಿವಲಿಂಗವಾತನು
ಮದರ ಧರ್ಮಂ ಕರ್ಮಕಲ್ಮಷತಿಲ್ಲದಧಿಕರನು
ಮುದಪನೀ ಪುರದೊಳಗೆ ಸತ್ಯವು
ಮಿದುವೆ ಕ್ಷೇತ್ರಂವೆನಿಸಿ ಧರೆಯರೆ
ಪದಪಿನಿಂ ಮೆರೆಯುವದಿದೇ ಸೊನ್ನಲಿಗೆ ಕೇಳೆಂದ ॥ ೮೦ ॥

ಎಂದುದಯುನೊಂದೊರುಷಮೊಳಗಾ
ರಿಂದ ಸುಗ್ಗಲೆ ಗರ್ಭದಿಂದಾ
ಕಂದುಮೀ ಪುರದಿರ್ಪಳೀರ್ಪಳು ತೋರ್ಪಿರಾ ತೋರ್ಪೆ
ಎಂದು ಶಿಷ್ಯರವೆರಸಿ ಪುರವಂ
ನಂದು ಪೊಕ್ಕಾತುರದಿ ಬರುತಿರೆ
ಮಂದಿರದ ಮುಂಬಾಗಿಲಲಿ ನಿಂದಿರ್ದ ಸುಗ್ಗಲೆಯು ॥ ೮೧ ॥

ಉದರ ಮುಟ್ಟುತ ನಮಿಸಲಾಕೆಯು
ಪೆದರಿ ಕೇಳ್ದಳುಮಾಗ ನೀವಿಂ
ತೊದವಿ ನಮಿಸಿದುದೇಕೆಯೇನೆಂತೆಂದಳಾ ಮುಗುದೆ
ಮೃದು ಕಠೋರ ಶೀತೋಷ್ಣ ಹಗೆ ಕೆಳೆ
ಕ್ಷುದೆ ತಣಿವು ಸುಖದುಃಖನುತಿ ನಿಂ
ದೆದರದುಂ ಭಾವನೆಯುಮಿಲ್ಲವ ಯೋಗಿಪುಟ್ಟುವನು ॥ ೮೨ ॥

ಎಂದು ರೇವಣಯೋಗಿ ಸುಗ್ಗಲ
ಗಂದವಾಗುವ ತೆರನ ಪೇಳು
ತ್ತಂದಯಾ ಸಿಧಿ ಪೋದನೆನುತಲಿ ಪಿರಿಯತೊತೆಯುವರು
ಇಂದು ಶಿವಲಿಂಗೇಶ ಯತಿವರ
ರಿಂದೆ ಸುಫಲಾಕ್ಷೆ ದೊರಕಿತು
ಸಂದೆಗವ ಬಿಡು ಎನುತೆ ಸತಿಪತಿ ಸುಖದಿ ಬಾಳಿರುತೆ ॥ ೮೩ ॥

ಇರೆ ಸುವರ್ಣಾಂಬೆಯುಳು ತವಪುರ
ವಿರತ ಶಿವಲಿಂಗೇಶ ಯತಿವರ
ವರದವಾಣೀ ಪರಮ ಪ್ರಭೆಯಾವರಿಸಿ ಬೆಳಗುತಲಿ
ಮೆರೆವಳೋ ಭವಕೊರೆವಳೋ ಜವ
ನ್ನರಿವಳೋ ಸುಖ ಬೆರೆವಳೋಯನೆ
ಪರಮ ಕಾಯದ ಕಾಂತಿ ಕಾರಣಮಾಗಿ ಮೆರೆದುದಲಾ ॥ ೮೪ ॥

ಪವನರುಣ ಪರಿವಡಗಿಸಲೆ ಬಿಳು
ಪೊದಗಿ ಕಾಣಿಸಿತಾಕೆ ಮುಖಕಳೆ
ಸುವತಿ ಮಂಗಲ ಪುತ್ರನನು ಪಡೆಯಲ್ಕೆ ಶಿವಭಸ್ಮ
ಪದಪಿನಿಂದಾಗುವದೆ ನಿಶ್ಚಯ
ವಿದಕೆ ಸಂಶಯಮಿಲ್ಲವೆನುತಾ
ಸುದತಿ ಮುಖಸಿತಮಾಗಿ ಭಸ್ಮದವರಣವಾಂತಿಹುದು ॥ ೮೫ ॥

ದಯಗುಣವು ಘನವಾಗೆ ಗರ್ಭಾ
ಲಯವು ಘನತೆಯನಾಂತುದೇಕೆನೆ
ಬಯಲ ಬಲಿವಾಕಾರವಹ ಚಿದ್ಘನರವರವಿಂದಾ
ಭಯಮರಣ ಜನನವನು ಗೆದಿಯುವ
ಜಯಪ್ರದಾಯಕ ಶರಣ ನಿರಲಜ
ರಯದಿ ಪೊಡೆವ ಗುಡಾರದಂದಂ ಘನತೆಯಾಂತುದುದು ॥ ೮೬ ॥

ಮೃಡ ಶರಣಕೆಡ ದೋಷವಿಲ್ಲದ
ನುಡಿವಚನ ಸಡಗರದ ಮಹಿಮನು
ವಡಲೊಳಿರೆ ಪೊಸಮೇಲೆಯಾನೆಂತಹಿಸಿ ಸಿಲ್ಲುವದು
ಕೆಡಕು ಎನ್ನಯ ನಾಮ ಮೊದಲೆಯ
ಸುಡಲಿ ಜಡಜಜನೇಕೆ ಕರೆದನೊ
ಮಡುಕಿ ಕಳೆಯುವೆನೆಂಬ ತೆರದುಗನಿಯ ಕಡಿಯಡಗೆ ॥ ೮೭ ॥

ಜಗದ ಭರ ಭಾರೋದ್ಧರಿಪ ಚರ
ರಗಣಿತೋಕ್ಕದ ರೂಪವಾ ಶಿಶು
ಬಗೆದು ಗರ್ಭದೊಳಿರಲು ಜನನಿಯ ಬಸುರು ಭಾರಾಗೆ
ಸಿಗಲು ಕಾಲ್ಗಳು ಭೂಮಿಯಲಿ ಮೆ
ಲ್ಲಗನೆ ಕಿತ್ತುತೆ ನಡೆವಳೆಂಬಂ
ತೆ ಗಡ ನಡಿ ಬಲು ಮಾಂದ್ಯದೊಳು ಬೆರಸಿದುದು ಮರಿಯಲ್ಕೆ ॥ ೮೮ ॥

ಶರಣ ಶಿವ ಸಂಭೂತ ಸಜ್ಜನ
ನಿರಲು ಗರ್ಭದಿಯುವನ ತನುರುಚಿ
ಯುರದೊಳಡಗಿದ ಪಾಪ ತಾಮಸವೆಲ್ಲ ಪೊರನೂಕೆ
ಇರಲು ಸ್ಥಳವಿಲ್ಲೆನುತ ಮರುಗುತೆ
ಪರಮ ಸುವರ್ಣಾಂಬೆ ಕುಚಗಳ
ಕಿರಿಕೊನೆಸುಲಾಶ್ರಮಿಸೆ ಕಪ್ಪಂದಾಳಿ ಮೆರೆದಿಹವು ॥ ೮೯ ॥

ಭೂತಪತಿ ಶರಣಾಗ್ರಗಣ್ಯನು
ಭೂತಿ ಧರಿಪಲಿ ಪ್ರೀತಿವಂತನು
ತೋತುಮಾತೆಯು ಭಸ್ಮದಾತೆಯು ತಾನೆಯೆಂಬಂತೆ
ಸಾತಿಶಯ ಮನಬಯಕೆಯಿಂದಾ
ಭೂತಿ ಸೇವಿಪಳನುಟನಂ ಗುಣ
ವ್ರಾತೆ ತನು ಬಿಳುಪಾಯ್ತು ಕಣ್ಣೊನೆ ಕಾಂತಿವಹುವಾಯ್ತು ॥ ೯೦ ॥

ಎದೆಯು ಗೆರೆ ಹಸುರೇರೆ ಪರತೋ
ಳ್ಪದಿಯು ನಸುಗಪ್ಪೇರೆ ಕೊಂಕಿದ
ಚದುರ ಕುರಳ್ಕವಲೇರೆ ಸುಂದರಿಯುಸುರು ಘನವಾಗೆ
ವದನ ರಸವೋ ಸರಿಸೆ ಬಳಲ್ಕೆಯ
ನೊದಗಿ ನುಡಿ ಮೃದುವಾಗೆ ಪುಣ್ಯದ
ಸುದತಿ ಸುವರ್ಣಾಂಬೆಯಾಲಿಂಗಿಸಿದಳವ್ನ ಮಾಸ ॥ ೯೧ ॥

ಸತಿಗೆ ಹೆರಿಗೆಯ ಬೇನೆ ಸಮನಿಸೆ
ಪತಿಯು ಕಂಡಾಕ್ಷಣಕೆ ಶಿವಲಿಂ
ಗೆತಿಯು ಪೂರ್ವದಲಾಶಿರ್ವದಿಸುತಲಿತ್ತ ಘನಭೂತಿ
ಸತಿಯಳಂಗಕೆ ತಳಿಯಲಾ ಶುಭ
ತಿಥಿಯುದಷ್ಟಮಿ ಮಾಸ ಕಾರ್ತಿಕ
ಶತಕ ಶಕ ಹದಿನೇಳು ತೊಂಭತ್ತಾರು ಮೇಲ್ದಿವದಾ ॥ ೯೨ ॥

ಉದಯುದಲಿ ಜನ್ಮಿಸಿದ ಶಿಶುವಿಗೆ
ಸದಯ ಕುಲಗುರು ಸ್ವಾಮಿಯಿಂದಲಿ
ವಿದಿತ ಲಘುವಿಧಿ ದೀಕ್ಷೆಯಿಂ ಶಿವಲಿಂಗಮಂ ಧರಿಸೆ
ಮುದದಿ ಜನಕನು ಜಾತ ಕರ್ಮವ
ನೊದವಿ ಕೇಳಲು ಸ್ವಾತಿ ತಾರಾ
ಪುದಿಧ ತುಲರಾಶಿನಿಪದಿವ ಶುಭಲಗ್ನ ಜಾತಕನು ॥ ೯೩ ॥

ರುದ್ರನೆಂಬುವ ಜನುಮನಾಮವು
ಭದ್ರನಾಮಕ ಕರಣವಾಮೃತ
ಸಿದ್ಧಿಯೋಗವು ದೇವಗಣ ನಿಜವಂತ್ಯನಾಡಿಯುತ
ಸಿದ್ಧನೆನಿಸುವ ನಿಮ್ಮ ವಂಶವ
ನುದ್ಧರಿಸುವನು ಶರಣಸ್ಥಲದ
ಶುದ್ಧ ತತ್ವವ ಸಾಧ್ಯಗೈವನು ಸತ್ವಗುಣದವನು ॥ ೯೪ ॥

ಒಡನೆ ಗುರುವಿನ ನುಡಿಯ ಕೇಳುತ
ಸಡಗರದ ಶಿಶು ಬಾಣತ್ಯುಪಚರ
ಮಡದಿಯರು ಮಾಡುತರೆ ಲೋಕದ ನಡತೆಯಂದದಲಿ
ಮೃಡಚರಾರ್ಯರ ನುಡಿಯದಿಂದೆಂ
ಮುಡಿಯು ತಣ್ಣಗೆ ಶಾಂತಿಯಾಯ್ತೆಂ
ದ್ಧಡದ ಪಿತಮಾತೆಯರು ನುತಿಸಲು ಬಂಧುಬಳಗಗಳು ॥ ೯೫ ॥

ನೆರೆದು ಕಂದನ ನೋಡಿ ಮನದೊಳು
ಹರುಷವಾದರು ಸಖಿಜನಂಗಳು
ಹರನ ಕರುಣವದೆನಿತು ನಿಮಗೆಂದವರು ನುತಿಸುತಿರೆ
ಭರದಿ ಗುರು ಚರರಿಂಗೆ ದಾನವ
ನರದೆ ಜನಕನು ಗೈದು ಬಾಲನ
ಪರಮ ಪ್ರೀತಿಲಿ ಸಲಹುತಿರೆ ಶಿವಲಿಂಗ ಜಯುವೆನುತ ॥ ೯೬ ॥

ಆದವು ದ್ವಾದಶ ದಿನಂಗಳು
ಮುದದಿ ಶಾಸ್ತ್ರದ ನೇಮವಿಡಿದಾ
ಸದಮಲದ ಶಿಶುವಿಗೆ ನಾಮವ ಧರಿಸಬೇಕೆಂದು
ಮಧಿಕ ಮಾಹೇಶ್ವರರ ತಣಿಸುತ
ಸದನದಲಿ ತೊಟ್ಟಿಲವ ಕಟ್ಟಿಸಿ
ಸುದತಿಮಣಿ ಸಖಿಯರನು ಬರಸಿದುದೇನು ನಾಂ ಪೇಳ್ವೆ ॥ ೯೭ ॥

ಇಂದುವದನೆರು ಕಮಲನಯನೆರು
ಕುಂದರದನೆರು ಕುಲಜಸತಿಯರು
ಮಂದಗಮನೆರು ಕೆಂದುಟಿ ಮುಗುಳ್ನಗೆಯ ಕಾಂತಿಯರು
ಸುಂದರಾಂಗೆರು ಕಂಬುಗ್ರೀವರ
ವಿಂದ ಕುಟ್ಮಳ ಕುಚದ ಕುವರೆರು
ಬಂದರಾಗಳೆ ಕಂದನುತ್ಸವಕೆಂದು ಮನಮಲರಿ ॥ ೯೮ ॥

ಗಿಳಿ ನುಡಿಯು ಬಲು ಮುಡಿಯು ಶಿಂಗರ
ನಳಿನ ತೋಳ್ಗಳ ಬೃಂಗ ಕುಂತಳ
ಪೊಳೆವ ಮಿಸುನಿಯ ಛಾಪುದಂಗದ ಲಲಿತಲೋಚನದಾ
ಚಲುವ ಸಂಪಿಗೆವಲಯ ನಾಶಿಕ
ಬಳುಕ ನಡುಬಡ ಭಾಷೆ ಕಳಗಳ
ಕಳಾವಿದ ಗಮನೆಯರು ಬಂದರು ಬಾಲನುತ್ಸವಕೆ ॥ ೯೯ ॥

ಕರಿಗಳಂದದಿ ಹರಿಗಳಂದದಿ
ಗಿರಿಗಳಂದದಿ ಗಿಳಿಗಳಂದದಿ
ಮೆರೆವ ಕೋಕಿಲ ಸೋಗೆಯಂದದಿ ಕಳಸಕನ್ನಡಿಯ
ಹರಿಣನೇತ್ರರು ಕರುಣಪಾತ್ರರು
ಮೆರೆವ ಕಾಂತೆರು ಪರಮಶಾಂತರು
ವೆರಸಿ ಮೋಹವನಿರಿಸಿ ಶಿಸುವಿನನೆತ್ತಿ ಕೊಂಡಾಡೆ ॥ ೧೦೦ ॥

ನೀಲಕುಂತಳ ತಳಿರು ಪದತಳ
ಬಾಲಪ್ರಾಯದ ಮುಖದ ಫಳಫಳ
ಮೇಲುಮುತ್ತಿನ ಮಾಲೆಯಾಂತಿಪ ಶೀಲಸದ್ಗುಣದ
ಫಾಲಕುಂಕುಮ ಭಸ್ಮ ಧರಿಸಿದ
ಬಾಳೆದೊಡೆ ಬಲು ಕೋಮಲಾಂಗದ
ವ್ಯಾಲ ವೇಣೆರು ಬಾಗಿ ತೊಟ್ಟಿಲಪಿಡಿದು ಸಂಭ್ರಮದಿ ॥ ೧೦೧ ॥

ಪಾಡಲೆಳ ಕೋಗಿಲೆಯು ಧ್ವನಿ ಮಾ
ತಾಡಲರಗಿಳಿ ಚಟುಲವಾಕ್ ನಡೆ
ದಾಡಲರ ಸಂಚೆಗಳ ನಡೆ, ಮುಸುಕರ್ಧ ಮುಚ್ಚಿರ್ದ
ನೋಡಲಿಂದುವಿನರ್ಧ ಸೊಬಗ
ಲ್ಲಾಡಿಸಲು ಮುಡಿ ನವಿಲ ಸರಿ ಕಂಣ್
ನೋಡಲುತ್ಪಲ ಸೊಬಗದಂದದಿ ಬಂದ ಸಖಿಜನರು ॥ ೧೦೨ ॥

ತೂಗುತಲಿ ತುಳುಕಾಡೆ ಸುಭ್ರಮ
ಸಾಗರದ ಪರಿ ಸುವರ್ಣಾಂಬಿಯು
ಭೋಗ ಬಲು ಘನವಾಗೆ ರಂಜಿಪದಲ್ತುಮೆಂತೆನುತೆ
ರಾಗರಚನೆಯ ರಸದ ರುಚಿಯಿಂ
ಪಾಗಿ ಪಾಡುತ ಜೋಗುಳ ಪದ
ವಾಗ ಕೇಳ್ದರು ಮಾತೆ ಪಿತರನು ಪೆಸರುಮೇನೆಂದು ॥ ೧೦೩ ॥

ವಿರತ ಶಿವಲಿಂಗೇಶ ಚರವರ
ರೊರೆದು ಪೇಳ್ದುದ ತಮ್ಮ ನಾಮವ
ತರುಳಗಿರಿಸೆಂದದವನು ಪೇಳ್ದಳು ಭರದಿ ಸಹೋದರಿಯು
ಇರಿಸಿದಳು ಶಿವಲಿಂಗನೆಂಬೀ
ಪರಮ ನಾಮಂ ಕರದು ಮೂಸರ
ಬೆರತು ಮನವಾನಂದದಲಿ ಜೋಗುಳವ ಪಾಡಿದರು ॥ ೧೦೪ ॥

ಗುರುಪದಾಬ್ಜಕ ತರುಳ ಜೋ ಜೋ
ವಿರತ ಚರಪದರೇಣು ಜೋ ಜೋ
ಹರಭಕುತ ಲಿಂಗಾಂಗ ಭೂಷಣ ಭೂತಿಧರ ಜೋ ಜೋ
ಹರದೆ ಸುವರ್ಣಾಂಬೆ ಸುತ ಜೊ
ಕರುಣನಿಧಿ ಕುಲತಿಲಕ ಜೋ ಜೋ
ಶರಣ ಪಥವನು ಕರಣಗೈಯ್ಯುವ ಮರಣಹರ ಜೋ ಜೋ ॥ ೧೦೫ ॥

ದೇವ ಚಿಂತಾಮಣಿಯೆ ಜೋ ಜೋ
ದೇವ ದೇವಾಂಗ್ ಸಮಯ ಜೋ ಜೋ
ದೇವ ದಾಸಮಯ ಸಾಂಪ್ರದಾಯಕ ವೀರಶೈವನೆ ಜೋ
..............................
ದೇವ ಶಿವಲಿಂಗೇಶ ಸುತ ಜೋ
ಭೂವಿನುತ ಬಸವಾದಿ ಪ್ರಮಥಾಚಾರಪರ ಜೋ ಜೋ ॥ ೧೦೬ ॥

ಚೆನ್ನ ಜೋ ಚನ್ನಮ್ಮ ಸುತ ಜೋ
ಧನ್ಯ ಜೋ ದುಗ್ಗಳೆಯ ಧನ ಜೋ
ಮಾನ್ಯ ಜೋ ಮಡಿವಾಳ ಪದಪ್ರಿಯ ರನ್ನಮಣಿ ಜೋ ಜೋ
ಕಿನ್ನರಿಯ ಬೊಮ್ಮಣಗ ಜೋ ಜೋ
ಸೊನ್ನಲಾಪುರ ಸಿದ್ಧ ಜೋ ಜೋ
ಮುನ್ನಿ ನೀ ಬಂಧನವ ಪರಿಹರಿಪಣ್ಣನೇ ಜೋ ಜೋ ॥ ೧೦೭ ॥

ಕಾಮಸೀಮೆಯ ದಾಂಟುವವ ಜೋ
ಭೀಮಕ್ರೋಧವ ಗೆಲುವನೇ ಜೋ
ಆ ಮಹಾಲೋಭವನು ತೆಜಿಸುವನೇಮಗುಣ ಜೋ ಜೋ
ನಾಮಮೋಹಾರಣ್ಯದಗ್ಧ ಜೋ
ಧಾಮಮದಪುಳ ತುಳಿವ ಜೋ ಜೋ
ವಾಮ ಮತ್ಸರ ಮಥನ ಸಂಗ್ರಾಮಕನೆ ಜೋಯೆಂದು ॥ ೧೦೮ ॥

ಬಾಗಿದೆಳಲತೆಗೊಗೆದ ಮಿಡಿಕಾ
ಪುಷ್ಪಗ ಸುಮವಳಿವೆರಸೆ ಗಾಳಿಂ
ತೂಗುವಂತಣುಗನಸು ತೊಟ್ಟಿಲೊಳಿರಿಸಿ ಪೆಣ್ತೆಯರು
ತೂಗಿ ಜೋಗುಳಪಾಡಿಸೂಡಿಸಿ
ಸಾಗ್ವ ಶಶಿಮುಖಿಯರಿಂಗೆ ಮಣಿಯುವ
ರಾಗ ಬಾಗಿಣ ವಿಳ್ಯವಿತ್ತವರಿಂಗೆ ಬೀಳ್ಕೊಡಲು ॥ ೧೦೯ ॥

ಬಳ್ಳಿ ಕುಡಿಗಳೆರಜ್ಜುವಾಗದ
ಕುಳ್ಳವಿಡಿಸುವ ತೊಟ್ಟಿಲಾಗಲು
ವಳ್ಳಿವೆಳೆ ಮರಿದುಂಬಿಗಳು ಶಿಶುವಾಗಿ ರಾಜಿಸಲು
ಯುಳ್ಳಿನೇತ್ರರ ಹಸ್ತಘಾತಿಂ
ಗಳ್ಳವಾಡುವ ತೆರನತೊಟ್ಟಿಲ
ವಳ್ಳಿಕುಡಿ ತಂಗಾಳಿಯಿಂದಂ ತೂಗಿತತಿಶಯೋಕ್ತಿ ॥ ೧೧೦ ॥

ಶರಣ ಶಿವಲಿಂಗೇಶರನವರ
ಚರಿತೆಯಂ ಶ್ರೀಗುರುವಿನೋನ್ನತಿ
ಚರಣ ಸರಸಿಜ ಮಧುಕರ ಮಡಿವಾಳ ನಾಮಕನು
ವರದನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥಸಿದ್ಧಿಯು ದ್ವಿತಿಯ ಸಂಧಿಯಿದು ॥ ೧೧೧ ॥

ಅಂತು ಸಂಧಿ ೨ಕ್ಕಂ ಪದನು ೧೫೨ಕ್ಕಂ ಮಂಗಲಮಹಾ ಶ್ರೀ ಶ್ರೀ

## ಸಂಧಿ ೩

ಬಾಲತನದ ಸುಲೀಲೆ ಮುಗಿಸುತ
ಮೇಲೆ ವಿದ್ಯಾಶೀಲನಾಗುತ
ಪಾಲಿಸಿದ ಶಿವಧರ್ಮ ದೀಕ್ಷೆಯ ಗುರುವಿನಿಂ ಪಡೆದು ॥ ಪಲ್ಲ ॥

ಶ್ರೀಮದುಜ್ವಲ ತರುಣ ಫಣಿಧರ
ಭೀಮ ದುರಿತ ವಿಘಟನ ಶಂಕರ
ಹೈಮವತಿ ಹೃತ್ಪದ್ಮಗಂಧಸುಲೇಪ ಬೃಂಗೋಪ
ವ್ಯೋಮ ಗಂಗಾಧೃತವಿರಾಮಸು
ನಾಮಚಿದ್ಘನ ಚಿತ್ರಭೂಮಯ
ಸ್ವಾಮಿ ಶಿವಪುರಧಾಮ ಶಿವಲಿಂಗೇಶ ಪೊರೆಯೆನ್ನಂ ॥ ೧ ॥

ಸಲ್ಲಲಿತ ಶಿವಲಿಂಗ ವಿರತರ
ಸೊಲ್ಲು ಶಾಂತಿಯು ತಪದ ಕಾಂತಿಯು
ಬಲ್ಲಜಾಣ್ಮೆಯು ಜ್ಞಾನವಿರತಿಯ ಸಿರಿಯು ನಿಃಕಾಮ
ವೆಲ್ಲವಿವುಗಳನೊಂದುಗೂಡಿಸಿ
ಕಲ್ಲಣುಗಿ ಪ್ರಿಯಕಳುಹಿದೆಂಬೊಲು
ಮಲ್ಲಿಕಾರ್ಜುನಸಲ್ಲಿ ಶಿಶುತೆಯ ಧರಿಸುತೊಪ್ಪಿದನು ॥ ೨ ॥

ಒಲಿದು ತಾಯ್ತಂದೆಗಳು ಶಿಶುವಿನ
ಸಲಹುತಿರೆ ಸುಖದಿಂದಲನುದಿನ
ಪಲವು ತೆರದುಪಚಾರಗೈಯ್ಯುತಲಮಲ ಭಾಗ್ಯದಲಿ
ಗೆಲವು ಸೋಲ್ ಶಿವ ನಿನ್ನದಾಗಿದೆ
ಹಲವು ಮಾತಿನ್ನೇನು ಗುಣನಿಧಿ
ಸುಲಭ ಸಚ್ಚರದೇವ ಶಿವಲಿಂಗೇಶ ಭವನಾಶಾ ॥ ೩ ॥

ಎನುತ ಪೊಗಳಲು ವನುತೆಮಣಿಯರು
ವಿನುತಿಸಿದರಾವಾಗಳೆಂತೆನೆ
ಜಿನಗು ಯಂತ್ರ ಕುಮಂತ್ರ ಹೊತ್ತಿಗೆಯಿವಕೆ ಒಪ್ಪಿಲ್ಲಾ
ಬಿನುಗು ದೈವಂಗಳಿಗೆಯೆರಗಿ
ಲ್ಲನ ಸುಕೊರವಿಯು ಶಕುನಕೇಳಿ
ಲ್ಲನಗೆ ತಾನೇನಾದ ಬಗೆ ಶಿವನವನೆ ಬಲ್ಲನಗಾ ॥ ೪ ॥

ಹರಸಿ ಹರದಿಯರಾಗ ಪೋಗಲು
ತರುಣಿ ಸುವರ್ಣಾಂಬೆ ತನ್ನಯ
ವರ ಶಿಶುವು ಶಿವಲಿಂಗನಿಗೆಯುಕ್ಕರದಿ ಮೊಲೆಯುಣಿಸಿ
ತರಳನಂ ಹಾರೈಸಿ ತೊಟ್ಟಿಲೊ
ಳಿರಿಸಿ ಕೆಲಬಲಕೊತ್ತಸಿಕ್ಕುರೆ
ಸೆರಗು ಪೊದಿಸುತ ತೂಗುವಳು ಜೋಗುಳ ಪಾಡುತಲಿ ॥ ೫ ॥

ಮಗುವು ಒಮ್ಮೊಂದೊಮ್ಮೆ ಚೀರಲು
ದೃಗದ ಬಾಧೆಯುಮಾರದಾಯಿತೋ
ಹಗರಣೆವುದೆಂದು ಮೂರ್ದಾರಿಗಳ ಮಣ್ಕೀರ
ಬೊಗಸಿ ಕ್ಷಾರಂ ಮೆಣಸಿಕಾಯ್ಕುಸ
ತೆಗೆವ ತುದಿ ಚಪ್ಪರದ ಸೂರ್ಸದೆ
ಲಗನೆ ಮುಖ ಮೇಲಿಳುವುತುರಿಯೋಳ್ ಚಲ್ಲುತೊದೆಯುವಳು ॥ ೬ ॥

ಅಟ್ಟಹಾಸದಿ ಮೊಲೆಯ ಕೊಡುತಿರೆ
ಚುಟ್ಟುಚುಟ್ಟೆಂದೆನಲು ಕುಚದೋಳ್
ದಿಟ್ಟಿಯಾಯಿತು ಮಾವ ಸವತಿಯದೆಂದು ಕೈಬೆರಳ
ಛಟ್ಟೆಸಿಸಿ ಚಟಕಿಯನು ಮುರಿಯು
"ತ್ಫೋಟ್ಟೆಯುರಿಯಲಿಯವಳವೆ"ನುತಲಿ
ಮುಟ್ಟುವಂತುರಿ ಪದವ ಝಾಡಿಸುತೊದಿವಳೀ ತೆರದಿ ॥ ೭ ॥

ಬಾಲಕಗೆ ಮೊಲೆ ಕುಡಿಸುತಿರಲಾ
ಪಾಲುಮೋಕರಿಸಲ್ಕೆ ಗುಣಮಣಿ
ಮಾಲೆ ಮತ್ತಾರಿಂದಲಾಯ್ತೀ ಕಾಲಘೊಳೆಂದು
ಪಾಲು ಹಿಂಡುತ ಸಿಂಪಿಯಲಿ ಬೆ
ಳ್ನೊಲು ಸುತ್ತುತಲದನು ಬೆಂಕಿಯ
ಮೇಲೆಯಿಡುತಲಿ ಈಕ್ಷಿಪಳು ಮುಕ್ಕುವವೊ ಇಲ್ಲೆಂದು ॥ ೮ ॥

ಈ ಮಗು ಕುಡಿದ್ವಾಲು ದಕ್ಕಲು
ಸ್ವಾಮಿ ಮಠತನ ದಂಡ ನಮಸ್ಕಾರ್
ರಾಮಲಿಂಗನ ಕಾಣ್ಪೆ ಶ್ರೀಗಿರಿ ಯಾತ್ರೆಯಂಗೈವೆ
ಆ ಮಹಾ ಹಂಪಿಯನು ದರ್ಶಿಪೆ
ಸೋಮ ಕಾಶೀಪತಿಯ ದರ್ಶಿಪೆ
ಸ್ತೋಮ ಗಣಪದದರ್ಚನೆಯನೆಸಗುವೆನು ನಿತ್ಯದಲಿ ॥ ೯ ॥

ಎಂದು ಮುಗ್ಧೆಯು ಶಿವನ ಪದ ಮನ
ಹೊಂದಿ ಶಿಶುವನು ಸಲಹುತಿರಲಾ
ನಂದಮಯ ತಾನಾಗಿ ಜನನಿಯ ಕುಚವ ಪಾನಿಸುತಾ
ಕಂದ ತನ್ನಯ ಬಾಲಲೀಲೆಯ
ದಿಂದ ಮುಂದಿನ ಗುರ್ತುತೋರುವೆ
ನೆಂದು ತೊಟ್ಟಿಲೊಳಾಟವಾಡುತಿರ್ದನೆಂದ್ಪೊಗಳೆ ॥ ೧೦ ॥

ಮೊದಲು ಬಹು ಜನ್ಮಂಗಳಲಿ ವಿಧ
ವಿಧದ ವಿಷಯಗಳಗ್ನಿಕುಂಡದಿ
ಕುದಿದ ದುಃಖವನಂತರಂಗದಿ ತಿಳಿದು ಬಲುನೊಂದು
ಮುದದಿ ಪೇಳಲ್ಬಾರದೆಂಬಂ
ತವಕೆ ಶೋಕಿಸುತಿರ್ದ ಕ್ಷಣಕ್ಷಣ
ಸದಯ ಜನನಿಯುಮಿರಲು ಸಮಿಪದಿ ಬಾಲ್ಯದಾವಸ್ಥಾ ॥ ೧೧ ॥

ಶರಣಸ್ಥಲದಾಚರಣೆಯೆಂಬುದು
ಪರಮ ಷಟ್‌ಸ್ಥಲ ಮಾರ್ಗದೊಳು ಘನ
ವಿರುವದೆನುತಲಿ ಕರಗಳಂ ಮೇಲೆತ್ತುವಂ ಮತ್ತೆ
ಸರಸ ಭಕ್ತಿಯನಿಂತು ಪಿಡಿವೆನು
ಹರನ ಭಕ್ತರು ನೋಡಿರೆನುತಲಿ
ಕರವ ಮುಷ್ಟಿಯಗೈದು ತೋರುವಪರಿಯಲಾಡುವನು ॥ ೧೨ ॥

ಹಿಡಿದ ವ್ರತ ಬಿಟ್ಟವನು ಬಿಟ್ಟುದ
ನ್ಹಿಡಿವವನು ಮೃಡಶರಣ ಸಮೂಹಕೆ
ಗಡನೆ ಬಾರನು ಬಂದರಾರ್ದ್ಧನು ಮಲ್ಲನೆಂದೆನುತೆ
ನುಡಿವ ವಚನಾರಚನ ರಹಸ್ಯವ
ನುಡಿದು ಹೇಲು ಬಾರದೆನುತಲಿ
ಒಡನೆ ಕರತಳ ಮುಚ್ಚಿ ಬಿಚ್ಚಾಡುವನು ತೋರ್ಪುದಕೆ ॥ ೧೩ ॥

ದುಃಖಮಯವಾದೀ ಪ್ರಪಂಚದಿ
ಮುಕ್ಕಿಮಣ್ ಜಗವೆಲ್ಲ ಬಳಲುವ
ಲೆಕ್ಕ ಸರಿಯಾದದ್ದುಮಲ್ಲೆನುತದನು ತಾನೊದ್ದು
ಮಕ್ಕರದಿ ಸಾಯುಜ್ಯಹೊಂದುವ
ದಕ್ಕಿದೇ ಕಡೆ ಜನ್ಮ ಮುಖ್ಯವು
ಮಿಕ್ಕಿದೆನು ನಿಶ್ಚಿಂದಲೆನುತಂ ತೊಟ್ಟಿಲೊದೆಯುವನು ॥ ೧೪ ॥

ಚರವರಾಂಘ್ರಿಯ ಪರಮತೀರ್ಥವು
ಹರಿವ ನದಿಗಳಿಗಿಂದಧಿಕ ಮೆಂ
ಬುರುತರೋನ್ನತವಾಗಮಾದಿಗಳೆಲ್ಲ ಪೊಗಳ್ವದನು
ಮರಿದು ಸೇವಿಪನೆಂಬ ತೆರದಲಿ
ಕರದ ಪಂಚಾಂಗುಲಿಯ ಮುಖದೊಳ
ಗಿರಿಸಿಪೀರ್ವಂ ಸ್ತನ್ಯಮಂ ಕುಡಿಯುದಲೆಯೊಮ್ಮೊಮ್ಮೆ ॥ ೧೫ ॥

ಜ್ಞಾನಪ್ರಭೆಯಿಂ ಕಾಣ್ಬುದೆಲ್ಲವು
ನ್ಯೂನಮಿಲ್ಲವು ಶಾಶ್ವತಾಜಡ
ತಾನೆ ತಾನಾಗುತಲಿ ಬೆಳಗ್ವುದು ತನ್ನ ಚೇತನದಿ
ಹಾನಿದೃಕ್ ದೃಶ್ಯಾದಿ ದೀಪಮು
ಕ್ಷೋಣಿ ಜಡರೂಪುಗಳು ನಶ್ವರ
ವೇನು ಸಂಶಯಮಿಲ್ಲೆನುತ ನೆರೆನೋಡಿ ನಗುತಿಹನು ॥ ೧೬ ॥

ಇಂತು ನಾನಾ ಲೀಲೆಯಿಂ ಸುತ
ಸಂತಸವನಾಂತಿರಲು ಮಾತೆಯು
ಮುಂತೆ ತನ್ನಯ ಮುಖದ ತೊಳೆಯಂ ಭಸಿತ ಧರಿಸುತಲಿ
ಅಂತೆ ಮಗುವಿಗೆ ಧರಿಸಿ ಸ್ತನಪಾ
ನಂತುನ್ಯೆಸುತ ಸುಖದಿರುತಿರೆ
ಚಿಂತೆಯಿಲ್ಲದೆ ಬೆಳೆದ ಬಿದಿಗೆಯ ಚಂದ್ರಮನ ತೆರದಿ ॥ ೧೭ ॥

ಕುಳಿತು ಮಾಡ್ಗಲಿತಂಬೆಗಾಲಿಡು
ತೊಲಿದು ತಾಪ್ಪುರೆ ಸೀರಿ ನಿರಿಯನು
ನಲಿದು ಪಿಡಿದೇಳುವನು ಗಹಗಹಿಸುತಲಿ ನಗುತಿಹನು
ಎಳೆಯ ಮಗುವಿನ ಪರಿಸ್ಥಿತಿಯುತ
ಗಳಗಳನೆ ನಗನಗಿಸಿ ಮುದ್ದಿಸಿ
ಗಿಳಿಯಮರಿ ಪಂಜರದಲಿಯಿಟ್ಟಂತಿಟ್ಟು ತೂಗುವಳು ॥ ೧೮ ॥

ಎದ್ದು ಬೀಳುತ ಬಿತ್ತಿಯನು ಪಿಡಿ
ದೆದ್ದು ತಪ್ಪೆಜ್ಜೆಗಳನಿಡುತಿರೆ
ಮುದ್ದುಮಗ ಬಾರೆಂದು ಕರೆಯಲು ಮೋಹದಿಂ ಪೋಗಿ
ಪೊದ್ದಿಸುತ ತೊದಲ್ನುತನಾಡುತ
ಲಿದ್ದದೇವಪ್ಪದಕೆ ಹಿಗ್ಗುತ
ಸಿದ್ಧ ಬಾರೈಯೆನುತ ಕರೆಯುತ್ತಿದ್ದರವರಾಗ ॥ ೧೯ ॥

ಮುಗಿಲು ಮುಸುಕಿದ ಚಂದ್ರನಂತಾ
ಹೊಗೆಯು ಮುಸುಕಿದ ಬೆಂಕಿ ಮಂಜಂ
ಮಿಗೆ ಮುಸುಕಿ ದಿನನಂತಧಿಕ ಸಂಸಾರಮೂವಡಿಸಿ
ಸೊಗಸುಗುಂದಿದ ದೇಹತೆರ ಮಾ
ಯಿಗೆ ವಶಂಗತನಾಗಿ ಹೇಯವ
ಬಗೆಯದ ಜ್ಞಾನ್ಮಯದ ಬಾಲ್ಯವನಟಿಸಿ ಬೆಳೆಯುತಲಿ ॥ ೨೦ ॥

ನೆರೆದು ಹುಡುಗರ ಕೂಡಿಯಾಟದಿ
ಹಿರಿಯ ಹುದ್ದರಿಯನಿಸಿಕೊಳುತಾ
ತರಳರನು ಕಾಡಿಸದೆ ಪೀಡಿಸದಾಡುತಿರುತಿಹನು
ದುರುಳ ಹುಡುಗರ ತೆರದಿ ಪುರಜನ
ದ್ಧರಲಿಯಂಪೊರಲಿಲ್ಲ ಪಿಸುಣರ
ಬೆರೆದು ಬಿರಿನುಡಿಪುರುಡು ಪುಸಿ ಜಗಳವನು ತರಲಿಲ್ಲಾ ॥ ೨೧ ॥

ತಂದೆ ತಾಯ್ಗಳ ಬೈಯ್ಯನೆಂದುಂ
ಚಂದ ವಸ್ತುವ ಬೇಡನೆಂದುಂ
ನಿಂದೆ ನಿಷ್ಠುರ ವಾಕ್ಯ ನುಡಿಯನು ಮುಂದುಗಾಣದಲೆ
ಮಂದಮತಿಗಳ ಸೇರಿ ತಾ ಮನ
ಬಂದ ಪರಿಯಲಿ ತಿರುಗಿ ಜಗದವ
ರ್ನಿಂದೆಗೊಳಗಾಗದ ಕುಮಾರಕನಹುದು ಸತ್ಪುತ್ರಾ ॥ ೨೨ ॥

ಜ[illegible]ಪುದದಕಾ ಜನನಿ ಜನಕರ
ಗುಣವೆ ಕಾರಣಮಹುದದೆಂತೆನೆ
ಅನ್ವಿತ ವಿಮಲೆಯು ಕುಶಲೆ ಕೋವಿದೆ ಕುಲಜ ಕರುಣಾಂತೆ
ವಿನಯ ಭಕ್ತ್ಯಾಚಾರ ತನುಮನ
ವನುಪಮಾನಂದಾದಿ ದಯಗುಣ
ವನಘದೊಬ್ಬುಳಿ ಪುರುಷನಿನಿಬರ ಪುಣ್ಯದಾಕಾರಾ ॥ ೨೩ ॥

ಪುಟ್ಟುತಲೆ ಸದ್ಗುಣ ಸುವಾಸನೆ
ತೊಟ್ಟು ಜಗದಲಿ ಮೆರೆವವನವನೆ
ಮಟ್ಟಮೊದಲೇ ಮರುಗ ವೃಕ್ಷದ ತೆರದಿಯವನಿರವ
ಸೃಷ್ಟಿಯೊಳ್ ಶ್ರೇಷ್ಠನಿಸಿಕೊಳುವರು
ಶಿಷ್ಟ ಶಿವಭಕ್ತಾತ್ಯಂತು ನಡೆವರು
ತೃಷ್ಣ ಚಂದನಮರದ ತೆರನಿವರಿರವನರಿಯುಲಿಕೆ ॥ ೨೪ ॥

ಪರಮ ಸದ್ಗುಣದಿರವಿನಿಂದಿರು
ತರಳನನು ಹಾರೈಸಿ ಪಿತಮಿವ
ನರಿಯಬೇಕನ್ನೀಕ್ಷೆ ಸಾಲೆಯ ದೀಕ್ಷಗುರುಮುಕ್ತಿ
ಧರೆಯ ಜನರಿಗೆ ಕಾರಣೆವು ಮೂರ್
ಮರೆಯಲಾಗದು ಸರ್ವರೀತ್ರಯ
ದಿರವಿನಿಂದಂ ಗಳಿಸುವದು ಪ್ರಪಂಚ ಪರಮಾರ್ಥ ॥ ೨೫ ॥

ಎಂದು ಬಾಲಕಗೇಳುವತ್ಸರ
ಸಂಧಿಯೊದಗಲು ವೋದಿಸುವ ಕಾ
ರ್ಯೋಂದನಂ ಗೈಸುದಕೆ ಶಿಕ್ಷಕ ಗುರುವಿನಾ ಮತಕೆ
ನಂದನನ ಕರೆದೊಯ್ದು ಪಿತನಾ
ನಂದದಿಂ ತವ ಶಿಷ್ಯನಿಗೆ ಮುದ
ದಿಂದ ವಿದ್ಯೆವ ಕಲಿಸಬೇಕೆಂದೊಂದನಿಯಮಾಡಿ ॥ ೨೬ ॥

ಪೊರಟು ತನ್ನಯ ಗೃಹಕೆ ಬರಲಾ
ಗುರುವರನು ಶಿವಲಿಂಗನಿಗೆ ಯಾ
ಪರಮ ಪ್ರಣಮೋಂಕಾರವನು ಬರದೋದಿಸಿದನಂದು
ಅರಿಯಲಿದು ಯುಗಜಗಗಲಿಂ ಮೊದ
ಲಿರುವದಾಗಿದೆ ನಾದಕಲೆಗಳ
ದೊರೆಯಿದೊಂಕಾರ್ಶಬಲಬ್ರಹ್ಮೆಂನುವರು ಕೆಲರಿದಕೆ ॥ ೨೭ ॥

ಇದುವೆ ವೇದಾದಿಗಳ ಮೂಲವು
ಇದುವೆ ಸೂಮಂತ್ರಂಗಳಧಿದ್ಯೆ
ವಿದು ಸಕಲ ಶಿವಸಿದ್ಧಿ ಸಾನಿಧ್ಯವನೆಗೈಸುವದು
ಇದುವೆ ಕಾಮ್ಯದ ಕಲ್ಪವಲ್ಲರಿ
ಇದುವೆ ಚಿಂತಾಮಣಿಯ ಸೂಫಳ
ಇದುವೆ ಸಕಲಸಿದ್ಧಾತೆ ಮುನಿಜನಮಾತೆ ಸೌಸ್ತುತ್ತೆ ॥ ೨೮ ॥

ಕೇಳಿ ಮೌನಂ ತಾಳಿ ಸಾಲೆಯ
ಶೀಲ ಶಿಕ್ಷಕ ಪೇಳ್ವುದೆಲ್ಲಂ
ಕೇಳುತೊಪ್ಪಿಂ ಕಲಿಯುತಿರ್ದನು ಕುಶಲಮನನಾಗಿ
ಹೇಳಿದ ಸುವಿಷಯವನು ಮರೆಯದೆ
ಕಾಲವನು ಸುಮ್ಮನೆಯು ಕಳೆಯದೆ
ಹಾಳು ಹುಡುಗರ ಸಂಗತಿಯಿಲ್ಲದೆ ವಿದ್ಯೆ ಕಲಿಯುವನು ॥ ೨೯ ॥

ಹೀಗೆ ಹಲಕಾಲ್ ಕಲಿವ ವಿದ್ಯೆವು
ಮಾಗೆ ಸಂತಸವಾಂತು ಶಿಕ್ಷಕ
ರಾಗಲಪ್ಪಣೆಯಿತ್ತರಿವನಿಗೆ ಧನ್ಯನೈ ನೀನು
ಸಾಗು ನಿನ್ನಯ ಗೃಹಕೆ ಬಲು ಸುಖಿ
ಯಾಗಿ ವರ್ತಿಸು ಜನಕ ಜನನಿಗೆ
ಬಾಗಿ ನಮಿಸುತ ನಿತ್ಯನೆನಿಸುವ ಸೋಗಿ ನೀನಾಗು ॥ ೩೦ ॥

ಎನುತಲಾಶಿರ್ವದಿಸಿ ಶಿವಲಿಂ
ಗನನು ಶಿಕ್ಷಕರಾಗ ಕಳುಹಲು
ಮನೆಯೊಳಿರುತಿರ್ದನುನಯಂಮಿಗೆ ವೋದು ಬರಹದಲಿ
ಘನತೆವೆತ್ತಿಹ ವಚನ ಶಾಸ್ತ್ರಗ
ಳನುವ ತಿಳಿಯದೆ ಓದಿ ಕ್ಷಣ ಕ್ಷಣ
ನೆನೆಯುತಿರ್ದನು ಶಿವನ ನಾಮವ ಭಜನ ಪರವಾಗಿ ॥ ೩೧ ॥

ಹೀಗೆ ಸಂತತಮಾಳ್ಪ ಭಜನೆಯ
ನಾಗ ಓಣಿಯ ಬಾಲರರಿಯುತ
ಸಾಗಿ ಬರುತಲಿ ಕುಳಿತು ಭಜನೆಯ ಮಾಳ್ಪರಿವನಂತೆ
ರಾಗ ತಾಳ ವೃತ್ತಿಯರಿಯದೆ
ಬಾಗಿನಾದೋಂಕಾರ ಪ್ರಣಮಯ
ಕೂಗಿ ಕುಣಿವರು ಮರೆದು ತನುವನು ಸತ್ಯ ಶಿವಭಜನೆ ॥ ೩೨ ॥

ತಾಳಮಿಲ್ಲವು ತಂತಿಯಿಲ್ಲ ಸ
ರಾಳ ದಮ್ಮಡಿ ಮದ್ದಳಿಲ್ಲವು
ಕೇಳುವವರಿಲ್ಲವರಿಗಾರುಂ ತಾವೆ ತಾವಾಗಿ
ಮೇಳವಿಸಿ ಶಿಲೆ ತಾಳ ಬಣ್ಣದ
ಖಾಲೆ ಡಬ್ಬಿಯ ದಮಡಿ ಚರ್ಚರೆ
ಮೇಲು ಚಟಿಕೆಯ ಬಾರಿಸುತ ಚಕ್ರಾಗಿ ಕುಣಿಯುವರು ॥ ೩೩ ॥

ಸತ್ಯವಿದು ಮೊದಲಿನದು ಈಗಿನ
ಗತ್ತ ಬೇರ್ಭಜನಿಯದು ಭಜಿಪುಗೆ
ಮತ್ತೆ ಚಹಾ ಸುಚಿರೊಟಿ ಚೂಡಾ ಚಕುಲಿ ಚೈನಿಗಳ
ಭುಕ್ತಿ ಚೊಕ್ಕೊರೆ ಚೌಕಸಿಲ್ಲದೆ
ಸುತ್ತಿ ಸುಳಿವರು ನೊಣವು ಮುಸುರಿಯು
ಸುತ್ತ ಗುಂಯಿ ಗುಂಯಿಯೆಂದು ಹಾಡುವತೆರದಿ ಪಾಡುವರು ॥ ೩೪ ॥

ಇರಲಿ ಶಿವಲಿಂಗೇಶ ನಿತ್ಯದಿ
ತರಳರನು ಕೂಡುತಲಿ ಭಜಿಸುತ
ಪುರದ ಶಿವಲಿಂಗಾರ್ಯಮಠ ಮೊದಲಾದ ದೇವರಿಗೆ
ಎರಗಿ ನಮಿಸುತ ಚರಿಸುತಿರುವಾ
ಪರಿಯ ನಾನಿನ್ನೇನು ಪೇಳಲಿ
ಹರನ ಸಭೆ ಗಣಚರವೊ ಭಜಿಸುವ ಭರವೊ ಸುಖದಿರವೋ ॥ ೩೫ ॥

ನಿತ್ಯ ಭಜಿಸುತ ಚರಿಸುತಿರಲಾ
ಪೊತ್ತು ಪುರದಗುಸೆಯದ ಮುಂದಿನ
ಬತ್ತಿ ಸಾಯುಧಧಾರಿ ವೀರೇಶನನು ನಮಿಸುತ್ತಾ
ಉತ್ತರದ ದಿಶೆಯತ್ತ ನೋಡಲು
ಚಿತ್ತದೊಳು ಸಲುವೇರೆ ಘನ ಮನ
ವತ್ತಲೆಳೆಯಲು ತತ್‌ಕ್ಷಣದಿ ಗಮಸಿತ್ತನೊತ್ತರದಿ ॥ ೩೬ ॥

ಹುಡುಗರೆಲ್ಲರುಮಿವನ ಪಿಂದಡಿ
ಇಡುತಲೋಡುತ ಭಜನೆಗೈಯ್ಯುತ
ಲೊಡನೆ ಬರೆ ಮೃಡವಾಹಸಿದ್ದೊಂದುಂಬರದ ಕೆಳಗೆ
ಸಡಗರದಿ ನಮಿಸುತ್ತ ಕುಣಿ ಕುಣಿ
ದಡಿಸಿ ಮೈದಡವುತ್ತಲೆತ್ತುತ
ಘಡನೆ ನಡು ಶಿರದಿಡುತ ಹೊರಟನು ಸತ್ಯ ಶಿವ ಭೃತ್ಯ ॥ ೩೭ ॥

ತಂದು ಮನಿಯೊಳಗೊಂದು ತಾಣದ
ಲಂದ ವೇದಿಕೆ ರಚಿಸಿ ಅದರಲಿ
ಹೊಂದಿಯುತ್ತರ ಮುಖದಿ ಕೂಡ್ರಿಸಿ ಪೂಜಿಸಿದನಂದು
ತಂದೆ ತಾಯಿಯುಂ ಹಿಗ್ಗುತೆನೆ
ಲ್ಲಿಂದ ತಂದೆನಲವರಿಗೆಂದನು
ತಂದೆ ತಂದೆನು ಮಜ್ಜನೆನಲಾಗವರು ಬೋಳೈಸೆ ॥ ೩೮ ॥

ಹೀಗೆ ನೇಮದಿ ಹುಡುಗರೊಂದಿಗೆ
ನಾಗಧರ ವಾಹನನ ಪೂಜಿಸಿ
ಮೇಗೆ ನೈವೇದ್ಯವನುಮೀಯುತ್ತಾಗ ಹರುಷದಲಿ
ಸಾಗಿ ಸರ ಪಂಕ್ತಾಗಲೆನುತಲಿ
ಕೂಗಿ ಬಸವ ಘರಾಕವನುಪಮ
ಬೇಗದಿಂದುಣ್ಣುವರು ಚಿಣ್ಣರುಮಂನದಂನಿಗರು ॥ ೩೯ ॥

ಇಂತು ಶಿವಲಿಂಗೇಶನ ನುಡಿನ
ಮಂತಕಾರಿಯು ವಾಹನನ ಮಿಗೆ
ಸಂತಸದಿ ಪೂಜಿಸುತ ಭಜನೆಯನಂತು ಗೈಯ್ಯುತಲಿ
ಸಂತತಂ ಶಿವ ಕರ್ಮದಿರುತಿಹ
ಚಿಂತೆ ಭಜನೆಯ ಚಿಂತೆಯಲ್ಲದೆ
ಚಿಂತೆಮಿಲ್ಲವು ಬೇರೆಯುವನಿಗೆ ತನಯನಂ ನೋಡಿ ॥ ೪೦ ॥

ಮಲ್ಲಿಕಾರ್ಜುನನಾಗ ಯೋಚಿಸಿ
ಸಲ್ಲಲಿತ ಸುತನಿಂಗೆ ಗುರುವಿಂ
ಬಲ್ಲ ದೀಕ್ಷೆಯ ಕೊಡಿಸಲುದ್ಯೋಗಿಸುತ ತಡಕಲ್ಲ
ದಲ್ಲಿ ಮೆರೆಯುವ ತಮ್ಮ ಕುಲಗುರು
ವಲ್ಲಿ ಯೋಗಿಯ ಸ್ವಾಮಿಗಳನಂ
ನಿಲ್ಲದಾಗಳೆ ಕರೆಸಿ ಬಿನ್ನಪವೆಲ್ಲನುಸುರಿದನು ॥ ೪೧ ॥

ಹುಟ್ಟು ಶಿವಮತದಲ್ಲಿ ಧರ್ಮದ
ಶಿಷ್ಟ ಕ್ರಿಯದಾಚಾರುಗಳನುಂ
ಘಟ್ಟನರಿಯದಲಿರ್ದನಾದಡೆ ಹುಟ್ಟಿ ಫಲವೇನು
ಶ್ರೇಷ್ಟವೆನಿಪಾ ಮಂತ್ರ ದೀಕ್ಷೆಯ
ಕೊಟ್ಟು ಶಿವಲಿಂಗನನು ರಕ್ಷಿಸು
ಸೃಷ್ಟಿಗೀಶ್ವರಮೂರ್ತಿ ಗುರುಧಯವಾರ್ತಿ ಬಹುಕೀರ್ತಿ ॥ ೪೨ ॥

ಕಿತ್ತಿ ಪಚ್ಚೆದ ಸಸಿಗಳ್ವೃದ್ಧಿಯು
ಮತ್ತೆಚ್ಚತೆರ ದೀಕ್ಷೆ ವಿಧಿಯಿಂ
ಚಿತ್ತ ಪಲ್ಲಟಿಸುತ್ತ ಚಿತ್ರಭೆಯಿಂದ ರಂಜಿಸುವ
ವೆರ್ಥಲ್ಲಿದು ದೀಕ್ಷೆ ಸಂಸ್ಕಾರ
ಸತ್ಯ ಶಿವ ಶರಣೋತ್ತರೋತ್ತರ
ಪತ್ತಿಬಂದಾ ಮಾರ್ಗವಿದು ಶಿವಭಕ್ತಿ ಮೂಲವಿದು ॥ ೪೩ ॥

ಎಂದು ಗುರುಪದಕ್ಕೊಂದಿ ಶಿವಗುಣ
ನಂದನನ ಪಿಡಿದೆತ್ತಿ ತವ ಕೃಪೆ
ಯಿಂದ ಮೈದಡವುತ್ತ ಪೇಳ್ದಿಂನಿಷ್ಟೆಯೇನೆಂದು
ಸಿಂಧು ಸಮದಯ ಗುಣೆಯು ಕೇಳಲು
ದ್ವಂದ ಕರಗಳ ಮುಗಿದು ಪೇಳ್ದಿದ
ತಂದೆಯನಗಾ ಧರ್ಮ ದೀಕ್ಷಾಚಾರ ಕ್ರಿಯವೀಯ್ಯೆ ॥ ೪೪ ॥

ಅಕ್ಕಟಾ ನೀನೇನು ಮರುಳಸು
ಚಿಕ್ಕವನು ನಿನಗೇಕೆ ದೀಕ್ಷವ
ಬೆಕ್ಕಿಕಾಗದರಗ್ಯೆವ ಗಿಳಿ ಬಾಳುವದೆಮದರಿಂದ
ಹಕ್ಕಿ ಬೇಡನ ಬಲಿಯ ಮಧ್ಯದಿ
ಸಿಕ್ಕು ಗಗನಕೆ ಪಾರ್ವನೆಂದರೆ
ದಕ್ಕಿಯುಳಿಯುವದೆಂತು ನಿನಗಾದಿಕ್ಕಸವು ನೋಡಾ ॥ ೪೫ ॥

ಮಾಗಿ ಬಯಪುದೆ ಕೋಗಿಲಂ ವರ
ಭೋಗಿ ಬಯಿಪನೆ ರೋಗವಂ ಗುಣ
ಜ್ಯಾಗಿ ಬಯಿಪನೆ ದುರ್ಗುಣಂ ಸಿರಿವಂತ ದಾರಿದ್ರ್ಯ
ವೀಗ ಬರಲೆನ್ನುವನೆ ಮತ್ಸ್ಯವು
ಸಾಗಿ ಪೋಗ್ವುದೆ ಬಕನ ಬಾಯಿಗೆ
ನೀಗು ಶಿವದೀಕ್ಷೆಯದ ಚಿಂತೆಯು ನೆನೆಯಲೇ ಬೇಡಾ ॥ ೪೬ ॥

ಗುರುವೆ ನೀಂ ಪೇಳುವದು ಸರಿಯೇ
ಮರುಳನಿಗೆ ಧತ್ತುರಿಯ ಮೆಲಿಪರೆ
ಮರಣೋನ್ಮುಖನಿಗೆ ನಂಜುಗೊಡುವರೆ ವಿರಹತಾಪನಿಗೆ
ಅರಳ ಪಾಸಿಕೆ ಪಾಸಿಕೊಡುವರೆ
ಬರಿದೆ ಬೆರ್ವಗೆ ಭೇಕತೋರ್ಪರೆ
ದುರಿತಹರ ನೀವಿಂತು ಪೇಳ್ದರೆ ಬಾಳಿನ್ನೆಲ್ಲಿ ॥ ೪೭ ॥

ಎಂದರೆಲೆ ಶಿವಲಿಂಗ ನಿನ್ಮನ
ದಂದವನು ನೋಳ್ಪುದಕೆ ತಿಕ್ಕಿದೆ
ಚಂದ ಕಾಂಚನಮಕ್ಕಸಾಲಿಗವರೆಗೆ ತಿಕ್ಕುಂತೆ
ಮುಂದೆ ಕೃಷಿಕದ ಬೆದೆಯಶೋಧಿಸು
ವಂದದೊಳು ನಿನ್ಮನವ ಶೋಧಿಸಿ
ದೆಂದು ಪೇಳುತ ದೀಕ್ಷೆ ಸಾಮಗ್ರಿಗಳ ನೆರಹೆಂದ ॥ ೪೮ ॥

ಅಗಿದು ಗೋಚರ್ಮಗಳತೆ ಭೂಮಿಯ
ಬಗೆದು ಪರಳ್ಗಳಂಚೆಲಬು ಇದ್ದಲಿ
ಬಗಟು ಮಾಡುತ ಸೋಸಿ ಮಣ್ಣಂತೆಗೆದ ಕುಣಿಯೊಳಗೆ
ಒಗೆದು ತೆಂಗ್ಗಿನ್ನೊಂದು ಬಾಳದ
ಮಿಗಿಲು ಬೇರಂ ಪೊಗರರನೈ
ದ್ದಗಿದು ಪಟ್ಸಾಮಾರ್ಜನಂ ವಿರಚಿಸುತ ವೇದಿಕೆಯ ॥ ೪೯ ॥

ಬಾಳೆ ಕಂಬಂ ಬಿಳಿಯ ಕಬ್ಬಂ
ಸಾಲು ಸಾಲಾಗಿರಿಸಿ ಭಿತ್ತಿಯ
ಮೇಲೆ ಚಿತ್ರಿಸಿ ಬಸವ ಶರಣ ಪ್ರಮಥ ಸಮುಹವನಾ
ಮೇಳಿಸಿವಸಭೆ ಗೌರಿ ಶಂಕರ
ಏಳು ಋಷಿಗಳು ರುದ್ರ ಗಣರುಂ
ಏಳುನೂರೆಪ್ಪತ್ತಮರಗಣದಾಳಿ ಮೊದಲಾಗಿ ॥ ೫೦ ॥

ರಾಜಿಸಿತು ಕಸ್ತುರಿಯ ಸಾರಣೆ
ಮೋಜಿನ ಸುಕುಂಕುಮದ ಕಾರಣೆ
ರಾಜ ತರತರ ರಂಗವಲ್ಲಿಯ ಬಣ್ಣ ತುಂಬಿರ್ದು
ರಾಜ ಜೂಡ ನಭವನವೋವರ
ಪೂಜ್ಯ ಪ್ರಮಥಾಶ್ರಮವೊ ಇದುಯೇಂ
ನೈಜ ನೈಜ ವಿಮುಕ್ತ ಶಿವ ಅನುಭವದ ಮಂಟಪವೊ ॥ ೫೧ ॥

ಮಕರದೋರಣ ರತ್ನದೋರಣ
ಮುಕುರದೋರಣ ಮುತ್ತುದೋರಣ
ವಿಕಸಿತ ವರ ತಳಿರ ತೋರಣವೆಲ್ಲವಂಮೆರೆದು
ಭಕುತ ಮಾಹೇಶ್ವರರು ಶರಣರು
ಮುಕುತಿ ಕಾಂತರು ಸುಕೃತ ಶಾಂತರು
ಸಕಲಗುಣ ಸಂಯುತರು ಸಾಧುಗಳ ಪರಿಮಿತನೆರೆದು ॥ ೫೨ ॥

ಶೀಲ ಸಂಪನ್ನರು ಷಟಸ್ಥಲ
ಕೀಲ ಕರತ್ರಳವಾಂತಮಹಿಮರು
ಸಾಲು ಪಂಕ್ತಿಗಳಿಂದ ಸುಜ್ಞಾನಿಗಳು ಕುಳಿತಿರಲು
ಬಾಲ ಬ್ರಹ್ಮಚಾರಿಗಳು ಮನ
ಮೂಲಹಂಕರವಳಿದ ಸುಮತಿಗ
ಳ್ಜಾಲ ಸೊಬಗಿಂದೆಸೆದುದಾ ಶಿವದೀಕ್ಷೆ ಮಂದಿರವು ॥ ೫೩ ॥

ಪಂಚ ಪಲ್ಲವ ಪಂಚ ಕೊಲ್ಲೆವ
ಪಂಚ ಪತ್ರಿಗಳ್ಪಂಚ ಸುಮಗಳ
ಪಂಚವರ್ಣದ ವಸ್ತ್ರ ಪಂಚಾಮೃತದ ಸಂಚಯವು
ಪಂಚ ಧಾನ್ಯದ ಪಿಷ್ಟಗಳು ಸಲೆ
ಪಂಚ ಕಲಶಗಳಿಂದ ಮೆರೆವಾ
ಪಂಚಬಗೆ ಗುರುದೇವರಿಂ ಭರಮಾಗಿ ರಂಜಿಸಿತು ॥ ೫೪ ॥

ಪೂರ್ವ ದಕ್ಷಿಣ ಪಶ್ಚಿಮೋತ್ತರ
ದ್ವಾರ ಕಲಶವ ಮಧ್ಯ ಹಿಮಕೇ
ದಾರ ಗುರುಪೀಠಸ್ಥ ಕಲಶಾಚಾರ್ಯ ಸ್ಥಾಪನೆಯು
ಪಾರಿವೇಷ್ಟನ ಪಂಚ ನವಗುಣ
ದೋರ ಬಂಧನ ಗೈದು ಸೂತ್ರವ
ನಾರ ಜತ ಚಿನ್ನಾಮ್ರ ಪಲ್ಲವದೂರ್ವ ಕುಸುಮಗಳಿಂ ॥ ೫೫ ॥

ಕಲಶವೊಂದಕ್ಕೈದು ಪೊನ್ನಂ
ಎಲೆಯಡಕಿ ಖೊಬ್ಬರಿ ಬದಾಮಿಯು
ಫಲವ ಮೊದಲಾಗಿಟ್ಟು ಲಲಿತ ಸುಬ್ರಾಹ್ಮಿ ಮಹೂರ್ತದಲಿ
ತೊಳೆದು ಮೈ ಬಿಳಿದುಕುಲನುಡಿಸುತ
ತಲೆಗೆ ವಂದೊಸ್ತ್ರವನು ಸುತ್ತುತ
ತಳೆದು ಭಸಿತ ಶಿವಾಕ್ಷ ಮಾಲೆಯ ಬೆಳ್ಳಿ ಬಟ್ಟಲದಿ ॥ ೫೬ ॥

ತುಂಬಿ ಪೊನ್ನನು ನಂಬಿ ಗುರುಪದ
ಕ್ಷಂಬಲದಿ ಶಿವಲಿಂಗ ಶಿಷ್ಯನು
ಕುಂಭಿನಿಗೆ ಮೈಯಿಕ್ಕಿ ನಮಿಸಿದ ಬಿನ್ನಪವಗೈದು
ಬಿಂಬ ಮುಗುಳ್ನಗೆ ಮೂಡಿ ಗುರುವರ
ಹಂಬಲೇನದು ಪೇಳು ನಿನ್ನದು
ಮೆಂಬ ಗುರುವಿನ ವಾಕ್ಯದಪ್ಪಣೆಯಾಂತು ಗುಣನಿಧಿಯು ॥ ೫೭ ॥

ಶಂಭು ಶಿವಸಮ ಗುರುವರೇಣ್ಯನೆ
ಶಂಭುವಿನ ಘನಪದವ ಪೂಜಿಸಿ
ಶಂಭು ಸುಖ ಶರಧಿಯಲಿ ಮುಳುಗಾಡಿಪುದಕಾ ಪರಮ
ಶಂಭು ದೀಕ್ಷವನಿತ್ತು ಮಲತನು
ವೆಂಬುದನು ಪರಿಹರಿಸಿ ಮಂತ್ರದ
ದಿಂಭನೆನಿಸುವುದಯ್ಯ ಸಂಭ್ರಮದಿಂದ ಗುರುರಾಯ ॥ ೫೮ ॥

ನಡಿಯಬಲ್ಲಿಯೋ ಪೇಳಿದೊಲು ನೀ
ನಡಿವೆ ಗುರುವೆ ಸತ್ಯವೇ ಸೂ
ಳ್ನುಡಿಯದಿಲ್ಲವು ತಮ್ಮ ಪದ ಪದ್ಮದಲಿ ತಿಲಮಾತ್ರ
ಕೊಡು ತನುವ ಗುರುವಿಂಗೆ ಲಿಂಗದಿ
ಇಡು ಮನವ ಚರತತಿಗೆ ಧನವಂ
ಕೊಡುತಿರುವಿಯಾ ಇರುವೆ ತಥ್ಯವೆ ತಥ್ಯವಹುದಹುದು ॥ ೫೯ ॥

ಆದೊಡೊಳಿತೇನಹಲುಮೇಳುತ
ಪಾದಕವನತವಾಗೆ ಗುರುಪದ
ವೇದಿಕೆಯ ಮೇಲಿರಿಸಿ ಕುಶಮುದ್ರಿಗಳ ಬೆರಳಿನಲಿ
ವೇದಿಸುತ ಗುರುಲಿಂಗ ಶಿರಕರ
ವಾದಿ ಪೂಜಿಸಪ್ತ ತ್ರಿವಿಧದಿ
ವೇದ ಘೋಷಣೆಯಿಂದ ದಿವ್ಯಸುವಾದ್ಯದಬ್ಬರದಿ ॥ ೬೦ ॥

ಶಿರದಿ ಗಂಟೆಯ ಬಾಜಿಸುತ್ತಂ
ಗುರುವು ತನ್ನಯ ಹಸ್ತದಿಂದಂ
ಶರೀರವೆಲ್ಲಕೆ ಪೂಸಿ ಭಸ್ಮವನೊರೆದ ಮಂತ್ರವನು
ಚರಪದೋದಕ ನಲಿಸೆಗಳದೊಳು
ಪರಮ ಲಿಂಗವ ಧರಿಸಿ ಪೇಳಿದ
ಶರಣ ಸತಿ ನೀ ಲಿಂಗವಿದು ಪತಿ ಮರೆಯದಿರು ಸತತ ॥ ೬೧ ॥

ಮಗುವೆ ಮರೆತರೆ ಸಿಗದು ಮುಂದಿದು
ಜಗದಿ ಭೋಗದಿ ಮೊಗಡದಿರು ಮನ
ಮುಗಿದು ಬಾಳ್ವದು ಲಿಂಗಚರಗುರು ಭಸಿತ ಮಂತ್ರದಲಿ
ಸುಗುಣ ಚರ ಪಾದಾಂಬು ಶಿವನುಮ
ನಗಳ ಮಣಿ ಪ್ರಾಸಾದದಲಿ ನಂ
ಬುಗೆಯನಿರಿಸುತ ಮೆರದಿಯಾ ಧರೆ ಧನ್ಯ ನೀನಾಗ್ಗಿ ॥ ೬೨ ॥

ಮರೆಯದಿರು ಗುರುಲಿಂಗಜಂಗಮ
ಮರೆಯದಿರು ಹರನಾಕ್ಷಿಭೂತಿಯ
ಮರೆಯದಿರು ಚರನೊಕ್ಕುದಂಚರಪಾದ ತೀರ್ಥವನಂ ॥
ಮರೆಯದಿರು ಪುರಹರನ ಮನುವನು
ಮರೆಯದಿರು ಸತ್ಸಂಗವನು ದಿನ
ಮರೆಯದೆ ಸುಗುಣ ಮಗನೆ ಪರರಿರವರಿತುಮುಪಕಾರ ॥ ೬೩ ॥

ಮರವಿನೊಳು ಗೈಯದಿರು ಪಾಪಂ
ಮರವೆಯಿಂ ಪರವನುತೆ ಧನವಂ
ಬೆರತುಕೊಳ್ಳಲು ನಿರಯವನು ಸೇರುವದೆ ನಿಶ್ಚಯವು
ತೊರೆಯದಿರು ಸತಿ ಸುತರ ಗೃಹವಂ
ಜರೆಯದಿರು ಹಿತ ವಾಕ್ಯ ಹಿರಿಯರ
ಕರುಣೆಯೆನಿಸುತ ಕಾಲಹರಣೆಸು ಶೀಲ ಚಿದ್ಬಾಲ ॥ ೬೪ ॥

ಆರು ಚಕ್ರಾರಾರು ತತ್ವಗ
ಳಾರು ಲಿಂಗಂ ನೂರುದ್ವಯ ಪದಿ
ನಾರು ಸಲೆ ಸಕಿಲಾದಿಗಳ ಮತ್ತಾರು ಮುದ್ರೆಗಳ
ಆರು ಶತ ಮೂರೇಳು ಸಾಸಿರ
ಸಾರ ಜಪದ ವಿಚಾರವಾತ್ಮನ
ತಾರತಮ್ಯ ಜ್ಞಾನ ಶೋಧಿಸೆ ಧೀರ ನೀ ಮುಕ್ತಾ ॥ ೬೫ ॥

ತನುವಿನೊಳ ಹೊರಗೊನೆವ ಲಕ್ಷದ
ಕೊನೆಯ ಬಯಲಿನ ಮರೆಯ ನಿಲವಿನ
ಘನತೆ ಗುಣ ಘಟಿತವು ಚಂಚಲಭಾವ ತಜ್ಜೀವಾ
ವನಜ ಸೂತ್ರನಿವಾರಸೂಸಕ
ಜಿನಗು ಜುಮಳ ರಜತರವಿಕಣ
ದಣುವಿಗಣು ಮಹತಕ್ಕೆ ಮಹಿ ಸಮವರಿದು ಸುಖಿಸೈ ನೀ ॥ ೬೬ ॥

ತನುವೆ ದೇಗುಲವಾತ್ಮ ಲಿಂಗವು
ಘನಪರವೆ ಪ್ರಜ್ವಲಿಪ ದೀವಿಗೆ
ಮನವೆ ಪೂಜಕ ಕರಣವರ್ಜಿತ ಭಕ್ತಿಭಾವದಲಿ
ಘನತರೋನ್ನತ ನಿಲವ ಸಾಧಿಸಿ
ತನುಪರವೆಯೀಡಾಡಿ ಲಿಂಗದಿ
ಮನವ ನೀಗಿರೆ ವೀರಶೈವೋತ್ಕರ್ಷ ಸಾಮ್ರಹಸ್ಯ ॥ ೬೭ ॥

ವನಜ ಭವಹರಿ ಸುರಪ ಮುಖ್ಯರು
ಮನುಮಿಷರು ತಾವಾದರಲ್ಲದೆ
ಜನನ ಮರಣದ ಸೆಳವಿನೊಳು ಮುಳಿದ್ದನನಮಾಗಿಹರು
ತನಯ ನಿನಗಿದು ಸಾಧ್ಯವಾಹುದು
ಮನವರತಲನುಭವಿಯುಮಾದರೆ
ಜನನ ಮರಣದ ಭಯವು ನಿನಗೆಂದಿಲ್ಲ ಸುಖವಾತ್ಮಾ ॥ ೬೮ ॥

ಬೋಧಕೃತವರ ಗುರುವಿನೊಚನವ
ನಾದರಿಸಿ ಕೇಳುತಲಿ ಮಣಿಯುತ
ಪಾದ ಕವನತನಾಗುತಪ್ಪಾವರಣ ಮಹಿಮೆಯನು
ಸಾಧಿಸುತಲಾರಾರು ಮುಕ್ತಿಯ
ಸಾಧಿಸಿದರವರಾದಿ ಚರಿತೆಯ
ಸಾದರದಿ ಪೇಳುತ್ತಲೆನ್ನುದ್ಧಾರಗೈಯ್ಯುವದು ॥ ೬೯ ॥

ಎನುವ ತನುಜನ ಮನದ ಬಯಕೆಯ
ದನುವನರಿಯುತ ತಾಳಿ ಸಂತಸ
ಎನಿತು ಕೇಳ್ದರು ಬೇಸರಿಲ್ಲವು ಎನಗೆ ನಿನ್ನಿಂದಾ
ಘನದಯಾನಿಧಿ ಪೇಳತೊಡಗಿದ
ಸನುಮತಿಸಿಕೊಳ್ಳೈಯ್ಯ ನೀನತಿ
ಮನನ ಶ್ರವಣ ಧ್ಯಾಸ ನಿಜದಿಂದೆನುತ ಗುರುರಾಯ ॥ ೭೦ ॥

ಶರಣ ಶಿವಲಿಂಗೇಶ್ವರನ ವರ
ಚರಿತೆಯನು ಶ್ರೀ ಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳಿ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ತ್ರಿತಯ ಸಂಧಿಯಿದು ॥ ೭೧ ॥

ಅಂತು ಸಂಧಿ ೩ಕ್ಕಂ ಪದನು ೨೨೩ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೪

ಶರಣ ಶಿವಲಿಂಗನಿಗೆ ಅಷ್ಟಾ
ವರಣದೊಳು ಗುರುಲಿಂಗ ಮಹಿಮೆಯ
ನೊರೆದನಾ ಗುರುರಾಯ ಕಥೆಯಾಲಿಪುದು ಸಜ್ಜನರು ॥ ಪಲ್ಲ ॥

ಧರ್ಮವಾಹನ ಕರ್ಮನಾಶನ
ದುರ್ಮರಣ ವಾರಿಧಿಗೆ ಕುಂಭಜ
ಧರ್ಮತನುವನ ದಹನ ಕಾರಣ ಚರ್ಮಗಜವಸನಾ
ಧರ್ಮಗಿರಿದ್ಯೌಕೇಶ ಸದ್ಗುಣ
ಧರ್ಮ ಭಕ್ತರ ಹೃದಯ ಸುನಿಲಯ
ಧರ್ಮ ಪೀಠದ ಧರ್ಮಪುರ ಶಿವಲಿಂಗ ಭವಭಂಗ ॥ ೧ ॥

ಹಿಮದ ಬಲು ಬಾಧೆಯನು ಕಂಥೆಯು
ಕ್ರಮದಿ ಕಳೆಯುವ ತೆರದಿ ಮಲತ್ರಯ
ತಮವ ಕೆಡಿಪುದು ಸತ್ಯವಷ್ಟಾವರಣಗಳು ಬಿಡದೆ
ಅಮಿತ ಜ್ಞಾನವನೊದಗಿಸುತ ಮನ
ವಿಮಲವಾಗುತ ನಿತ್ಯ ಸುಖದಾ
ಶ್ರಮಕೆ ಸಾಧನ ಶಿವಸ್ವರೂಪಂಚಿತ್ಕ್ರಿಯಾನ್ವಿತವು ॥ ೨ ॥

ಗುರುವು ಲಿಂಗವು ಜಂಗಮಂ ವರ
ಚರಪದೋದಕ ಮಂತ್ರ ಭಸಿತಂ
ಹರನಯನ ಪ್ರಾಸಾದವಾವರಣಾಷ್ಟಮಿವು ತ್ರಿಪುರ
ಹರನ ಸಲ್ಲೀಲೆಯಲಿ ಸಿದ್ಧಾ
ಗಿರುವ ವೈಧರೆಯುದ್ಧರಿಪುದಕೆ
ಅರಿಯಲಿವುಗಳಲೆರಡುತೆರಮಾಗಿರ್ಕುವಿವರಿಸು ನೀ ॥ ೩ ॥

ಪರಮ ಮಂತ್ರಪ್ರಸಾದ ಪದಜಲ
ವರ ಭಸಿತಮಿವು ಕ್ರಿಯಾ ರೂಪಾ
ವರಣಮೆನಿಪವು ನಾಲ್ಕು ಧರೆಯಲಿ ಗುರುವು ಚರಲಿಂಗ
ಹರ ಸುಮನಮಿವು ನಾಲ್ಕುಮರಿಯಲು
ನಿರುತ ಚಿದ್ರೂಪಾವರಣ ಜಗ
ದಿರವಿ ಗತಿ ಸುಖಸಾಧನವು ಪರಭೋಗ ಮೋಕ್ಷಕ್ಕೆ ॥ ೪ ॥

ಪಾದಕುನ್ನತನಾದ ಶಿಷ್ಯನ
ಶೋಧಿಸುತ ಮನ ಕರಣವೆಲ್ಲವ
ನಾದಯಾಂಬುಧಿಯಿಟ್ಟು ಕರ ಶಿರ ಧರಿಸಿ ಲಿಂಗವನು
ಬೋಧಿಸುತ ಮಂತ್ರವನು ಲಿಂಗಾಂ
ಗ್ವಾದಿ ತೋರುತ ತನ್ನ ಪರಿಮಾ
ಳ್ಬಾ ಧುರೀಣ ಗುರುವರ್ಯನೊಂದಾವರಣಮೆನಿಸುವನು ॥ ೫ ॥

ಕರತಳಾಬ್ಜದಿ ಪೂಜೆಗೊಂಡಾ
ಕರಣ ಸರ್ವಾಂಗದೊಳು ನೆರೆದುಂ
ಬರವೆ ಮನ ಮರುಕಂಗ ಭಾವವ ಕಳೆದು ಸುಸ್ಥಿರದಿ
ಮೆರೆವ ನಿಜ ಭಾವವನು ಸಂತ
ಕರಕೆ ಕೊಟ್ಟಾ ಲಿಂಗಸುಕಲಾ
ತ್ಮೆರಡನೆಯು ಆವರಣವಿದುವೆಂದರಿಯಲಹುದಾಗಿ ॥ ೬ ॥

ಷಡುಸ್ಥಲವ ಷಡು ಚಕ್ರವಾಘನ
ಷಡು ಪ್ರಣಪ ಷಡುಲಿಂಗ ಷಡು ಮುಖ
ಷಡು ಹಸ್ತ ಷಡು ಶಕ್ತಿ ಷಡುತರ ಭಕ್ತಿಯಿಂ ಸತತ
ಬಿಡದೆ ಸುಪದಾರ್ಥ ಪ್ರಸಾದವ
ಕೊಡಿಸಿ ಲಿಂಗದ ನೆನಹಿಲಿರಿಸುವ
ವಡಿಯ ಜಂಗಮಮೂರ್ತಿ ಮೂರಾವರುಣಮೆನಿಸುವನು ॥ ೭ ॥

ವಾಯುದಶವರ್ತನವ ಪಿಂಗಿಸಿ
ತೋಯು ಪದ ದಶವಿದೆಸೆವಾಚರ
ಣೇಯು ಸವಿಯದು ತೋರಿ ವಿಷಯು ಷುಖಾದಿಗಳನೆಲ್ಲಂ
ಹೇಯಮೆಂದೆನುತಾದಿ ಪಾಷದ
ಮಾಯು ಮಾರಣ ಬೆದರಿಕಿಲ್ಲದೆ
ಕಾರ್ಯನಿರ್ಮಲವೆನಿಪ ಪದಜಲ ಚತುರ್ಥಾವರಣ ॥ ೮ ॥

ಕಾಟಕೊಡುಹತ್ತಿಂದ್ರಿಯಗಳೊಳು
ಕೊಟ ಮಾಡಿಸಿ ಲಿಂಗ ಬಿಡದೇ
ಪಾಟಮಾವೇಕಾದಶ ಪ್ರಸಾದಮಿನಿತವನು
ಕೋಟಲೆಯುಮಿಲ್ಲದಲೆ ತಲ್ಲಿಂ
ಗ್ಸೇಟ ಮುಖದಿಂ ಸಲಿಸೆ ಭಕ್ತಗೆ
ಮಾಟ ಮಂಗಲದ ಪ್ರಸಾದಂ ಪಂಚಮಾವರಣ ॥ ೯ ॥

ನೆಲಕೆಯೊಂದಣು ಸೂಸದಂದದಿ
ನಲಿದು ಸರ್ವಾಂಗವನು ಬಿಡದಲೆ
ಬೊಳಿದ ರಾಮಯ ಕಳೆವುದದು ನಿಶ್ಚಯವು ಭವಭಸಿತಂ
ಸಲಿಲ ಭವಸುತ ಬರೆದ ಲಿಖಿತದ
ಬಲವ ಕೆಡಿಪುದು ಹಮ್ಮುಹರಿಪುದು
ಲಲಿತ ಷಟ್‌ಸ್ಥಲ ಪೊಂದಿಪುದು ಭಸಿತಂ ಷಟಾವರಣ ॥ ೧೦ ॥

ಮರುಳುಗಳನ್ವತ್ತರಕೆ ಬರಗೊಡ
ದಿರಿಸಿ ದೂರದಿ ಪಾಪ ತಮದಿರ
ದ್ದರಿಪ ಹಿರಿದುಃಪಾತಕ ತೃಣಕಗ್ನಿಯೆಂದೆನಿಸಿ
ಪರಮ ಸುಕೃತವನೊಬ್ಬುಳಿಸಿ ಪುರ
ಹರನ ಕರುಣವನಿತ್ತು ರಕ್ಷಿಪ
ಹರನಯನ ಮಣಿಮಾಲೆ ಸಪ್ತಾವರಣಮೆನಿಪುದಿದು ॥ ೧೧ ॥

ಪಂಚಪಾತಕ ಮೂಲತರಿವದು
ಪಂಚ ಬಾಣನ ವೈರಿತಾನದು
ಪಂಚ ಪ್ರಣಮವು ಸ್ಮರಿಸೆ ಜಗ ಪ್ರಪಂಚ ಜನಗಳಿಗೆ
ಪಂಚ ಸುಖವಂನಿತ್ತು ರಕ್ಷಿಪು
ದಂಚಿಗಮನಾದಿಗಳಿಗರಿದಿದು
ಪಂಚಮುಖಭವ ಮಂತ್ರಮಿಂತಷ್ಟಾವರಣಮುಂಟು ॥ ೧೨ ॥

ಆದೊಡಲೆ ಶಿವಲಿಂಗ ಸುತನಿನ
ಗಾದಿ ಗುರು ಮಹಿಮೆಯನು ಪೇಳಲು
ಸಾಧ್ಯಮಲ್ಲವಸಾಧ್ಯವಾ ದಯಗುಣಿಯ ಸಚ್ಚರಿತ್ರ
ವೇದ ಸ್ಮೃತಿ ತತಿಗಳಿಗಗೋಚರ
ವಾದಿ ಶೇಷಂಗರಿದು ಎನ್ನಿಂ
ದಾದನಿತು ಬೋಧಿಸುವೆ ನೀನಾದರಿಸಿ ಕೇಳುವದು ॥ ೧೩ ॥

ಗುರುವೆ ಬೊಮ್ಮನು ಗುರುವೆ ವಿಷ್ಣುವು
ಗುರುವೆ ಗೌರೀನಾಥನಾ ಸ
ದ್ಗುರುವೆ ಸಾಕ್ಷಾತ್ ಶೀಕ್ಷೆ ದೀಕ್ಷೆಯ ಮೋಕ್ಷ ಕಾರಣನು
ಗುರುವೆ ಸರ್ವಾರ್ಥೇಷ್ಟದಾತನು
ಗುರುವೆ ಕಲುಷಕು ಪಂಕಧೂತನು
ಗುರುವೆ ಪುಣ್ಯ ಪುನೀತ ಪರಮ ಪವಿತ್ರ ಶುಭಗಾತ್ರ ॥ ೧೪ ॥

ಗುರುವರನೆ ದೇವಾಧಿದೇವನು
ಗುರುವರನೆ ಜೀವಾಳಿ ಜನಕನು
ಗುರುವರನೆ ಸದ್ಭಾವ ಸಂಮೇಲಕ ಸುಸತ್ಕಲನು
ಗುರುವರನೆ ಸದ್ಭಕ್ತಿ ಶೀಲನು
ಗುರುವರನೆ ಶಿವಭಕ್ತಿ ಮೂಲನು
ಗುರು ಕರುಣ ಸಾಗರನು ಸತ್ಸುಖ ಭೋಗದಾಗರನು ॥ ೧೫ ॥

ಗುರು ವಚನ ವೇದಾದಿ ಸಾರವು
ಗುರು ವಚನ ಶಾಸ್ತ್ರಾಗಮಂಗಳು
ಗುರು ವಚನ ಗುರು ಕೃಪೆಯು ಕೈವಲ್ಯಕ್ಕೆ ಕಾರಣವು
ಗುರು ಪದದ್ವಯ ಪೂಜೆ ಗಿರಿಜಾ
ವರನ ಪೂಜೆಯದಾಗೆ ಮರೆವುದು
ಗುರುಚರಣ ಕೃಪೆಯಲ್ಲದೀ ಧರೆಯೆಂತು ಬಾಳುವದು ॥ ೧೬ ॥

ಗುರುವಿಗಿನ್ನಾರಿಲ್ಲ ಸರಿ ಸ
ದ್ಗುರವಿಗಿಂ ಮಿಗಿಲಿಲ್ಲವಾಪರ
ಗುರುವಿಗಿಂದತಿಯಧಿಕಮಾಗಿಹ ವಸ್ತುವಿಲ್ಲೆಂದು
ಹರನು "ನಗುರೋರಧಿಕಮೆ"ಂದುಸು
ರಿರುವನಾ ಕಾರಣದಿ ಗುರುವಿನ
ಚರಣ ಸರಸಿಜ ನಿರುತ ಭಜಿಸಲು ಪರಿಹರವು ಬಂಧ ॥ ೧೭ ॥

ಧರೆಗೆ ಹರನಿಂ ದೈವವಿಲ್ಲವು
ಕರಣಕಿಂದುಂಬಿಟ್ಟು ರುಚಿಯಿ
ಲ್ಲೆರದ ಸೊಮಾತೆಯಳಿಗಿಂದಂ ಪ್ರೀಯಕರರಿಲ್ಲ
ತರುಣೆಗಿಂ ಸುಖಭೋಗಮಿಲ್ಲ್ರತಿ
ವರನ ಸೋಲಿಪ ಭವನುಮಿಲ್ಲ್ರಯ
ಪುರದಿ ಗುರುವಿಂದಧಿಕ ಸೇವ್ಯರುಮಿಲ್ಲ ಧಿಟವಾಗಿ ॥ ೧೮ ॥

ಧರಣಿಯೊಳಗಿಪ ನರರು ಮುನಿದೊಡೆ
ಹರನದನು ಪರಿಹರಿಪನಾ ಪುರ
ಹರನು ಮುನಿದೊಡಮದನು ಪರಿಹರಿಸುವನು ಗುರುವರನು
ಗುರುವರೇಣ್ಯನು ಮುನಿದೊಡದ ಪರಿ
ಹರಿಸುವವರಿಲ್ಲೆಂದು ಶೃತಿ ತಾ
ನರಪುವದು ಗುರುಮನ್ಯು ಧನ್ನೆಂಬತಿಶಯೋಕ್ತಿಯಲಿ ॥ ೧೯ ॥

ತರಳ ಕೇಳ್ ಶಿವಲಿಂಗನಿದಕಾ
ನೊರವೆನೊಂದಿತಿಹಾಸ ಪೂರ್ವದಿ
ಗುರುವಚನ ಮಂತ್ರವನು ಸ್ಮರಿಸುತ ಮುಕ್ತಿಯನು ಪಡೆದ
ಪರಮಮರಗುಂಡದಲಿ ಪಂಡಿತ
ರರಸನಾಗಿಪ ಮಲ್ಲಿಕಾರ್ಜುನ
ಗುರುವರಾರ್ಯರ ಶಿಷ್ಯ ಗುರುಭಕ್ತಯ್ಯ ತಾನಾಗಿ ॥ ೨೦ ॥

ನಿಷ್ಠೆಯಲಿ ಗುರುಸೇವೆಯಂ ಮನ
ಮುಟ್ಟಿ ಮಾಡುವ ಧನ್ಯ ಸೇವ್ಯವು
ಕಷ್ಟ ಜನ್ಮಕೆ ಕಾರಣನಾಗುತ ಹುಟ್ಟುವವೆ ನಿಜವು
ಶ್ರೇಷ್ಠ ಗುರುಪದ ಪೂಜೆ ಸುಖವು
ತೃಷ್ಟ ಮೂರ್ತಿಯ ಧ್ಯಾನಮನಲಯ
ಶಿಷ್ಟ ಗುರುಕೃಪೆ ನಷ್ಟಗೈವದು ಮರಣ ಜನನವನು ॥ ೨೧ ॥

ಎನುತ ಗುರುಪದವಿನಿತು ಘನವೆಂ
ದನುನಯದಿ ನಂಬಿರುತ ಕರುಣ ಸು
ವಿನಯ ಸತ್ಯಾಚಾರ ಶಮೆದಮೆ ಭಕ್ತಿಯಿಂ ಕೂಡಿ
ಮನದೊಳಾದರು ಪರರಿಗಪ್ರಕೃತಿ
ಯಣಿಸದತಿ ಸನ್ಮಾರ್ಗದೊಳಗಿಹ
ನನಿತು ಗುಣಿಯಧಿಕಾರಿ ಲಕ್ಷಣಯುತನು ಗುರುಭಕ್ತ ॥ ೨೨ ॥

ಸತತ ಸೇವೆಯ ಗೈಯ್ಯುತತಿಹಿತ
ಮೃತವ ಸಾಧಿಸಿ ಮನದಿ ಸದ್ಗುರು
ಯತಿಯ ಪದಪದ್ಮವನು ಪೂಜಿಸಿ ಧನ್ಯನೆನಿಸುವನು
ವಿತತ ಸತ್ಕರ್ಮಗಳನಾಸಿಸಿ
ಮತಿಯೊಳೆಳಸುವನಲ್ಲ ತಮಲನ
ಮತಿಶಯದ ಗುರುಭಕ್ತಿಮೂಲನು ಸತ್ಯ ಗುರುಭಕ್ತಾ ॥ ೨೩ ॥

ಇರುತಲೊಂದಿನ ಮಲ್ಲಿಕಾರ್ಜುನ
ಗುರುವು ಶಿವ ಪ್ರಾಸಾದ ಸಲಿಸುತ
ಲಿರಲು ಹಿಂಗಡೆಯಲ್ಲಿ ಶಿಷ್ಯರ ಬರವು ಸಮನಿಸಲು
ಕರೆದು ಸರ್ವರ ಸೇವೆ ಕೈಕೊಳು
ತಿರವೆ ಗುರುಭಕ್ತನನು ಪೊಗಳಲು
ಬರಿವೆ ಕೊಂಡಾಡುವರುಮವನನು ಸರಿಯೆಮಿದುಮಲ್ಲ ॥ ೨೪ ॥

ವೆಂದು ಹಿಂಗಡೆಯೆಲ್ಲ ಶಿಷ್ಯರು
ನಿಂದಿಸುತಲಿರುತಿರುವದನು ತಿಳಿ
ದಂ ದಯಾನಿಧಿಯಿಂದು ಗುರುಭಕ್ತನ ಸುಗುಣಗಳನು
ಸಂದ ಶಿಷ್ಯರ ವೃಂದಕೆಲ್ಲಕೆ
ಮುಂದುಗಾಣಿಸಬೇಕುಮವನಿಗೆ
ಬಂದ ನಿಂದೆಯ ಗೊಂದಲಳಿಪುದಕೊಂದು ಯೋಚನೆಯ ॥ ೨೫ ॥

ಮಾಡಿ ಹರುಷಂಗೂಡಿ ಮುದ ತಾ
ವ್ರೂಢ್ವ ಮಂಚವ ಶೃಂಗರಿಸುತಾ
ಥಾಡ ಶಿಷ್ಯರ ಬರಿಸೆ ಬರಮಾಡುತಲಿ ಬಂದೆರಗೆ
ಗಾಢನಾಗಳೆ ಕರೆದು ಸರ್ವರ
ನೋಡಿ ಗುರುವರನೆಂದ ಮಂಚದಿ
ಕೂಡಿರೆನುತಲಿ ಸೇಮಿಸಲು ವಲ್ಲೆಂದರವರಾಗ ॥ ೨೬ ॥

ಗುರುಮನುಜನೆಂಬವನು ಗುರುಧನ
ಹರಿಸಿ ತಿಂಬುವ ಕಿರಿಯ ಕುನ್ನಿಯು
ಗುರುಮಂಚವೇರುವನು ಗುರುಪದ ವಂದನಾಲಶನು
ಪರವಸ್ತು ಸಾಧಕನು ಛೇದಕ
ಪರ ಸತಿಯ ಪರಜೀವ ಬಾಧಕ
ಪರ ಸಮಯ ಬೋಧಕನು ನರಕದೊಳಿಳಿವನಿದು ಸತ್ಯಂ ॥ ೨೭ ॥

ವಲ್ಲೆ ನಾವೆನುತವರು ಗುರುವಚ
ನಲ್ಲವೀಪರಿ ಪೇಳ್ವುದಲ್ಲವು
ಸಲ್ಲದಿದು ನಮಗೆನುತ ಸರಿದರು ಹಿಂದಕವರಾಗ
ಮಲ್ಲಿಕಾರ್ಜುನದೇವ ಗುರುವರ
ಬಲ್ಲ ಗುರುಭಕ್ತನನು ಕರೆಯುತ
ನಿಲ್ಲದಾಗಳೆ ಸಾರಿದರು ತವ ಚಾರುವಚನವನು ॥ ೨೮ ॥

ಏರು ಮಂಚದಮೇಲೆ ಕೀರ್ತಿಯ
ಸಾರು ಧರಣಿಯ ತಲದಿ ಬೀಜವ
ನೂರು ಗುರುಭಕ್ತಿಯ ಸುಧಾರಸಪೀರು ಜವಸಾರು
ತೋರು ಸದ್ಗುಣಮೀರು ಭೀತಿಯ
ಪಾರು ಸಂಕಲ್ಪಗಳ ಪಲ್ವಲ
ಸಾರಮೃದುಪಾಸಿಕೆಯ ಮಂಚದಿ ಪವಡಿಸುವದೆನಲು ॥ ೨೯ ॥

ಗುರು ವಚನವೇದಾಳಿ ಸಾರವು
ಗುರು ವಚನ ಮಂತ್ರಾಳಿ ಮೂಲವು
ಗುರು ವಚನ ಶಾಸ್ತ್ರಾಗಮಂಗಳ ಬೇರು ಘನಮೇರು
ಗುರು ವಚನ ಸುಧೆ ಸಾರ ಸದ್ಗುರು
ವರ ವಚನ ರಜನೀಶ ಮದಕರಿ
ಗಿರಿಯನೇರಲಸಾಧ್ಯವಿರಿವಿಗೆ ಸಾಧ್ಯಮದರಂತೆ ॥ ೩೦ ॥

ಏರಿ ಮಂಚವನಾಗ ಕುಳಿತನು
ಕ್ರೂರ ಶಿಷ್ಯರು ನೋಡಿ ಕೋಪವ
ನೇರಿ ಘುಡುಘುಡುಸುತಲಿ ಧೂರ್ತರು ಪೊಡೆಯಬೇಕೆಂದು
ಚೀರಿ ಗೊಡಗೊಡನ್ನಾಡುತಿರಲದ
ಸಾರ ಹೃದಯವನು ಕಂಡು ಶೂಲವ
ನೂರಿಸಿದನಿದನೇರ ಬನ್ನಿರಿ ನೀವೆ ಘನಘನರು ॥ ೩೧ ॥

ಬಾಲಕರು ನಾವೇರಬಲ್ಲೆವೆ
ಶೀಲ ನವಗುರು ಭಕ್ತ ಮೊದಲೆ ವಿ
ಶಾಲ ಮಂಚವನೇರಿದಂತಿದನೇರಿ ಕುಳ್ಳಿರುವ
ಲೀಲೆಯಿಂದವನನ್ನೆ ಕರೆಯಿರಿ
ಕೀಳರೆಂದೆಮ್ಮವನು ಜರಿಯಿರಿ
ಕಾಲನರಮನೆ ಶೇರಮನೆ ಸೇರಲು ಚಿತಾಯ್ತುವನ ಫಣಬರಹು ॥ ೩೨ ॥

ವಲ್ಲಿ ರಾಯಲೆ ವಲ್ಲೆವೈಗುರು
ಸೊಲ್ಲನಾಡಲು ಬಹುದೆಮಿಲ್ಲವು
ಖುಲ್ಲತನವೆಂದೆಂದು ಗೈಯ್ಯಲು ಬಾರದವನೊಳಗೆ
ಸುಳ್ಳನಾಡೆವು ನಿಮ್ಮಯಾಪದ
ಪಲ್ಲವದಿಯೆಂದೆಂದು ಗುರುವರ
ಕೊಲ್ಲದಿರು ಸಮ್ಮನಿಬರೆಲ್ಲರನವನೆ ಘನಮಹಿಮ ॥ ೩೩ ॥

ಯತಿಯೆ ಬಾ ಯತಿತಿಲಕ ಬಾ ಯತಿ
ಸುತನೆ ಬಾ ಮಮಸುತನೆ ಬಾ ಗಣ
ಪತಿಯೆ ಬಾ ಸದ್ಗತಿಯೆ ಬಾ ಸನ್ನುತನೆ ಜವ ಬಾಬಾ
ಕೃತಕ ಶಿಷ್ಯರ ಗೆಲ್ಲಬಾ ದು
ರ್ಮತಿಗಳ್ನಿಂದೆಯ ನಿಲಿಸಬಾ ವರ
ಕ್ಷಿತಿಯ ತಳದಲಿ ನಿನ್ನ ಕೀರ್ತಿಯ ಲತೆಯುಪಬ್ಬಲಿ ಬಾ ॥ ೩೪ ॥

ಕಲಿಸು ಭಕ್ತಿಯ ಜಗಕೆ ಗುಣಗಣ
ನಿಲಿಸು ದೂಷಕರಾಳಿ ವಚನವ
ಗೆಲಿಸು ಶಿವ ಸಮಯವನು ಪರ್ಬಿಸು ಪುಣ್ಯವರ ಪ್ರಭೆಯ
ಬೆಳಿಸು ಮುಕ್ತ್ಯಾಂಗನೆಯನಂತ್ವರ
ನೊಲಿಸು ಗಣವೃಂದದೊಳು ಕೀರ್ತಿಯ
ನೆಲಿಸು ನಿಲಿಸಿದ ಶೂಲವೇರಲುಮಲಸ ಬೇಡೆಂದಾ ॥ ೩೫ ॥

ತಾಳಿ ಗರ್ಭವ ಚೇಳು ಬಾಳದು
ಬಾಳೆ ಫಲವಿತ್ತಿಂದೆ ಬಾಳದು
ಕಾಲು ಹಿಂದಕೆ ಸರಿದ ವೋಲೆಯಕಾರ ರಣದೊಳಗೆ
ಬಾಳುವದುಯಂತಕಟ ಶಿಷ್ಯನು
ಶೀಲ ಗುರುವಚನವನು ಮೀರಲು
ಕೀಳುಭವದಲಿ ಪುಟ್ಟಿಸಾಯ್ವುದು ಬಿಡನುಮೆಂದೆಂದು ॥ ೩೬ ॥

ಮೋಕ್ಷ ಸಾಧನ ಶೀಲಗುರುಪದ
ಕಾಂಕ್ಷೆಯಂತಿಹುದಂತೆ ವರ್ತಿಪ
ನೀಕ್ಷಿಸದೆ ದುಃಶಿಷ್ಯರನು ಮತಕೆಳಸಚಿತ್ತವನು
ಶೀಕ್ಷಿಸುತ ಗುರುವಚನ ಸೇವೆಯು
ಪೇಕ್ಷೆಗೈಯ್ಯದೆಯವರ ಕರುಣ ಕ
ಟಾಕ್ಷ ಬಲದಲಿ ಶೂಲವೇರುತ ಮೇಲೆ ಮಂಡಿಸಿದ ॥ ೩೭ ॥

ಗಾಳಿಗಂಜುದೆ ಮೋಡ ಪಿಡಿದಕ
ರಾಳಕಂಜುದೆ ತಂಡ ಭೀತಿ ಪ
ವ್ಯಾಳಕಂಜುದೆ ಗಂಡಭೇರುಂಡೆಂಬ ತೆರನಂತೆ
ಚೇಳಿಗಂಜುದೆ ಕೆಂಡ ಹಾರುವ
ದೂಳಿಗಂಜುದೆ ಗುಂಡ ಮರಣದ
ಗೋಳಕಂಜನು ಪುಂಡನದರಂತಿರ್ದ ಗುರುಭಕ್ತ ॥ ೩೮ ॥

ಕಾಲ ಕರ್ಮದ ಭೀತಿಯಿಲ್ಲದೆ
ಶೂಲ ಮೊನೆಯಲಿ ಕೀಲಿಸಿರುತಿರೆ
ಶೀಲ ಸದ್ಗುಣ ಲೋಲನಂ ಜನ ಕಂಡು ಬೆರಗಾಗೆ
ಪಾಲಿಸೆನುತಲಿ ಸರ್ವ ಶಿಷ್ಯರ
ಜಾಲ ಗುರುಪದಕೆರಗೆ ಕರುಣ ವಿ
ಶಾಲ ಕರೆಯಲು ಗುರು ನಿರೂಪದಲಿಳಿದು ಬರಲಾಗೆ ॥ ೩೯ ॥

ವ್ರಣಮದಿಲ್ಲವು ನೋವುಮಿಲ್ಲವು
ಮುನಿಸುಮಿಲ್ಲವು ಕನಸುಮಿಲ್ಲವು
ಮಣಿಯುತಿರ್ಥನು ಕಿಂಕರತ್ವದಿ ಮರೆವ ಗುರುಪದದಿ
ಮಣಿವ ಬದಿರೇ ದೇವವಾಹನ
ಸನುತ ದಂಡಿಗೆಯೊಗ್ಗದೇ ನಿಜ
ವೆನುತಲ್ಲರಸುತಲಿರ್ದ ಶಿಷ್ಯರಕೂಡಿ ಸೇವೆಯುಸು ॥ ೪೦ ॥

ಗೈಯ್ಯುತಿರಲೊಂದಿವಸ ಗುರುಪದ
ವೋವಿ ಪೂಜಿಪ ಪೂಜೆ ಗಾನವ
ಪೂವು ತರಲ್ಪೊರಟಿರಲು ಗುರುಪದರಕ್ಷೆಯುಡಹಲ್ಕೆ
ಜೀವದಲಿ ತಳಮಳಿಸಿ ಗುರುದ್ರೋ
ಹಾವರಿಸಿತಕಟೆಂದು ಮರಗುತ
ಭಾವಶುದ್ಧಿಗೆ ತನ್ನ ಚರಣವ ಕಡಿದು ಬಿಸುಟಿದನು ॥ ೪೧ ॥

ಎಲ್ಲರಾಶ್ಚರ್ಯಗೊಂಡು ಸದ್ಗುರು
ಮಲ್ಲಿಕಾರ್ಜುನ ಪಂಡಿತರಿಗಿದ
ನೆಲ್ಲವರರುಹಲುಮಲ್ಲಿಗವರೈತಂದು ಕರುಣದಲಿ
ಮೆಲ್ಲನಾರೈವುತಲಿ ನೋಡಲು
ಬಲ್ಲಿದ ಗುರುಭಕ್ತನಡಿ ಮೊದ
ಲಲ್ಲಿರುವ ತೆರನಾಗೆ ಬುಲ್ಲವಿಸುತ್ತ ಬಿಗಿದಪ್ಪಿ ॥ ೪೨ ॥

ಹರಸಿ ತಮ್ಮಯ ಚರಣ ಕಮಲದಿ
ಇರಿಸಿ ಮುಕ್ತಿಯನಿತ್ತು ಲಿಂಗದಿ
ಬೆರೆಸಿ ನಿರವಯವಾದರೆಲೆ ಶಿವಲಿಂಗ ಸೂಸಂಗ
ಅರಿದುಕೊ ಗುರುಭಕ್ತಿಯಿಂತಿದ
ನೊರೆವೆ ನಿನ್ನೊಂದಿಂಥ ಚರಿತೆಯ
ಹರುಷದಿಂದಾಲಿಸುತಲಷ್ಟಾವರಣ ದೊರೆಯೆನಿಸು ॥ ೪೩ ॥

ಚೋಳಮಂಡಲ ಧರಣಿಯಲಿ ಸುವಿ
ಶಾಲಮಂದ ಪುತ್ತೂರಿನಲಿ ಗುಣ
ಶೀಲವೇಳ್ಕುತ್ತರನು ಗುರುವರ ಭಕ್ತನಾಗಿರುತೆ
ಮೇಲು ವೀರ ಶಿವಾರ್ಯರಿಂದಲಿ
ತಾಳಿ ಶಿವದೀಕ್ಷೆಯನು ನಿರುತಂ
ಪಾಲಿಸುತ ಗುರುಲಿಂಗವೊಂದೆಂದು ಭಾವಿಸುತ ॥ ೪೪ ॥

ನಾರಿಸುತ ಧನಕನಕ ಸಂಪದ
ಸಾರವೆಲ್ಲವ ತೊರೆದು ಗುರುಪದ
ವಾರಿ ಜವನಗಲಿರನು ಒಂದರಘಳಿಗೆ ತಡೆಯದಲೆ
ಚಾರುಗುಣದನನಿಂತು ಸೇವೆಯು
ಕಾರಣಕೆ ಕಾರಣನುಮಾಗಿಹ
ವೀರಶೈವೋತ್ಕೃಷ್ಟ ಸಜ್ಜನ ಶಿಷ್ಟ ಭವನಷ್ಟ ॥ ೪೫ ॥

ಮನದೊಳೂಹಿಸಿ ನೋಡಿದರೆ ಯೆ
ಳ್ಳನಿತು ಸುಖವೆಂಬುವನು ಕಾಣೆನು
ಗಣಿಸಲಾರದ ದುಃಖದಿಂ ಕೂಡಿಹುದು ಸಂಸಾರ
ಮನುಜರಿಂತಿದನರಿಯರಲ್ಲಾ
ಘನದಲುದ್ಭವವಾದ ಮಾಯನು
ಘನತೆಯಿಂತಿದು ಜನರ ಮುಳುಗಿಸುತಿಹುದು ನರಕದಲಿ ॥ ೪೬ ॥

ಒಡವೆಯಿಲ್ಲದ ಚಿಂತೆ ಸುತರನು
ಪಡೆಯದಿರ್ದರು ಚಿಂತೆ ಬಲುತವ
ಮಡದಿ ಜಾರಿಣಿಯಾಗೆ ಚಿಂತೆಯದಪ್ಪರೊಳಗೋರ್ವ
ಮಡಿದುಪೋದರು ಚಿಂತೆ ಬಳಿಕೀ
ವಡಲಿಗಾಮಯ ಬರಲು ಚಿಂತೆಯು
ಸುಡು ಸುಡೀ ಸಂಸಾರದೊಳು ಸುಖವೆಲ್ಲಿ ತೋರುವದು ॥ ೪೭ ॥

ಬರದೆ ಮಾಣವು ಹಾನಿವೃದ್ಧಿಗ
ಳಿರದೆ ಬರದೆಮ್ಮೊಡನೆ ವಿತ್ತವು
ದೊರೆಯಲಾರದು ಮುಂದಕೀ ನರಜನ್ಮವೆಂದರಿತು
ತೊರೆದು ಸಕಲಾಶೆಯನು ನಿಶ್ಚಲ
ದರುವಿನಲಿ ಗುರುಪಾದ ಪದ್ಮಕೆ
ಧೊರೆಯ ಪೊಕ್ಕಿರುತಿರ್ದವೇಳ್ಕುತ್ತರನು ನಿಜಮನನು ॥ ೪೮ ॥

ಧನಿಕನಾದರೆ ಸೌಖ್ಯವುಂಟೆಂ
ದೆಣಿಸುವರು ಚಿತ್ತದಲಿ ವಮ್ಮೆಯು
ಧನಮದದಿ ಸುಖವಾಗಿ ತೋರುತ್ತಿಹುದು ಸಂಸಾರ
ಧನಿಕರಿಗೆ ಕೇಳ್ ದುಃಖ ಬಂದರೆ
ತನುವಿನಾಸೆಯುವರಿಗು ಮರಿಯದ
ಘನ ಮಹಾ ಸಂಕಟವೆ ಬರುವದು ತಿಳಿದು ನೋಡಿದರೆ ॥ ೪೯ ॥

ನೀರಿರಲು ಕಪ್ಪೆಗಳು ಕೆರೆಯನು
ಸೇರುವವು ಬತ್ತಿದರೆ ಮೆಲ್ಲನೆ
ಜಾರುತಿಹವದರಂತೆ ತನ್ನೊಳಪಾರ ಧನವಿರಲು
ಸೇರುವರು ಬಂಧುಗಳು ತದ್ಧನ
ತೀರಿದರೆ ದಾರಿಯಲಿ ಕಂಡರು
ಓರೆಮುಖದಿಂದೋಡುತಿರುವರು ಬಂಧುವಾಪ್ತರರು ॥ ೫೦ ॥

ಧರಣಿಯೊಳುಮೀ ದೇಹ ಸಾವಿರ
ವರುಷ ನಿಲ್ಲುವದೆ ಸಂಪದವು ಸು
ಸ್ಥಿರವೆ ಮೃತ್ಯುವ ತಡೆವರೇ ಸತಿ ಸುತರು ಬಾಂಧವರು
ಬರಿದೆ ಕಾಲನ ದೂತರಿಗೆ ಬಾ
ಯ್ದೆರೆಯದಲೆ ಗುರುವರನ ನಾಮ
ಸ್ಮರಿಸುತಿರುವದು ಲೇಸು ಎನಗೀಬಾಯಿ ಬಲುಸೋಯಿ ॥ ೫೧ ॥

ಮೂರು ದಿನಗಳ ಬಾಳಿಕಿದು ಕ
ಣ್ಣಾರೆ ಕಾಣುತಲಿರ್ದುಮೀ ಸಂ
ಸಾರ ವಿಷ ತಲೆಗೇರಿ ಮರೆತದನೆನಗೆ ಸರಿಸಮರು
ಆರಿಹರುಮೆಂಥದಿಕ ಹಮ್ಮಿನ
ಭಾರವನು ಪೊತ್ತಿರದೆ ಗುರುವಿನ
ಪಾರ ಮಹಿಮೆಯು ಭಾರಪೊರುವದೆ ಲೇಸು ಜಗದೊಳಗೆ ॥ ೫೨ ॥

ಕಪ್ಪೆ ಸರ್ಪನ ಪೆಡೆಯು ನೆರಳಲಿ
ಇಪ್ಪ ಪರಿಯಂತೆನಗೆ ಸಂಸಾ
ರ್ವಪ್ಪಲಾರೆನುಮಕಟಮಿದ ನಾನೆಂತು ಸೈರಿಸಲಿ
ತಿಪ್ಪಿ ಕೆದರಲು ಕಪ್ಪುರೊಬ್ಬಗೆಯೇ
ತುಪ್ಪ ಸವಿಗಂ ಶುನಕನಲಗಂ
ವಪ್ಪಿ ನೆಕ್ಕಲು ರಸನೆ ಪರಿವದು ಸತ್ಯ ಸುಖವಿಷ್ಯ ॥ ೫೩ ॥

ಸತೆಯು ಸಂಸಾರರ್ದಿಟವಿದಲ್ಲವು
ಕುಟಿಲ ಕುಹಕ ಕುಚೇಷ್ಟಮನವದು
ಘಟವುಮದರಿಚ್ಛೆಯಲಿ ಪರಿದಾಡುತಲಿ ಬಳಲುವದು
ದಿಟವ ನಂಬದೆ ಜನರ ಮರಣದ
ನಟನೆಗೊಳಗಾಗುತಲಿ ಸಂಸೃತಿ
ಚಟದಿ ಚರಿಸುವದೆಂದು ಧಿಟ ಗುರುಪಾದ ನಂಬಿರ್ದಾ ॥ ೫೪ ॥

ಒಡೆಯ ಗಂಡನ ಸೇವೆಯಲಿ ತಾ
ದುಡಿಯದಿರುತಿಹ ಸತಿಯು ಲಿಂಗವ
ಸಡಗರದಿ ಪೂಜಿಸದಲಿರು ಶಿವಭಕ್ತ ಗುರುಪದವ
ಬಿಡುತ ಮಲಗಲು ದ್ರೋಹ ಶಿಷ್ಯಗೆ
ಮಡಿದು ಪೋಗಲಿ ಮೂರುಜನ ಪಾ
ಲ್ಕೊಡದ ಗೋವಿಗೆ ಕುಡಿಯದಾ ಕರುಬಿಟ್ಟ ತೆರನಂತೆ ॥ ೫೫ ॥

ಭುಜಗ ಮುಖದಲಿ ಸಿಕ್ಕ ಭೇಕನು
ನಿಜದಿ ಹಾರುವ ನೊಣವನಾಸಿಸಿ
ನಿಜವ ಕಳೆದಂತಾಯ್ತುವೀ ಜಗಬಾಳು ಬಲುಕಾಳು
ಕುಜನ ಗೆಳೆತನ ಬಲು ದುಃಖವು
ಸುಜನರೊಯಿರವೆ ಲೇಸೆನಿಪ ನುಡಿ
ಭಜಿಸಿ ಗುರುವಿನ ಪಾದ ಸನ್ನಿಧಿತ್ಯಜಸದಿರುತಿಹನು ॥ ೫೬ ॥

ಸೆರೆಮನೆಯೊಳಿಹ ನರನು ತನ್ನಯ
ಸೆರೆದಿನಗಳವಧಿಯನು ಬಯಸುವ
ತೆರದೊಳೀ ಸಂಸಾರದೊಳಗಿಹ ದುಃಖವನು ತಿಳಿದು
ಪರತರಾತ್ಮಾನಂದ ಸಿದ್ಧಿಗೆ
ಗುರುಪದಾಬ್ಜದ ಸೇವೆಗೈವು
ತ್ತಿರುವವೇಳ್ಕುತ್ತರನ ಚರಿತವ ನೋಡಿ ಗುರುವರನು ॥ ೫೭ ॥

ಎಲೆ ಸುತನೆ ಧನಕನಕ ಕುವರ ಸು
ಲಲನೆ ಗೃಹ ಮೊದಲಾದ ಸಂಪದ
ವಲಸಿ ಹಗಲಿರುಳಿನ್ನ ಬಳಿಯೊಳು ನೆಲಸಿರುವದುಚಿತೆ
ಸುಲಭ ನಿನ್ನಾಲಯಕೆ ಪೋಗುತ
ಒಲಿದು ಸಂಸಾರವನು ಗೈಯ್ಯುತ
ಮಲಘು ಮತಿಯಪವಾದ ಬಾರದ ತೆರದಿ ವರ್ತಿಸು ನೀಂ ॥ ೫೮ ॥

ಜ್ಞಾನವಿಲ್ಲಾ ಚಾರವಿಲ್ಲವು
ದಾನಧರ್ಮಕ್ಕವರು ದೂರಭಿ
ಮಾನಮಿಲ್ಲವು ಭೂತದಯ ಮೊದಲಿಲ್ಲ ಮನೆಯೊಳಗೆ
ದೀನ ದುಷ್ಟರು ಧೂರ್ತಪುಣ್ಯವಿ
ಹೀನರುಂಭವಿ ನೀಚ ಪಾತಕ
ಧ್ಯಾನರಿರು ಮನೆ ಮನೆಯದಲ್ಲವು ಖಡುಗದ ಮೊನೆಯು ॥ ೫೯ ॥

ರುದ್ರಘೋಷಣವಿಲ್ಲದಾ ಮನೆ
ರುದ್ರಚರ ತೀರ್ಥಿಲ್ಲದಾ ಮನೆ
ರುದ್ರ ಶರಣರ ತೃಪ್ತಿಯಿಲ್ಲದ ಮನೆಯು ಮನೆಯಲ್ಲ
ಕ್ಷುದ್ರ ದೈವದ ಘೋಷದಿಂ ಬಲು
ಛಿದ್ರ ವಾಕ್ಯದ ಬಲುಹಿನಿಂ ಗುಣ
ರೌದ್ರ ರೂಪದಿ ಮೆರೆವದದು ಮನೆಯಲ್ಲ ಹುಲಿಮನೆಯು ॥ ೬೦ ॥

ಸಲ್ಲಲಿತ ಸುತನೆನ್ನ ನಾಮವ
ನಲ್ಲೆ ನುಡಿಯಲು ಮರ್ಗುಣಂಗಳು
ಮೆಲ್ಲವೇಕಾಗುತ್ತ ಮೆರೆವವು ಸಿನ್ನಧೀನದಲಿ
ಸೊಲ್ಲನಾಲಿಸಿ ಪೋಗು ನೀನ್ನೈ
ವಲ್ಲೆನುವದದು ಬೇಡ ಬಿಡುಮನ
ದಲ್ಲಣವ ಘನತೆಯನು ಘಳಿಸಲು ಪೋಗುತ್ಪರ ಸಾಗು ॥ ೬೧ ॥

ಭಾಗ್ಯ ಬರೆ ಬಡತನವ ಬೈಪರೆ
ತಾಗಿ ಬಿದ್ದವನೆತ್ತಿ ಒಗೆವರೆ
ಮೇಗೆ ಮಡುವಂನೀಸಿ ಬಂದವನನ್ನು ಮುಳಿಗಿಪರೇ
ಭೋಗ ಭ್ರಮೆಗಳನಳಿಪ ಸದ್ಗುರು
ಯೋಗಿ ತವಚರಣವನು ಕಾಯ್ವಗೆ
ಪೋಗುಯೆಂದೆನಲಾಗದೆಂನಂ ನೀಗ್ವೆ ಮಮ ಪ್ರಾಣ ॥ ೬೨ ॥

ಬೇಡವೇಳ್ಕುತ್ತರನೆ ಕಿಡನುಡಿ
ಬೇಡ ನಿನ್ನಾಲಯಕೆಯೋರ್ವನೆ
ಬೇಡ ನಮ್ಮಡಿಯುಗಳವಗಲಿರಬೇಡ ಮಮ ಪುತ್ರಾ
ಜೋಡು ಜಗದಲ್ಲಿ ನಿನಗೆ ಎನ್ನಯ
ಜೋಡು ಪವರಕ್ಷೆಗಳು ನಂಬಿರು
ನಾಡ ಜನ ರೀತಿಯಲಿ ಗೃಹ ಕೃತ್ಯವನು ನಡಿಸೆಂದು ॥ ೬೩ ॥

ಹರಸಿ ಬೀಳ್ಕೊಡಲಾಗ ಗುರುವರ
ಭರದಿ ಪೇಳ್ಕುತ್ತರನು ತನ್ನಯ
ಸಿರದೊಳಾನುತ ದ್ವಂದ ಪಾದುಕೆಗಳನು ಸಿಲುಯಕ್ಕಿ
ಬರುತ ಪೂಜಿಸು ನಿತ್ಯ ನಡೆಸುತೆ
ಪೊರಗೆ ಕಾರ್ಯಕೆ ಪೋಗ್ವದಾವರೆ
ಶಿರದಿ ಪದರಕ್ಷೆಗಳ ಧರಿಸುತ ಚರಿಸುತಿರುತಿರ್ದ ॥ ೬೪ ॥

ಕುರುಡ ಕಣ್ಬಡದಂತೆ ನವೆಸುವ
ತಿರುಕ ಕಡವರ ಕಂಡ ತೆರಸಂ
ಭರದಿ ರೋಗದಿ ಕೊರಗುವನಿಗಂಮೃತವು ಸಿಕ್ಕಂತೆ
ಗುರುಪದದ್ವಯರಕ್ಷೆಗಳನಂ
ಶಿರದೊಳಿಲ್ಲದೆ ಚರಿಸೆಂದಿಗು
ಮರರೆ ಗುರುಪದ ಶೀಲ ಸತ್ಯವಿಲೋಲ ಹತಕಾಲ ॥ ೬೫ ॥

ಒಪ್ಪಿ ಕುರುಡನ ಕೈಯ್ಯ ಕೋಲಂ
ತಪ್ಪೆ ಹೆಳವನು ಕೊಡ್ವ ಬಂಡಿಯು
ತಪ್ಪಲಿದ್ದಲ್ಲಿರುವದೊಂದಡಿಯಿಡಲು ಬರದಂತೆ
ಸ್ವಪ್ರಮೋದದ ರಕ್ಷೆಗಳನಂ
ಸುಪ್ರಕಾಶದ ಶಿರದಿ ಧರಿಸುದೆ
ಅಪ್ರಯೋಜನ ಕಾಯಕೆನುತಂದ್ಹೊತ್ತು ತಿರುಗುವನು ॥ ೬೬ ॥

ಗುರುಪದಕೆ ಬಾಗಿರ್ದ ಶಿರವನು
ಪುರಹರನು ತಾನಾದರಾಗಲಿ
ಮರದುವಮ್ಮೆಯು ನಮಿಸಲಾರೆಂದೆಂಬ ಬಿರುದವನು
ಧರಿಸಿ ತನ್ನಯ ಪೊಲದ ಕಾರ್ಯವ
ಸಿರುತ ಮಾಡುತ ಗೃಹಕೆ ಬರುತಿರ
ಲರಿದು ಸಿಜರೂಪವನು ತಾಳುತ ಹರನು ಬಂದವನ ॥ ೬೭ ॥

ಮುಂದೆಸಿಲ್ಲಲು ಗಿರಿಜೆಯಾಣ್ಮನ
ಕಂದೆರದು ನೋಡುತಲಿ ಮನಸಿನ
ದಂದುಗಕ್ಕೊಳಗಾಗದಲೆ ಮುಂದಕ್ಕೆ ಸಾಗಿದನು
ಕಂದುಕಂಧರ ಗಾಬರಿಸಿ ಮು
ತ್ತಂದುವೋಡುತಲಡ್ಡ ಬರುತಲೆ
ಮುಂದೆನಿಂದನು ಮತ್ತೆ ನಡೆದನುಮಾಗ ಶಿವತರುಬಿ ॥ ೬೮ ॥

ಸುರಪ ಸುರಜನಾಭನಜ ಮುನಿ
ವರರು ದಿಕ್ಪಾಲಕರು ಮಮರರು
ಮರದು ಸಪ್ನದೊಳೊಮ್ಮೆ ಕಾಣದ ರೂಪವಂ ಕಂಡು
ಎರಗದಲೆ ನೀನೇಕೆ ಸುಮ್ಮನೆ
ಚರಿಸಿ ಪೋಗುವಿ ಪೋಪ ಬಗೆವಿ
ಸ್ತರಿಸೆನಲು ವಿಸ್ತರಿಸಿದನು ಪೇಳ್ಕುತ್ತರನುಮಾಗ ॥ ೬೯ ॥

ವನಜ ಶರಹರ ನಿಮಗೆ ಮನವದು
ಮಣಿದು ಎರಗಿಹುದಲ್ಲದೇ ಮ
ತ್ತನುವು ಎರಗುವದೇಕೆಯೆನ್ನಯ ಮಸ್ತಕದಿ ಇರುವ
ಮಿನುಗುತಿಹ ಪಾದುಕೆಯು ನಿಮ್ಮವ
ದೆನುವದಿದು ಪುಸಿದಿಟವೊ ಪೇಳೆನೆ
ಕನಕ ಪರ್ವತವಾಸಿ ಮೆಚ್ಚುತ ತನ್ನ ಪುರಕೊಯ್ದಂ ॥ ೭೦ ॥

ಸತ್ಯ ಗುರುವರ ಮಹಿಮೆಯಿಂತಿದು
ವಿಸ್ತರಿಸಿ ಪೇಳಿದನು ಶಿವಲಿಂ
ಗೋತ್ತಮನೆ ಗುರುಪದವ ನಂಬುತ ಧನ್ಯನೆಂದೆನಿಸು
ಮತ್ತೆ ಲಿಂಗದ ಮಹಿಮೆ ಪೇಳ್ವದು
ಕರ್ತೃ ಗುರುವರನೆಂದು ಪದದಲಿ
ಭಕ್ತಿಯಿಂ ಶಿರಬಾಗಿ ನಮಿಸಲು ಪೇಳತೊಡಗಿದನು ॥ ೭೧ ॥

ಲಿಂಗ ಮಹಿಮೆಯನೊರೆವೆ ಸುತ ಶಿವ
ಲಿಂಗ ನಿನ್ನಯ ಮನ ಕರಣಗಳು
ಲಿಂಗವಾಗುತ ಕೇಳುಮದರಿಂ ಲಿಂಗ ಮಹಿಮೆಯದು
ಸಂಗಿಸುತ ನಿನಗದರ ಸುಖದಿಂ
ದಂಗ ಲಿಂಗದಿ ಏಕವಾಗುತ
ಲಿಂಗಧಾರಿಯ ಪದವ ಸೇರುವಿ ತುಂಗ ಭಕ್ತಾಂಗಾ ॥ ೭೨ ॥

ಲಿಂಗ ಬಿಟ್ಟೆನಿಲ್ಲ ಸರ್ವವು
ಲಿಂಗಮಯವಾಗಿರುವದಲ್ಲದೆ
ಲಿಂಗ ಬಾಹ್ಯಂ ನಾಸ್ತಿಮೆಂದಿಹುದಾಗಮದ ವಚನ
ಲಿಂಗ ನಿಷ್ಕಲ ವಸ್ತು ನಿರುಪಮ
ಲಿಂಗ ಚಿದ್ಘನ ಶಾಂತಿ ನಿರವಯ
ಲಿಂಗ ಚೇತನರೂಪ ಭವಭಯಲೋಪನಿರ್ಲೇಪ ॥ ೭೩ ॥

ಕಂದ ನಿನಗಾಂ ಪೇಳುವೆನು ಮಿದ
ಕೊಂದು ಪೂರ್ವದ ಕಥೆಯಸಾಲಿಸು
ನಂದಿರೂಪನು ಬಸವಕಲ್ಯಾಣದ್ದಿಪ್ಪ ಸಮಯುವಲಿ
ಇಂದುಮುಖಿ ಇಂದೀವರಾಕ್ಷಿಯು
ಮಂದಯಾನೆ ಸುಮಂದ ಹಸಿತೆಯು
ಕುಂದ ಕುಟ್ಮಳರದನೆ ವಾರಾಂಗನೆಯು ಕಮಳಾಯಿ ॥ ೭೪ ॥

ತುಂಗ ಷಡುಲಿಂಗಾಂಗ ಭಾವೆಯು
ಪುಂಗ ಶಿವಚರ ಕಂಗ ನೀವೆಯು
ಮಂಗಳಾಯನಿ ಮಾರನಂಗನೆಯಿಂದ ಮಿಗಿಲಿಹಳು
ಲಿಂಗ ನಿಷ್ಠಾಪರಳು ಭಕುತಿಯ
ಲಿಂಗದಲ ಪರಿಮೆರೆವಳಾ ವಾ
ರಾಂಗನೆಯುಮಲ್ಲವಳು ಸತ್ಯವು ಸರ್ವಮಂಗಲೆಯು ॥ ೭೫ ॥

ಇರುತಲೊಂದಿನ ಹರನ ಸಭೆಯಲಿ
ಸುರಮುನಿಪ ಬರಲದನು ನೋಡುತ
ಹರನು ಕೇಳ್ದನು ಧರೆಯ ಕಲ್ಯಾಣ್ಕರದ ಸಂಗತಿಯ
ಕರಮುಗಿದು ಮುನಿವರನು ಜವಜಗ
ದಿರವನರುಪಲು ಚರಿಸಿ ಬಂದೆನು
ಪರಮ ಕಲ್ಯಾಣ್ಪುರದೊಳೊಂದುರುತರದ ಚರಿತೆಯನು ॥ ೭೬ ॥

ಕಂಡು ನಾ ಬಲು ಧನ್ಯನಾಗುತ
ರುಂಡಧರ ನಿನಗರುಹಬಂದೆ ಭೂ
ಮಂಡಲದಿ ಮತಿವಂತೆ ವಾರಾಂಗನೆಯು ಕಮಳಾಯಿ
ಪುಂಡ ವಿಟಜಂಗಮರ ರತಿಸುಖ
ಗೊಂಡು ಸುಖಿಪಳು ಲಿಂಗಮುಖದಿಂ
ಭಂಡ ಜಗಜನಕಂಡರವರನು ಮುಟ್ಟದಿರುತಿಹಳು ॥ ೭೭ ॥

ಕರಿಗೆ ಮದವಾಮದ ಕಳಿಗಳಾ
ಚರಣದ್ವಿತ್ರಯಗಳಿಗೆ ಸರಸಿಜ
ಸರಸಿ ಜಕ್ಕುದ ಕುದಕಕೆಯು ಸರಸರಕೆ ಬನಬನಕೆ
ಪುರವು ಪುರಕಾ ಹರನ ಭಕ್ತರು
ಪರಮ ಭಕ್ತಾದಿಗಳಿಗಪ್ಪಾ
ವರಣ ಘನ ಘನದಿರವಿನಲಿ ಚರಲಿಂಗ ಘನವೆನುತ ॥ ೭೮ ॥

ಆ ಪರಮ ಕಮಳಾಯಿ ನಿಮ್ಮಯ
ರೂಪ ಜಂಗಮವರ್ಯರೇ ತನ
ಗೋಪರೆನುತಾಮಾಪಸುತ ಸಮರದಲಿ ಲಿಂಗವನು
ಗೌಪ್ಯ ಮಂಚದ ಕಾಲಿಗಿರಿಸುತ
ಕೈ ಪೆರಗು ತೆಗೆಯುದಲೆಯೊಂದನು
ಸ್ಥಾಪಿಸುತಲೀಪರಿಯುಕೊಪರಭೋಗಿಸುವಳವಳು ॥ ೭೯ ॥

ಎನುತ ಪೇಳಲು ಮನಸಿಜಾರಿಯು
ನೆನವುತೊಂದ್ಯುಕುತಿಯನು ಮನದಲಿ
ಮನಸಿಜನ ಪಳಿವಂದ ರೂಪವನಾಂತಸಾಕ್ಷಣಕೆ
ಘನಗಜಾಜಿನವರದುಕೂಲದಿ
ಫಣಿ ಕಡಗ ಮಣಿ ಕುಂಡಲಂಗಳು
ಮಿನುಗುತಿರೆ ಮೈಭಸಿತವೆ ಶ್ರೀಗಂಧಮಯವಾಗೆ ॥ ೮೦ ॥

ಶಶಿಯ ಕಲೆ ಕಿವಿದೆಸೆಯು ಕೇದಿಗೆ
ಕುಸುಮ ಮಾಲೆಗಳಾಗೆ ಶಿರ ಸರ
ಹೊಸೆದ ಜಡೆ ಚಂದ್ಯಾಗೆ ಫಣೆಗಣ್ಕೆಂಪುತಿಲಕಾಗೆ
ವಿಷವೆ ಕಂಠದ ಕಸ್ತುರಿಯು ಗೆರೆ
ಮಿಸುಪ ಗಂಗೆಯು ಗಂಧತೈಲಂ
ವೃಷಭ ಸಾರವರೊಡನೆ ವಸುಮತಿಗಿಳಿದ ವಿಟಶಿವನು ॥ ೮೧ ॥

ಬರುತ ಪುರವನು ನೋಡುತ್ತೈತರೆ
ಮೆರೆವ ಬಸವನ ಮಂದಿರವನಾ
ತುರದಿ ಒಳಪೊಕ್ಕಾಗ ವಿಟವೃಂದವನುಗೂಡುತಲಿ
ಪರಮ ಷಡ್ರಸದನ್ನ ಸವಿಯುತ
ಲಿರವೆ ಸುಮತಾಂಬೂಲ ಗಂಧವ
ಧರಿಸಿ ಬಸವಗೆ ತನ್ನ ನಿಜದೋರದಲೆ ಪೊರವಂಟಾ ॥ ೮೨ ॥

ನಂದಿ ಸಾರದರನ ಕೂಡುತ
ಮುಂದು ತಾನಾಗುತಲಿ ಮೋಹದಿ
ಚೆಂದ ವೇಶ್ಯಾವಾಟಿ ಯಾವುದೊಯೆಂದು ಮರಸುತಲಿ
ಇಂದುಶೇಖರನಾಗ ಬರುತಿರ
ಲಂದು ದಿನಮಣಿ ಕುಂಡು ತನ್ನಯ
ಕಂದನನು ಮುನಿದಿಹನುಮಿವನೆದುರಾನುಮೆಂತಿರಲಿ ॥ ೮೩ ॥

ಎನುತ ಮನನೋಯುತಲಿ ಪೋದನೋ
ಎನುವ ತೆರದಲಿ ದಿನಪ ಪಶ್ಚಿಮ
ವನನಿಧಿಯು ನಂದಿಳಿದನೆಂಬೋಸ್ತಮಯವಾಯ್ತು
ಅನಿತರೊಳು ಸಂಧ್ಯಾರುಣವು ಬಲು
ಘನತೆವೆತ್ತುತ ಪರ್ಬುತಿರಲಾ
ದಿನಪನೊಯಿರಿಯು ಕಂಡುಮಿದುಯಂಮೊಯಿರಿ ಬರಿದಿಟವು ॥ ೮೪ ॥

ಸಾಕುಮಿದನಂ ನೂಕಿರೆನುತಲಿ
ಕಾಕುತಮವೇ ಕೊಬ್ಬಳಾಯ್ತೆನೆ
ಲೋಕವೆಲ್ಲವ ತುಂಬಿ ತುಳುಕಾಡುತಲಿ ತಮಮುಸುಕಿ
ಶ್ರೀ ಕನಕಗಿರಿವಾಸ ಶಿವನಾ
ನೇಕ ಮಹಿಮಾಪ್ರಭೆಯು ಜಗದಲಿ
ಯಾಕರಿಸಲೆಂದಿಂದು ಬೆಳಗಲು ತಮವು ಮುರಿದೋಪೆ ॥ ೮೫ ॥

ಹರನು ತಾನಾದರದಿ ನಾರದ
ಪರಮ ನಂದಿಯಕರ್ೂಡಿ ಬರುತಿರೆ
ಮೆರೆವ ಕಮಳಾಯಿನಿಯ ಮಂದಿರದಂದವವನು ಕಂಡು
ಬೆರಗುವಡುತಂ ನಿಲಲು ದಾಸಿಯು
ರರಿದು ವಾರ್ತೆಯ ಬೀರೆ ಒಡತಿಗೆ
ಭರದಿ ಕೇಳುತ ಪೊರಗೆ ಬರುತಂ ಕಂಡು ಹರುಷದಲಿ ॥ ೮೬ ॥

ಬಂದ ಜಂಗಮದೇವನಂ ಶಿವ
ನೆಂದು ಪಿಗ್ಗುತಲಿದಿರು ಬರುತಾ
ನಂದದಿಂ ಕೈಮುಗಿದು ಕರತಂದಾಗ ಮಂಚದಲಿ
ಹೊಂದಿ ಕೂಡಿಸುತವರ ವರಚರ
ಣಂದು ತೊಳೆಯುತ ಸೆರಗಿಲೊರಸುತ
ಗಂಧ ಸುಮಫಲ ತಾಂಬೂಲಾದಿಗಳೆಲ್ಲ ಮುಂದಿರಿಸಿ ॥ ೮೭ ॥

ದೀರ್ಘದಂಡವ ಪಾಕಿ ಸೂಭ
ಕ್ತಾಗ್ರುಗಣ್ಯಾನಂದಿ ಕಡು ಬೆರ
ಗಾಗ್ರಹಿಸಿ ನೋಡುತ್ತ ದನ್ಯಳು ಮಾನ್ಯಳಿವಳೆಂದು
ವ್ಯಾಘ್ರುಚರ್ಮಾಸನನು ನಗುತ ಸ
ಮಗ್ರುವವಳಿರವರಿತು ಮೇಳಿನೆ
ಶೀಘ್ರುದೇಳುತ ಬಂದು ನಮಿಸಲು ಮುನಿಪ ಬೆರಗಾದ ॥ ೮೮ ॥

ಕುರುಳೊ ಯತಿಗಳ ಕೊರಳದುರುಲೋ
ವರ ಮುಖವೋ ತದ್ವೃತಿಯನಳಿಸುವ
ಮೆರೆವ ಶಶಿಪುರ್ಬುಗಳೊ ತದ್ವಕ್ಷಾಂತ ಕೋದಂಡ
ತರುಣಿಮಕ್ಷಿಯೆ ತದ್ವಿರತಿ ತೃಣ
ದಿರವ ಮೇಯುವ ಹರಿಣ ಸುಲಿಪ
ಲ್ಪರಮ ಮುನಿತ ಪದದ್ರಿಧೂಳನ ವಜ್ರಮೆನಲಾಗಿ ॥ ೮೯ ॥

ಪಂಚಮುಖನನು ಮಂಚದಿರಿಸಿರೆ
ಮುಂಚೆ ಮುಂಚೆದೆಂದು ಬರುತಲಿ
ಚಂಚಲಾಕ್ಷಿಯರೆಲ್ಲ ಸುಮಗೊಂಚಲದಿ ಪೂಜಿಸುತೆ
ಪಂಚ ಷಡ್ಜ ಸುಸ್ವರದಿ ಪಾಡಲು
ಮಂಚ ಗಮಸುತ ಕುಣಿಯ ಚರವಿಟ
ಯೇಂ ಚೆಲ್ವನಿವನೆಂದು ಗಾಯನ ಕಲೆಯು ಬೀರಿದರು ॥ ೯೦ ॥

ಅಚ್ಚಿ ಮೂರನ ಮುಂದೆ ಜವ್ವನೆ
ಮುಚ್ಚಿ ಕಣ್ಕೈಕಾಲ್ಗಳಂತಾ
ಬಿಚ್ಚಿ ನರ್ತನವಾಡಲದು ನೆರೆನೆಚ್ಚಿ ಶಿವತಾನು
ಮಚ್ಚರಿಯೆವಿವಿಳಿಂಗೆ ರಂಭೆಯು
ತುಚ್ಛ ತುಚ್ಛವು ಸರಿಯ ಬರಳಿಂ
ದ್ದುಚ್ಚ ಶಿವನ ಗುರುತ ತನ್ನಿಚ್ಛೆಯನು ಮುಚ್ಚಿದನು ॥ ೯೧ ॥

ತಿಳಿಯು ತುಳಿದಾರನ್ನೆ ಪಣ್ಯರು
ಗಿಳಿಯು ಕೋಗಿಲೆ ಹರಿಣ ಖಗಮಿಗ
ಗಳಿಗೆ ಫಳಪಾಲ್ಕಾಳುಗಳ ಮೆಲಗೊಡುವ ಹೊತ್ತಾಯ್ತು
ಘಳಿಲನೇಳಿರಿಯೆಂದು ನೆವನಂ
ದಳೆದು ಜಾರಲು ನಂದಿ ನಾರದ
ರಿಳೆಯು ಶಿವಬಸವನನು ಕಾಣುತಲೀಗ ಬಹೆವೆಂದು ॥ ೯೨ ॥

ಪೊರಗೆ ಪೋಗಲುಮವರ ಚರಿತೆಯ
ನರಿದು ಹರ ತಾಂ ಶಿರವದೂಗುತ
ಲಿರದೆ ಕಮಳಾಯಿನಿಯೊಳುಂ ಸುರತೆಸಗಲುವಾಗ
ಸರಸ ಪರಿಮಳದಷ್ಟ ಗಂಧವ
ನಿರದೆ ಪೂಸುತ ಕರ್ಮವೀಳ್ಯವ
ನಿರಿಸುತೊದನದೊಳೊಕ್ಕುದಂತಾಕೊಂಡು ಪರಿಣಮಿಸೆ ॥ ೯೩ ॥

ಭರದಿ ತೆಕ್ಕೆಯೊಳ್ಪಿರೆದು ಮೋಹದಿ
ಪರಮ ಕಚಕುಚ ಪಿಡಿದು ಮುದ್ದಿಸೆ
ಕೊರಳ ಲಿಂಗದ ಸಜ್ಜಿ ಮಂಚದ ಕಾಲಿಗಿರಿಸುತಲಿ
ವರಕರವ ವಂದಿಟ್ಟು ಮೇಲನು
ಸುರತ ಸುಗ್ಗಿಯೊಳ್ಮರೆತು ಮೈ ಬಲು
ಪರಿಯ ತಾವ್ಸಮರತಿಯ ಸಮರಸವಾಗಿ ಭೋಗಿಸುತೆ ॥ ೯೪ ॥

ಮನವರಿದು ಒಳಸರಿದು ಕಲೆಗಳ
ಘನವರಿದು ತಣಿವರಿದು ಜಾತಿಯ
ದನುವರಿದು ಬೋಸರಿಸಿ ಪಲ್ಲಟಿಸುತ್ತ ಮೂದಲಿಸಿ
ಮುನಿದು ಷೋಡ ಸಕಲಾಸ್ಥಲ ಚುಂ
ಬನದ ನಾನಾ ಕೌಶಲಗಳಿಂ
ದನುಭವಿಸುತಿರಲೆಲ್ಲರಂತಲ್ಮಿವರು ಜಗವಂದ್ಯರ್ ॥ ೯೫ ॥

ನಾಪೆ ಸುಮಗಂಧ್ವಾಸನೆಯ ಮೂಸಿ
ನೋಡಲಾಚಾರ್ ಲಿಂಗವದು ಮು
ದ್ದಾಡುತ ಧರಾಮೃತದ ವರತೀರ್ಥಮದು ಗುರುಲಿಂಗ
ನೋಡೆ ರೂಪಮುತೋಷದೊಳು ತೊನೆ
ದಾಡುವದು ಶಿವಲಿಂಗಮದು ಮೇಣ್
ಗಾಡತರದಾಲಿಂಗನಂ ಮಾಡುವದೆ ಚರಲಿಂಗ ॥ ೯೬ ॥

ನುಡಿಯ ಪರಿಣಾಮವನೆ ಪೂರ್ತಿ ಪೂ
ದೊಡನೆಯುದುವೆ ಪ್ರಸಾದಲಿಂಗವು
ಕಡೆಗೆ ಸರ್ವಾಂತೃಪ್ತ ನಿರ್ಮಾಲ್ಯಮದು ಮಹಾಲಿಂಗ
ಬಿಡದೆ ಯಾರನು ಹೊಂದಿ ರತಿಸುವ
ಜಡಜಮುಖಿಯುವಳೇನು ಸೂಳೆಯೆ
ನುಡಿಯಬಾರದು ಮೃಡನ ಸೇವಿಪ ಭಾವೆ ಲಿಂಗಾಂಗಿ ॥ ೯೭ ॥

ಎಂದರಿದು ರತಿಗೂಡಿ ಷಡ್ಲಿಂ
ಗಂದು ತುಷ್ಟಿಯಮಾಡಿ ಮಿಗೆ ಮುದ
ದಿಂದ ನಲಿವಾಡಿದಳು ಹರವಿಟನಿಂದೆ ಕಮಳಾಯಿ
ಹೊಂದಿದಾನಂದದಲಿ ಮೈಮರ
ದಂದು ಲಿಂಗದೊಳಿಟ್ಟ ಕರಜವ
ದಿಂದ ಕಡಿಯಕೆ ತೆಗೆಯೆ ಲಿಂಗದಿ ಹರಣಮೇಕಾಯ್ತು ॥ ೯೮ ॥

ಅರಿದು ಶಿವತಾಂ ಬಂದು ಪೊರೆಯಕೆ
ಸುರ ಮುನಿಪ ನಂದಿಯನು ಸಂಗಡ
ಕರೆದುಕೊಳುತಲಿ ಭರದಿ ತ್ರಿಪುರಾಂತಕನ ಗುಡಿಸೇರೆ
ಧರೆಗೆ ಈ ವಾರ್ತೆಯನು ಬೇಗನೆ
ಅರುಹಬೇಕೆಂದಾಯುಧಂ ಪಥ
ತ್ವರದಿ ಚೀರಿತು ಕುಕ್ಕು ಕೂಕೂಯೆಂದು ಗಂಭೀರದಿ ॥ ೯೯ ॥

ವಿಮಲ ಮಾನಸ ಹೃದಯ ಕಮಳೆಗೆ
ಕಮಲಧರನೊಯ್ದುದನು ಕೇಳುತ
ಕಮಲಸಖ ನಮಮೆನುತ ಭ್ರಮಿಸುತಲೇಳುಮಶ್ವಗಳ
ಕ್ರಮವ ನೋಡದಲ್ಹೊಡಿ ಸಾರಥಿ
ಕ್ರಮರಹಿತ ತನುಕೂಡಿ ಬಂದನು
ತಮವ ಕೆಡಿಸುವ ಕಮಲ ಸಮೂಹದಿ ಕೂಡಿ ಮೂಡಣದಿ ॥ ೧೦೦ ॥

ಪಾರೆ ಗಗನಕೆ ಪಕ್ಷಿನಿಕರವು
ಮಾರಹರನಾಲಯದಿ ಗಂಭೀರ
ಭೇರಿ ಜಾಗಟೆ ತಾಳ ಮದ್ದಳೆ ಮೀರಿ ಬಾರಿಸಲು
ಸಾರಸಾಯಿಮಚಾರಿಯರು ನಲು
ಮೇರಿ ಜನನಿಯ ಲಿಂಗಪೂಜಾ
ಗಾರ ಸಾರಣೆಗೈದು ಧೂಪಾರತಿಯ ಮೊದಲಾಗಿ ॥ ೧೦೧ ॥

ಲಿಂಗಪೂಜೆಯ ಸರಕುಗಳನೆ
ಲ್ಲಂಗೈಸಿ ನೆರವೇರಿಸುತ ಶಯ
ನಂಗೈವ ಮಂದಿರದಿ ಮರಣವನಾಂತ ಕಮಳೆಯನು
ಕಂಗಳಿಂದೀಕ್ಷಿಸುತ ಶಿವಶಿವ
ತುಂಗಕುಚೆ ಮಡಿದಿಹಳುಮಕಟಾ
ಜಂಗಮಾರ್ಯನುಮಿಲ್ಲ ಕೌತುಕಮೇನಿದೆಂಮಕ್ಕಾ ॥ ೧೦೨ ॥

ಅಕ್ಕಟಕ್ಕಟ ನಮಗೆ ಭುವಿಯೊಳು
ದಿಕ್ಕುದೆಸೆ ಯಾರವ್ವ ಕಮಳಾ
ಯಕ್ಕ ನಿನ್ನ ಸುಮುಕ್ಕಿದವರಾರೆಮಗೆಯುಸುರಕ್ಕ
ತಕ್ಕ ನುಡಿಗಳನಾಡು ಎಮ್ಮೊಡ
ಲಕ್ಕೆ ಬೆಂಕಿಯು ಪತ್ತಿಯುರಿವದು
ಲೆಕ್ಕವಲ್ಲುಮ್ಮಕ್ಕಣ್ಣ ನಿಮಗಿದು ದುಃಖಪಡಿಸುವದು ॥ ೧೦೩ ॥

ದಾಸತನದಲಿ ಸೇವೆಮಾಡಲು
ಬೇಸರವು ನಾವೇನುಗೊಂಡೆವೆ
ಸೋಸದಾ ಜಲ ಪತ್ರಿ ಸುಮಗಳನಿತ್ತರಿವರೆಂದು
ರೋಷಗೊಳ್ಳುತ ಮುನಿದಿಯೇಂ ಗುಣ
ಭೂಷೆಯಂಪೊಡನೇಕೆ ಮುನಿಸವು
ಹಾ ಶಿವನೆ ಮಹಾದೇವ ನಮ್ಮೊಳು ದೋಷವೇನಿಹುದು ॥ ೧೦೪ ॥

ನಿನ್ನ ರಾತ್ರಿಯೊಳ್ಚೆನ್ನ ಚರವಿಟ
ನನ್ನು ಕೂಡುತ ರತಿಯ ಸುಖವಂ
ಸನ್ನುತಾಮಳಲಿಂಗಕರ್ಪಿತವೆನ್ನುವದು ಮರೆತೇ
ನೆನ್ನುತಸುವಂಬಿಟ್ಟಿಯೋ ಭವಿ
ಕುನ್ನಿ ಸ್ವಪ್ನದಿ ರತಿಯ ಗೈದನೆ
ಬನ್ನವಾವುದು ಬೀರು ಸುಖಜನರನ್ನೆ ಗುಣಚನ್ನೆ ॥ ೧೦೫ ॥

ಮಾಡಲಾರದ ಸೂಳೆ ಜಂಗಮ
ಕೂಡಿ ಪೋದರೆ ಗಂಟೆ ಶಾಠೆಯ
ನಾಡೆ ಮಾರೆಸುವಂಥ ರೂಢಿಯು ಗಾದೆ ನುಡಿಯಾಯ್ತು
ಖೋಡಿ ವಿಟ ಜಂಗಮನ ಕೂಡಲೀ
ಹಾಡು ನಿನಗಾಯ್ತೆವ್ವ ಸುಡುಸುಡು
ಗಾಡ ಜಂಗಮ ನೋಡಿ ಪೋಗಿಹನದಕೆ ನಿಲ್ಲದಲೆ ॥ ೧೦೬ ॥

ಕಳವಗೈಯ್ಯುವ ಚೋರನಿಗೆ ಮನೆ
ಯೊಳಗಣವರೆಚ್ಚರಿಸಿಗುಳಿ ತೆಗೆ
ದೊಳಗೆ ಕೊಂಡರೆಯುಳಿವದೇ ಧನಮದರ ಪರಿಯಂತೆ
ಹಳಿಯ ಜಂಗಮನೆಳಿಯು ವಿಟನೆಂ
ದೇಸಿ ಕೂಡುತಲಳಿದು ಪೋದೆಯೊ
ತಿಳಿಯದಿದು ಸನ್ಯಾಸಿ ಮುಟ್ಟುತ ನಾಶ ನೀನಾದಿ ॥ ೧೦೭ ॥

ಆಡುವ ಮಡಕೆಯು ತಾನೆಯುಂಬೊಡೆ
ಬಿಡದೆ ಗೋ ಮೊಲೆ ತಾನೆ ಕುಡಿದಡೆ
ಒಡನೆ ಕೆರೆಜಲವೀಂಟುವಡೆ ತಾ ಬಯಲು ಮೇಲ್ಬೀಳೆ
ಬಡಿದು ಶಿಕ್ಷಿಪರುಂಟೆ ಜಂಗಮ
ಪೊಡವಿ ಶಿವನೆನುತಾಗಮಾದಿಯು
ನುಡಿವದೇನಿದು ಮಡಿದಳೀಕೆಯು ಸುಡಲಿ ಜಂಗಮರ ॥ ೧೦೮ ॥

ಶಿಲೆಗೆ ನೀರೆರೆದಂತೆ ಬೊಬ್ಬುಳಿ
ಪೊಲಕೆ ಬೇಲಿಯನಿಕ್ಕಿದಂತಾ
ಪೊಲಸು ದೇಹಕೆ ಗಂಧ ಪೂಸಿದರಿಲ್ಲ ಪರಿಮಳವ
ಸುಲಭ ಜಂಗಮ ಜನನ ಮರಣವ
ಗೆಲುವ ನೆನೆಸುಖವಿರದೆ ಭಕ್ತರ
ಕೊಲುವದಾಯಿತು ಬೇಟ ವಿಟಚರನಾಟ ಮಂಗಾಟಾ ॥ ೧೦೯ ॥

ಎನುತ ದಾಸಿಯರೆಲ್ಲರಳುತಿರ
ಲನಿತರೊಳಗೀವಾರ್ತೆ ಬಸವನ
ಮನೆಗೆ ಪೊತ್ತೊಯ್ದೊರೆದರಾಗಳೆ ಮಿಂಡಜಂಗಮರು
ನನಗೆ ಸಖಿಯಾಕಮಳೆಯುವಳು
ಎನಗೆ ಪ್ರೀಯಳು ಕಮಳೆಯವಳಿನ
ಗೆನಗೆಯು ಸುಪ್ರಾಯಳು ನಿಜಂ ನಿಜವೆಂದು ರೋಧಿಸಲು ॥ ೧೧೦ ॥

ಬಸವಗಾಣ ತಿಂಥಿಣಿಯ ಕೂಡುತ
ಲೊಸೆದುಮಲ್ಲಿಗೆ ಪೋಗೆ ಮುಂಚಣ
ಪಸನವಾಯಿತು ಕಿನಿಸು ಕೈವಶಮೆಂದು ನೃಪನೆಡೆಗೆ
ಘಸಣೆಯಿಂ ಬರುತಾಗ ದೂರಿದ
ಬಸವ ಕೊಲ್ಲಿದ ಕಮಳೆಯನು ಧನ
ವಿಸರ ದಾಸಿಗೆ ಬಿಜ್ಜಳೇಂದ್ರನೆ ಪಿಸುಣನವನೆಂದ ॥ ೧೧೧ ॥

ಕೇಳಿ ಭೂಪತಿ ಕನಲಿ ತಾಪಂ
ತಾಳಿ ಪಲ್ದಿನುತಾಗ ಪುರಜನ
ಮೇಳವೆರಸೈತಂದು ಬಸವನ ಕೇಳ್ದನವನೆಂದು
ಸೂಳೆ ಕಮಳೆಗೆ ಮುನಿದವರುದಾ
ರ್ಪೇಳು ನಿನ್ನಿನ ದಿನದಿ ಸುಖದಿಂ
ಬಾಳಿದವಳಿಂದ್ಹೀಗೆ ಮಡಿದಳು ಏನು ಕುಟಿಲಾಟ ॥ ೧೧೨ ॥

ಎನುತ ಜನಪನು ಕನಲಿ ಕಿಡಿಕಿಡಿ
ಯುನುಮುಗುಳಿ ಝಳುಪಿಸುತ ಖಡ್ಗವ
ಪನನಗೈದರ್ವತನುವಶು ನಿನಗಿಪ್ಪುವಾಯುಸಕೆ
ತಿನಿಸುವನಿಕಾಂ ಬಿಡೆನು ಬಿಟ್ಟರೆ
ಮನುಜಪತಿ ಬಿಜ್ಜಳನೆಯಲ್ಲವು
ಸನುಮತದಿಯುಸುರೀಗ ಸತ್ಯವ ಮಿಥ್ಯಬೇಡೆಂದಾ ॥ ೧೧೩ ॥

ಸತ್ಯವದು ಸತ್ಯಣ್ಣ ಬಲ್ಲನು
ಮಿಥ್ಯವದು ಮಂಚಣ್ಣನಲ್ಲಿರ
ಲ್ವೆರ್ಥ ನೀನುಡಿದೇಕೆ ಪಾಪವನ್ಹೊತ್ತುಕೊಂಬುವಿಯೊ
ಚಿತ್ತಶುದ್ಧದಿ ವಚಿಸು ಪಾಪವ
ನ್ಹತ್ತರಕೆ ಬರಗೊಡದವಲಿರು ವರ
ಕತ್ತೆಯೋದದಿ ಬೊಗಳಿದರೆ ಫಲವೇನು ನಿಷ್ಫಲವು ॥ ೧೧೪ ॥

ಎನುತಲಪ್ಪಣ್ಣನನು ಕರೆದಿದ
ರನುವನಾ ಸತ್ಯಣ್ಣನಿಂದರಿ
ದನುನಯದಿ ಬಹದೆಂದು ಕಳುಹಲು ತಿಳಿದು ಬಂದಾಗ
ಬಿನದಿಸಲು ಬಸವೇಶನಾಗಳೆ
ಸನುತ ಶಿವನನು ಕರೆತರಲು ಜವ
ವನಜಮುಖಿ ಕಣ್ತೆರೆದು ಶಿವ ಶಿವ ಎನುತ ಕುಳಿತಿರಲು ॥ ೧೧೫ ॥

ನೋಡಿ ಜನಪನು ನಾಚಿ ಮನದಲಿ
ನೀಡಿದನು ಕರ ಕಮಲ ಬಸವಗೆ
ರೂಢಿಗೀಶನು ನೀನೆ ಧನ್ಯಂ ಧನ್ಯನೆಂನ್ಹೊಗಳೆ
ಗಾಢನಸು ಬಂದಾ ಕಮಳೆ ಪ್ರಮ
ಥಾಢ್ಯ ಬಸವನ ಪದಕೆ ಸಂತಸ
ಗೂಡಿ ಸಾಷ್ಟಾಂಗೊಂದನೆಯ ಮಾಡುತಲಿ ನಲಿದಾಡೆ ॥ ೧೧೬ ॥

ಬಸವನವಳಂ ಹರಿಸಿ ಪೊಗಳ್ದನು
ಮಸುಬಿಡುವದೇಂ ಲಿಂಗ ಪೋಗಲು
ಮಸು ಬರುವದೇಂ ಲಿಂಗ ಬರಲೊಡನಿವಳ ಸಮಗಾಣೆ
ವಸುಮತಿಯೊಳೀ ಭಕುತಿ ಲಿಂಗದ
ಪೊಸತು ಭಾಪುರೆ ಭಾಪು ಕಮಳೆಯ
ಳಸಮಲಿಂಗದ ಪ್ರಾಣೆ ಸದ್ಗುಣ ಶ್ರೇಣಿ ಶಿವಶರಣೆ ॥ ೧೧೭ ॥

ನುತಿಸುವನಿತಕೆ ಶರಣ ಸಮೂಹದಿ
ಕುತಪಲೋಚನ ರೂಪದೋರುತ
ಮತಿಯುತೆಯನೊಡಗೊಂಡು ನಾರದ ನಂದಿ ಸಹವಾಗಿ
ವಿತತ ವೈಮಾನದಲಿ ಮೂರ್ತಿಸಿ
ಕ್ಷಿತಿಪತಿಯ ಸಮ್ಮುಖದಿ ಶಿವ ತ
ನ್ನತುಲ ಕನಕಾಚಲಕೆ ಪೋದನು ಲಿಂಗ ಶಿವಶರಣ ॥ ೧೧೮ ॥

ಇದುವೆ ಲಿಂಗದ ಮಹಿಮೆ ನೀಮರೆ
ಯದಲೆ ವರ್ತಿಸು ನಂಬಿಗಿಂದಲಿ
ಚದುರ ಬಣ್ಣಿಪೊಡೆಂ ನವದನಕೆ ಸಾಲುವದೆ ಮತ್ತೆಪ
ಡೆದು ದೀಪದ ಕಲಿಯಕನ್ನಯ
ಮದರ ಹಿತ ನಂಬೆಣ್ಣ ಪೆದ್ದಿಯು
ಮೊದಲಿಗರು ಮುಂಟವರನೇಕರನೊಡವಿ ಪೇಳುವೆಸು ॥ ೧೧೯ ॥

ಲಿಂಗ ಭಕ್ತನು ಕಾಟಕೊಟನು
ಲಿಂಗ ಭಕ್ತನು ಸುರಗಿ ಚೌಡನು
ಲಿಂಗ ಭಕ್ತನು ಚೋಳನೃಪತಿಯು ಸೂಳೆ ಚೋಳವ್ವೆ
ಲಿಂಗ ಭಕುತಸು ಮುಗ್ಧ ಸಂಗನು
ತುಂಗ ಮಾರ್ಕಂಡೆಯನು ಚಂಡನು
ಲಿಂಗ ಘನಘಟ್ಟಿವಾಳನಿವರನು ಲಿಂಗವೆನುತೊಪ್ಪು ॥ ೧೨೦ ॥

ಲಿಂಗ ಮಹಿಮೆ ಪೇಳೆ ಕೇಳುತ
ತುಂಗ ಗುರು ಬಲು ಧನ್ಯನಾದೆನು
ಜಂಗಮದ ಘನ ಪೇಳ್ವುದೆಂದೆನುತಾಗ ಶಿವಲಿಂಗ
ನಂಗವನು ಚಾಚುತ್ತ ನಮಿಸಲು
ಪುಂಗ ಗುರುವರ ಪೇಳತೊಡಗಿದ
ಲಿಂಗ ಗುರುವಿಂ ಘನವು ಜಂಗಮ ಮಹಿಮೆಯುದು ಕೇಳು ॥ ೧೨೧ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯದ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ಚತುರ್ಥ ಸಂಧಿಯಿದು ॥ ೧೨೨ ॥

ಅಂತು ಸಂಧಿ ೪ಕ್ಕಂ ಪದನು ೩೪೫ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೫

ಚರಭಸಿತ ರುದ್ರಾಕ್ಷ ಮಹಿಮೆಯ
ನಿರದೆ ಪೇಳಿದನಾಗ ಗುರುವರ
ಪರಮ ಶಿಷ್ಯಂಗಾ ಕಥೆಯನಾಲಿಸಿರಿ ಸಜ್ಜನರು ॥ ಪಲ್ಲ ॥

ಕಾಲ ಕಾಲ ದಯಾಳ ಕರತಳ
ಬಾಲ ಮೃಗಶಿರ ಕಾಲ ಕಟಿಕರ
ವ್ಯಾಲ ಶೋಭಿತ ಭೀಮ ಭವಸುರವರ್ಗ ನತಭರ್ಗ
ಮೂಲಪುರಕುದ್ದಾಲ ಗಿರಿಸುತೆ
ಲೋಲ ಶಿರಗಳ ಮಾಲಲಾಲಿತ
ನೀಲ ಕಂಧರ ಶೂಲಧರ ಶಿವಪುರದ ಶಿವಲಿಂಗ ॥ ೧ ॥

ಜಂಗಮಂ ಜಗಪಾವನಂ ಮೇಣ್
ಜಂಗಮಂ ಜಗದೀಶ ನಿಃಕ್ರಿಯ
ಜಂಗಮಂ ಜಗ ಪೂಜ್ಯಪದ ಪದನಾಲ್ಕನತಿಗಳೆದ
ಜಂಗಮಂ ನಿಃಶೂನ್ಯ ನಿರವಯ
ಜಂಗಮಂ ತ್ರಿವರ್ಣ ಶೂನ್ಯಂ
ಜಂಗಮಂ ಚಿದ್ರೂಪ ಚಿತ್ಕಲ ಚಿನ್ಮಯಂ ತಾನೆ ॥ ೨ ॥

ಚರನಧಿಕವಾ ಲಿಂಗದಿಂದಲಿ
ಚರವಧಿಕವಾ ಗುರುವಿನಿಂದಲಿ
ಚರನೊಕ್ಕುದಂ ಲಿಂಗ ಗುರುವಿಗೆ ಸಲುವದಾಗಿಹುದು
ಗುರುಲಿಂಗ ನೈರ್ಮಾಲ್ಯ ವಸ್ತುವು
ಚರಗೆ ಸಲ್ಲದು ಹರನೆ ಪೇಳಿಹ
ಚರ ಚರಣಮಿರಲೆನ್ನ ಶಿರದೊಳಗೆನುತಲಾಗಮದಿ ॥ ೩ ॥

ಚಾರುಚರ ಮಹಿಮೆಯನು ಸಾರಲು
ನೂರು ವಿಂಶತಿ ರಸನೆಯುವಗಂ
ತೀರಲಾಗದು ಪೇಳ್ವೆನೆಂದರೆ ಮೀರಿ ಮೆರೆಯುವದು
ಘೋರಿ ಜಂಗಮ ಮಹಿಮೆ ಘನವಿದು
ಸಾರಲೆನ್ನೊ ಶವಲ್ಲಮಾದರು
ಸಾರುವೆನು ಶಿವಲಿಂಗ ತರಳನೆ ಕೇಳು ಭಕ್ತಿಯಲಿ ॥ ೪ ॥

ಗುರು ಮಹಿಮೆಯಂ ಪೇಳ್ದೆ ಲಿಂಗದಿ
ಬೆರೆದವರ ಚರಿತೆಯನುಮುಸುರಿದೆ
ಚರ ಮಹಾತ್ವವ ಪೇಳ್ವೆನಾಲಿಸು ಭಾವಶುದ್ಧದಲಿ
ಪರಮ ಬಂಗಾಳ್ದೇಶವೆಲ್ಲಕೆ
ಅರಸನಾಗಿಹವತ್ತೊಹಿತನೆಂ
ಬರಸು ನಿತ್ಯದಿ ದಾನ ಷೋಡಶಗೈದು ಸುಖಮಿರಲು ॥ ೫ ॥

ಆವ ದಾನವು ಮೋಕ್ಷ ಪದವಂ
ನೀವುದದು ಪೇಳುವದು ನೀವೆಂ
ದೋವಿ ಶಾಸ್ತ್ರಜ್ಞರನ ಕೇಳಲು ಪೇಳ್ದರವರಾಗ
ತಾವು ಶಿವದೀಕ್ಷೆಯನು ಪಡೆಯುತ
ಲಾವರಿಸಿ ನಿಜದೇಷ್ಟ ಲಿಂಗವ
ಸಾವಧಾನದಿ ಧರಿಸಿ ಜಂಗಮ ಬೇಡಿದಿಷ್ಟಿತವ ॥ ೬ ॥

ಕೊಡುತ ಪ್ರಡ ಕಳೆಯರಿದು ಭಕ್ತಿಯ
ನಡೆಸಿ ಜ್ಞಾನ ವೈರಾಗ್ಯದಿಂ ಶಿವ
ನಡಿಯ ಭಜಿಸಲು ಮುಕ್ತಿಪದ ದೊರಕುವದು ಸಿದ್ಧಾಂತ
ಪೊಡವಿಪನೆ ಹುಸಿಯಲ್ಲ ಸತ್ಯೆನ
ಲೊಡನೆ ಪುರಹರ ಭಕ್ತನಾಗುತ
ನಡೆಸಿದನು ಶಿವಭಕ್ತಗುಣದಾಸೋಹ ಮೊದಲಾಗಿ ॥ ೭ ॥

ಜಂಗಮವೆ ಜೀವಾತ್ಮವಾಗಿಪ
ಜಂಗಮವು ಬೇಡಿಪ್ಪ ನೀವೆನು
ಮಂಗ ಧನ ಮನ ರಾಜ ಮೊದಲಾದಷ್ಟ ಭೋಗವನು
ಹಿಂಗದೀಯದೆ ಜರಿದೆನಾದರೆ
ಭಂಗ ಬರಲೆಂದ್ಬಿರಿದಿಗೆನುತಂ
ಡಂಗುರವ ಪೊಯಿಸುತ್ತ ಸುಖದಿಂ ರಾಜವಾಳುತ್ತ ॥ ೮ ॥

ಅರಸು ತನ್ನೋಲಗವ ಮಧ್ಯದಿ
ಮಿರುತ ಸಭೆ ಸಪ್ತಾಂಗ ಲಕ್ಷಣ
ದಿರವಿನಲಿ ಶೋಭಿಸಲು ಚರವರನೋರ್ವನೆದುರಿನಲಿ
ಬರುತ ಭೂಪನ ಮುಂದೆ ನಿಲಲಾ
ತುರದಿ ಕಾಣುತ ತ್ರಾಹಿಯೆಂದೆನು
ತೆರಗಿ ಸಿಂಹಾಸನದಿ ಕುಳ್ಳಿರಿಸುತ್ತಲುಪಚರಿಸಿ ॥ ೯ ॥

ಬಂದ ಕಾರ್ಯಮದೇನು ಚರವರ
ನೊಂದಳಿಯದಲೆ ಪೇಳು ನೀ ದಯು
ಸಿಂಧು ನಿನ್ನಯ ಬಯಕೆ ಜಲದಲಿ ಮಿಂದು ಹಸನಾಗ್ವೆ
ನೆಂದರಾಯಿತುಮೆನುತೆ ಹಸಿತಾ
ನಂದನಾಗುತ ನಿರೂಪಿಸುವೆ ನೀ
ನೊಂದು ಕಡೆ ನಡೆಯೆನಲು ಮಗುಳಿಂತೆಂದ ಭೂಪಾಲಾ ॥ ೧೦ ॥

ದೇವ ನಿಮ್ಮಯ ಮನದ ಬಯಕೆಯ
ನೀವೆನೀಕ್ಷಣ ತಪ್ಪೆ ಕರುಣಿಸು
ಮಾವುದದು ಬೇಕಾದುದಂ ತವಕದಲಿ ಬೇಡುವದು
ಭೂವರನೆ ನಿನ್ನರಸಿ ಪಟ್ಟದ
ದೇವಿ ಪ್ರಭೆಯನು ಶೃಂಗರಿಸಿಯನ
ಗೀವುದೆನೆ ಬೆರಗಾಗೆ ಸಭೆಯೆದುರಾಯನಿಂತೆಂದಾ ॥ ೧೧ ॥

ಕಂತುಮರ್ದನ ರೂಪ ಜಂಗಮ
ಮುಂತೀವೆ ನಡೆಯೆಂದು ಕೈಗೊ
ಟ್ಟಂತಪುರದಲಿ ಪೋಗಿ ಮಂಚದಮೇಲೆ ಕುಳ್ಳಿರಿಸಿ
ಕಾಂತೆಯಡಿಗಂ ಪೋಗಿ ಜಂಗಮ
ದಂತವೆಲ್ಲವ ಪೇಳೆ ಕೋಪದಿ
ಮಿಂತು ನುಡಿದಳು ಮೂರ್ಖ ಜನಪನೆ ನಾಚಿಕಿಲ್ಲೆನಗೆ ॥ ೧೨ ॥

ಸತಿಯಳಂ ಕೊಟ್ಟವರು ಭೂಪತಿ
ಕ್ಷಿತಿಯೊಳವರಾರುಂಟು ಕ್ಷತ್ರಿಯ
ಮತವಿದಲ್ಲವು ಸರಿಯ ದೊರೆಗಳು ಕಂಡು ನಗದಿಹರೆ
ಪತಿಯೆ ನಿನಗಾಂ ಬೇಸರಾದೆನೆ
ಹತಿಸು ಎನ್ನಯ ಪ್ರಾಣವೀಕ್ಷಣ
ಪ್ರತಿವ್ರತೆಗೆ ಕುಂದವನು ತಂದವನೆಂಥ ಜಂಗಮನಾ ॥ ೧೩ ॥

ಮನುಜಪತಿ ಕೇಳ್ಭಕ್ತಿಯಿಂದಲಿ
ತನುಮನವ ಧನವಿತ್ತು ಸೇವೆಯ
ನನುದಿನದಿ ಚರತತಿಗೆಗೈಯ್ಯುವದಿಂತು ಶಿವಭಕ್ತಿ
ಗುಣವಿಲ್ಲದೆ ವನುತೆಯರನಂ
ಮನಸಿಜನ ಕೇಳಿಯನು ಗೈಯಲು
ನೆನೆದು ಬೇಡಲು ಮೀಯಲುಂ ಒಳಿತಲ್ಲ ಸಂಭವವು ॥ ೧೪ ॥

ಧರಣಿಯೊಳು ವರಚರರು ತಾವುಂ
ಪರಮ ಪರನಾರಿಯರು ತಾಯಂ
ದರಿದು ಕಾಣುವರಲ್ಲದಲ್ಲದೆ ಮರುಳು ಜಂಗಮರು
ಸುರತ ಸುಖ ಭ್ರಮೆಗಾಗಿ ಶಿಷ್ಯರ
ಹರದಿಯನುಂಬಯಸಿ ಕೊಳ್ಳಲು
ನರ ಪಶುಗಳಿವರಹುದು ತಿಳಿಯಲು ಚರರ ಮಾರ್ಗಲ್ಲ ॥ ೧೫ ॥

ಲಲನೆಮಣಿಯರ ನಯನ ಬಲೆಯೊಳು
ಸಿಲುಕಿ ಮೋಹದಿ ತೊಳಗಿ ವಸ್ತ್ರಾ
ವಲಯದಲಿ ಮುಚ್ಚಿರ್ದ ಮೊಲೆಗಳ ಸೊಬಗನೀಕ್ಷಿಸುತ
ಕಳೆಗೆಡುತ ಮಲರ್ಬಾಣಕಳಕುತ
ಲೆಳಿಯುವರೆಯದ ಪೆಣ್ಣುಗಳನ್ಪಂ
ಬಲಪ ಮೋಹಿಗಳಲ್ಲ ಚರಗುರು ನರಕಿಗಳೆ ದಿಟವು ॥ ೧೬ ॥

ನಳಿನಮುಖಿ ಕಳಹಂಸೆಗಮನೆಯ
ಸುಳಿಯನಾಭಿಯ ಸುರ್ಕುಗುರುಳಿಯ
ತೊಳಪಗಲ್ಲದ ಛಾಯ ವಜ್ರದೊಲಿರ್ಪದಂತಿಕೆಯ
ಬಲುಮುಡಿಯ ಕಲಕಂಠೆ ಗಿಳಿನುಡಿ
ತಿಲಕಪಣೆ ಕೆಂದಾವರೆಂತಿರು
ಲಲನೆ ಕಂಡತಿ ಬಳಲಿ ಬಾಯ್ತೆರೆಯುವನು ಜಂಗಮನೆ ॥ ೧೭ ॥

ವೀರ ಮದನನ ಬಿಲ್ಲು ಪುಬ್ಬಂ
ಮೋರೆ ಮುಕುರಂ ಚಂಚಲಾಕ್ಷಿಯ
ಸಾರಸುದತಿಯ ರಂಗದವಯವ ವೀಕ್ಷಿಸುತ ಮನವ
ಗಾರುಗೊಳುತಲಿ ಮಾರಭಾದೆಗೆ
ಹಾರಿ ಭಯವುನ್ಮತ್ತರಾಗುತ
ಸೇರಿ ಸುಖಿಪರು ವೀರಜಂಗಮ ಪಟ್ಟ ಚರವರಕೆ ॥ ೧೮ ॥

ಕಚ್ಚಿ ಕಳೆಯುತ ಪಚ್ಚಿ ಭಸಿತವ
ನಚ್ಚಿ ಶಿವಮಾಲೆಯನು ಧರಿಸುತ
ಕಚ್ಚುಟ ಕೌಪೀನ ಕಾವಿಯ ಹೊಚ್ಚಿ ವಸ್ತ್ರವನು
ಅರ್ಚನಾಡಂಬರವ ಜಗದ ವ
ರಚ್ಚರಿಪ ತೆರ ಪೇಳಿ ಶಾಸ್ತ್ರವ
ನುಚ್ಚಿಕುಣಿಯನ್ನಿಚ್ಚಿಪವರೇನಚ್ಚ ಜಂಗಮರೆ ॥ ೧೯ ॥

ಗುರುತನಕೆ ಚರತನಕೆ ಸದ್ಗುಣ
ಕುರುಹು ಕಾರಣವಿರುವದಲ್ಲದೆ
ಬರಿದೆ ನಾ ಗುರುಪಟ್ಟ ಚರವಿರತೆಂದು ತಿರುಗುತಲಿ
ಸರಳು ಮಾತಾಡುತಲಿ ಕುಟಿಲಾ
ಚರಣೆಯಿಂ ತ್ರಿವಿಧವನು ಬೇಡುತ
ಲಿರದೆ ಭಕ್ತರ ಕೊರಳು ಕೊಯ್ವರು ಶಿಷ್ಟರಲ್ಲವರು ॥ ೨೦ ॥

ಮದನಸತಿ ಸಮಸುದತಿಮಣಿ ತಾಂ
ಮದನ ಕದನಕೆ ಎಳಸಿ ಕರೆದರು
ಮದನು ಧಿಕ್ಕರಿಸುತಲಿ ಪ್ರಭು ಶುಕ ಭೀಷ್ಮ ಗುಹರಂತೆ
ವಿದಿತ ವೈರಾಗ್ಯೋಪರತಿಯಿಂ
ಪಡೆದು ಜಗವುದ್ಧರಿಪನವನೇ
ಸದಯ ಸದ್ಗುರು ಯೋಗಿ ಶಿವಜಂಗಮನು ನಿಶ್ಚಯವು ॥ ೨೧ ॥

ಕಣ್ಣು ಕಾಂಬುದಕೇಕೆ ಕನ್ನಡಿ
ಬಣ್ಣ ಚರ್ಮದ ಪೆಣ್ಣು ಹೊನ್ನ್ಕ್ರೀ
ಣ್ಮಣ್ಣು ಮೂರಿವುಗಳನು ಮೋಹಿಸುವಣ್ಣ ಜಂಗಮನೆ
ಮಣ್ಣು ಹೊನ್ನೆಣ್ಣುಗಳ ಬಯಸುತ
ಸುಣ್ಣನಂದದಿ ಕುದಿಪ ಮೋಹವ
ಸಣ್ಣೆಸುತ ಸುಖಶಾಂತಿಯಾದವನವನೆ ಜಂಗಮನು ॥ ೨೨ ॥

ಎಂದು ಸತಿ ನುಡಿಯಲ್ಕೆ ಮನದೊಳು
ನೊಂದೀಕೆ ನುಡಿ ಕೇಳಿ ಕೊಡದೆ ನಾ
ಹಿಂದಕಟ್ಟಿದರೀತನರಿರಾಯರಲಿ ಮೂರುವನು
ಮುಂದಿದಕೆ ತೆರನಾವುದೆನುತಲಿ
ಬಂಧನದ ಚಿಂತೆಯಲಿ ಭೂಪರ
ಕಂದಿ ಕುದಿಯುತ ಕೊಟ್ಟ ಭಾಷೆಯದಂದವಳಿಯಿತಲಾ ॥ ೨೩ ॥

ಹುಳಿಯ ಭಾಂಡದಿ ಹಾಲಿರಿಸಿದೊಲು
ಜಲದೊಳುತ್ತಮ ಜೇನಿರಿಸಿದೊಲು
ಬಲರು ಬೀಸುವ ಬಯಲೊಳುಂ ದೀಪಿಟ್ಟ ತೆರನಂತೆ
ಯೆಳೆಸಿ ದುರ್ಜನ ಸಂಗ ಸಜ್ಜನ
ವಳಿವ ತೆರ ಪಾಪಾಂಗದೊಳು ನಿ
ರ್ಮಳದ ಭಾಷೆಯು ಪೊಕ್ಕು ಕೆಟ್ಟುದು ದೇವಮಹದೇವ ॥ ೨೪ ॥

ಶಶಿಧರನ ಕಾರುಣ್ಯ ದೃಷ್ಟಿಯ
ರಸವರತುದೇ ಕೃಪೆಯು ಮುರುಟಿತೆ
ಪೆಸರು ಪೋಯಿತೆ ಭಕ್ತದೇಹಿಕ ದೇವನೆನ್ನುವದ
ವ್ಯಸನವಡಸಿತು ಭೂತದಯ ನಿ
ನ್ನ ಸಮರೂಪನಿಗಿತ್ತವಚನ
ಹಸನಗೈವದು ಕುಶಲ ಮತಿಯಂನಿತ್ತು ಮಹದೇವ ॥ ೨೫ ॥

ಎಂದು ಸ್ತುತಿಸುತ ದತ್ತೋಹಿತ ಮ
ತ್ತೆಂದ ನಾರಿಗೆ ನೀನು ಪೇಳ್ವುದು
ಬಂಧನವು ಎನಗಾಯ್ತು ಚರ ನಿಂದೆಯನು ಕೇಳ್ವುದಕೆ
ಸಂದ ಭಕ್ತಿಯ ಮಾರ್ಗವಲ್ಲಿದು
ಕುಂದರದನೆಯೆ ಕೇಳುವಲ್ಲೆನ
ಲೊಂದುಪಾಯವ ಪೇಳ್ವುದೆನೆಗಡನಾಗ ಪೇಳಿದಳು ॥ ೨೬ ॥

ಮೃಡದಿಯಂತಾಸತ್ಯ ಕೊಟ್ಟೆನು
ತೊಡನೆ ದತ್ತೋಹಿತನು ಸಭೆಯಲಿ
ನುಡಿದು ಕೊಡದೀಗೆನ್ನನಟ್ಟಿದನೆನುತ ಭೂವರಲಿ
ನುಡಿ ಪುಸಿಗನೆಂದೆನುತ ದೂರುತ
ಕೊಡುವನಪವಾದವನು ಜಗದಲಿ
ಬಿಡದೆ ಕೊಲ್ಲಲುಮವನಯೋಚನೆ ಮೂಲಕಿತ್ತೋಯ್ತು ॥ ೨೭ ॥

ತರುಣಿ ಯೋಚನೆ ಕೇಳಿ ಭೂಪಾ
ರರಿಯದಂತೇಕಾಂತ ಗೃಹದಲಿ
ಕರದೊಯ್ದು ಖಡ್ಗದಲಿ ತರಿದನು ಶಿರವನೆರಕುರುಳಿ
ಕರಿಕಿರಿಯ ತುಂಡಿಸುತ ದೇಹವ
ಭರದಿ ನೆಲವಂನುಗುಳಿ ಪೂಳುತ
ಪರರು ನೋಡದ ತೆರದಿ ಮೃತ್ತಿಕೆ ಮುಚ್ಚಿತಾಸಿತ್ತ ॥ ೨೮ ॥

ಪೊತ್ತು ಪಾಪದ ಭಾರಮಂತಾ
ಮತ್ತೆ ಪೃಥ್ವಿಯು ನಾಳುತಿರ್ದನು
ವಿಘ್ನಮಡದಿಯು ಕೂಡಿ ದಶ್ರೋಹಿತನು ದುಃಪಥನು
ವ್ಯರ್ಥ ಚರನಂ ಕೊಂದ ಪಾಪವು
ನಿತ್ಯ ಕರ್ಣದಿ ಕೂಗುತಿರ್ದುದು
ಸತ್ಯವಿದು ಕೊಂದವರ್ಗೆ ಕೊಲೆಯುದು ಬಿಡದು ಎಂದೆಂದು ॥ ೨೯ ॥

ಒರಲುತಿಹ ಧ್ವನಿಗೇಳಿ ಭೂಪತಿ
ಹರಣದಲಿ ಖತಿಯಾಂತು ನಡಗುತೆ
ಪರಮ ವೇದಾಕ್ಷರ ಬರಿಸುತ ಕೂಗುತಿಹ ಪರುಷು
ತೆರನವೇನೆನೆ ಪೇಳು ನಿನ್ನಿಂ
ದುರಿತವೇನಾಗಿಹುದು ಮೆನಲುಂ
ಚರನ ಕೊಂದಾದ್ಯಂತವನು ವಿವರಿಸಲು ಬೆರಗಾಗಿ ॥ ೩೦ ॥

ಜನಪ ಕೇಳಿ ದೋಷವಾರಿಂ
ದನಘವಾಗದು ರಾಜ್ಯ ತೊರೆಯುತ
ಘನ ಕಷ್ಟದಿಂದುಗ್ರತಪಗೈಯ್ಯಲ್ಕೆ ಶಿವನೊಲುಮೆ
ಯನು ಪಡೆದು ಚರದ್ರೋಹ ನೀನೀ
ಗೆನುತ ಪೇಳಲು ಕೇಳಿ ಭೂವರ
ನನುನಯದಿ ತಪಗೈಯ್ಯೆ ಶಿವ ಮೆಚ್ಚುತಲಿ ಬೇಡೆನಲು ॥ ೩೧ ॥

ಮೂಡಿದಘವನು ಪೇಳಿ ಶ್ರವಣದಿ
ಗೂಢ ಧ್ವನಿ ಕೇಳ್ವಲುಹ ನಿರ್ಮಳ
ಮಾಡಿ ನಿಮ್ಮುದರದೊಳಗಿರಿಸಿಕೊಯೆಂದು ಬಿನ್ನೈಸೆ
ಗಾಢ ಬಲಿಯಾಣ್ಮ ಕೇಳುತ
ಗಾಡದಿಂ ತನ್ನುದರ ದೈವನಂ
ನಾಡೆಯಿಂಬಿಟ್ಟರಸು ಕೈಲಾಸದಲಿ ಪೋಗಲ್ಕೆ ॥ ೩೨ ॥

ನೆರೆದ ಪ್ರಮಥಗಣಾದಿ ಮುಖ್ಯರು
ಹರನ ಕಾಣುತಲೆದ್ದು ಪೋದರು
ಮಿರದೆ ಗಣ ತಿಂಥಿಣಿಯು ಮುಳಿಯುತ ಪೊರಟು ಪೋಗಲ್ಕೆ
ಬೆರಗುವಡುತಲಿ ಶಿವನು ಬೇಗದಿ
ಕರೆದು ನಾರದ ನಂದಿಯರನಂ
ಬರಲು ನಾಗಣ ಸಮೂಹವೆಲ್ಲವು ಪರಿದ ಬಗೆಯೇನು ॥ ೩೩ ॥

ಕೇಳಿರೆನುತಲಿ ಕಳುಪೆಲೀರ್ವರು
ಬಾಳಲೋಚನನಾಜ್ಞೆಯನು ಜವ
ತಾಳುತಂ ಗಣವೃಂದಕೆರಗುತ ಮುಗಿದು ಕರಗಳನು
ಪೇಳಿರೈ ಕೈಲಾಸವನು ಬಿ
ಟ್ಟೇಳುತೇತಕೆ ಬಂದಿರೈ ಶಿವ
ಬಾಳಚಿಂತೆಯ ತಾಳಿ ನಿಮ್ಮನು ಕರೆಯ ಕಳುಹಿದನು ॥ ೩೪ ॥

ಹಿಂದೆ ಘನಶಿವ ಜಂಗಮಯ್ಯನ
ಕೊಂದ ಪಾಪಿಯು ದತ್ತೋಹಿತನಂ
ನಿಂದುತನ್ನುದರದಲಿ ಶಿವನಿಂ ಬಿಟ್ಟ ಕಾರಣದಿ
ಬಂದೆವಲ್ಲಿರಬಾರದೆನುತಲಿ
ಕೊಂದ ದ್ರೋಹಿಯು ಬಿಟ್ಟಡಂದಿಗೆ
ಬಂದೆವಲ್ಲದೆ ಬರುವದಿಲ್ಲೆಂದವರು ಪೇಳಲಿಕೆ ॥ ೩೫ ॥

ಮರಳಿ ನಾರದ ನಂದಿ ಬರುತಳಿ
ಪುರಹರಗೆ ಬಿನ್ನೈಸಲೆಲ್ಲವ
ನರಸನಂಪೊರಗಿಟ್ಟು ಪ್ರಮಥರ ಕರೆಯ ಕಳುಹಿದನು
ಬರಲು ಪ್ರಮಥಗಣಂಗಳೆಲ್ಲರು
ಭರದಿ ಚರದ್ರೋಹವದು ಪೋಗುವ
ಪರಿಯದಾವುದುಮವಗೆಯರು ಪಿರಿಪರಮ ಪ್ರಮಥರಿಂ ॥ ೩೬ ॥

ತಿರುಗಿ ಧರುಣಿಗೆ ಪೋಗಿ ಧಾತ್ರಿಯ
ಲರಸುತನವಂಗೈಯ್ಯುತಿರೆ ಮು
ತ್ತಿರಿಸಿಕೊಂಡ್ದರಣಿದ ಚರವರ ಬರುತಲಾ ಪಟ್ಟ
ದರಸಿಯಂ ಜವ ಬೇಡೆ ಸಕಲೈ
ಶ್ವರಿಯ ಸಹಿತವ ಕೊಡಲು ದ್ರೋಹವ
ದಿರದೆ ನಿವೃತ್ತೆನುತ ಪೇಳ್ದರು ಪ್ರಮಥಗಣರಾಗ ॥ ೩೭ ॥

ಚಿತ್ತಜಾಂತಕ ಕೇಳಿ ಕರುಣದಿ
ದತ್ತೋಹಿತನಂ ಕಳುಹಿ ಧರಣಿಗೆ
ಮತ್ತೆಗತ್ತಾ ಜಂಗಮಕ್ಕಸುವಿತ್ತು ಭೂತಳಕೆ
ತತ್ತವಕದಿಂ ಪೋಗುಮತ್ತಾ
ದತ್ತೋಹಿತನಂಗನೆಯ ಬೇಡೆನು
ತತ್ತಚರನಂ ಶಿವನು ಬೀಳ್ಕೊಡಲಿತ್ತಲವನಿಪನು ॥ ೩೮ ॥

ಉರ್ವಿಯಲಿ ತಾ ಸರ್ವ ದೇಶಕೆ
ಸಾರ್ವಭೌಮನುವಾಗಿ ರಾಜ್ಯವ
ಕೊರ್ವೆಯಿಂ ಪಾಲಿಸುತಲೋಲಗದಲ್ಲಿ ಕುಳಿತಿರಲು
ಪೂರ್ವ ಖಡ್ಗದಿ ಕಡಿಸಿಕೊಂಡಾ
ಶರ್ವ ಜಂಗಮ ಬರಲು ಕಾಣುತ
ಪರ್ವಿ ಸಂತಸ ಪೊಡವಿಪತಿ ತಾನಡಗುತಿದಿರೆದ್ದು ॥ ೩೯ ॥

ಪೋಗಿ ಮುಂದಕೆ ಬಾಗಿ ಚರಪದ
ಕಾಗ ನಮಿಸುತ ಭಕ್ತಿಯಿಂ ತಲೆ
ದೂಗಿ ಕರತಂದಾಗ ಸಿಂಹಾಸನದಿ ಕುಳ್ಳಿರಿಸಿ
ರಾಗದಿಂ ಸತ್ಕರಿಸಿ ಸತಿ ಸಹ
ಮಾಗಿಯಷ್ಟೈಶ್ವರ್ಯವೆಲ್ಲನು
ಯೋಗಿ ಜಂಗಮ ಪದಕೆಯೊಂದುಳಿಯದಲೆ ತಾನಿತ್ತು ॥ ೪೦ ॥

ಕುಂದದಾತನ ಸೇವೆಯನು ಮುದ
ದಿಂದ ಗೈಯ್ಯುತ್ತಿರಲು ಭಕ್ತರ
ವೃಂದ ಸ್ತುತಿಸುವ ಕೀರ್ತಿ ಕೈಲಾಸವನುಪಬ್ಬಲಿಕೆ
ಬಂದು ಶಿವ ತಾನೀರ್ವರನು ಕೊಂ
ಡಂದು ರಜತಾಚಲಕೆ ಪೋದನು
ಕಂದ ಕೇಳ್ ಶಿವಜಂಗಮದ ಮಹಿಮೆಯದು ಬಲು ಘನವೋ ॥ ೪೧ ॥

ಚರಭಕ್ತಿ ಮರೆಯದಿರು ನೀ ನೆನೆ
ಗುರುಪದಕೆ ಶಿವಲಿಂಗ ಬಾಗುತ
ಲೆರಗಿ ಸಾಷ್ಟಾಂಗೆದ್ದು ಸಮ್ಮುಖ ಕುಳಿತು ಕರಮುಗಿದು
ಗುರುವೆ ಮತ್ತೀ ಚರಮಹಿಮೆ ವಿ
ಸ್ತರಿಸಿ ಪೇಳುವದೆನಲು ಗುರುವರ
ನೊರೆದನೊಂದಾ ಕಥೆಯು ಕೇಳುವದು ಸಜ್ಜನರು ॥ ೪೨ ॥

ಪುಂಡರೀಕ ಭವಾಂಡದಲಿ ಯು
ದ್ದಂಡ ಶಿವಭಕ್ತಿಯಲಿ ಕೀರ್ತಿಯ
ಗೊಂಡ ಕಲ್ಯಾಣ್ಣುರದಿ ಬಸವನ ಕಾಲದೊಳುಮೊರ್ವ
ಚಂಡಸೋಮೆಮೆಂಬ ಬೆಲೆ ವೆ
ಣ್ಮಂಡೆ ಮಣಿ ಶಿವಭಕ್ತಿಯಲಿ ಚರ
ರುಂಡುದಲ್ಲದೆಯುಣ್ಣಳು ತಾ ಶಿವಶರಣೆ ಬಲು ಕರುಣೆ ॥ ೪೩ ॥

ಬಸವನೊಂದಿನ ವನಕೆ ಭೋಜನ
ದೊಸಗೆಯಂ ಕೈಕೊಳುತ ಜಂಗಮ
ವಿಸರ ಶಿವಭಕ್ತಾದಿ ಪ್ರಮಥರು ಪೋಗೆ ಚರನೋರ್ವ
ಹಸಿದು ಕಲ್ಯಾಣದಲಿ ಮನೆ ಮನೆ
ಯುಸುರು ಬಿಡದಲೆ ತಿರುಗಿ ಮನಕತಿ
ಕಸವಿಸಿ.ಯಗೊಳ್ಳುತ್ತಲರಸಿದನನ್ನ ದಾನಿಗರ ॥ ೪೪ ॥

ನರೆತ ಜಡೆ ಪೊರ ಹಲ್ಲು ತೂಗುವ
ಶಿರವು ಕೈಕೋಲೂರಿ ನಡೆಯುತ
ಕರತೊಡೆದ ಸರ್ವಾಂಗ ಭಸಿತವ ಧರಿಸಿ ರುದ್ರಾಕ್ಷಿ
ಧರೆಗಧಿಕ ವೃದ್ಧತೆಯ ತಾಳುತ
ಪುರದ ಬಿ.ದಿಲಿ ಬೀಳುತೇಳುತ
ಬರುವ ಚರನಂ ಕಂಡಳಾ ಗುಣಿ ಚಂಡಸೋಮಂ ॥ ೪೫ ॥

ತಲೆಗೆ ತೈಲಾಭ್ಯಾಂಗವನಾ
ಲಲನೆಗೈದಿರಲೇನು.ಮಾಡಲಿ
ಸುಲಭ ಜಂಗಮ ದೇವನಂ ಕಣ್ಣಿಂದ ಕಾಣುತಲಿ
ನಿಲಯುದಲಿ ಕೂಡುವದು ಭಕ್ತರ
ಕೆಲಸವಲ್ಲವು ಬಂದಬಳಿಕೀ
ತಲೆಯ ಸ್ನಾನವಗೈದರಾಯಿತುಮೆಂದು ಬರಲೋಡೆ ॥ ೪೬ ॥

ನಡೆಯುಡುಗಿ ಮೊಗಕಂದಿ ಬಾಯೊಳು
ನುಡಿಯು ಬರದಲೆ ಬತ್ತಿ ನಾಲಿಗೆ
ಪೊಡೆಯು ಬೆನ್ನತ್ತಿಡೆಂಡಣಿಸುತ್ತ ಮನ ಬೆದರಿ
ಹಿಡಿದ ಕೋಲಾಧಾರದಿಂ ಬಹ
ವಡೆಯ ಜಂಗಮನೆದುರು ಪೋಗು
ತ್ತೊಡನೆ ನಮಿಸುತ್ತೇಳ್ದು ಹೀಗೇಕೆಂದು ಕೇಳ್ದಂದು ॥ ೪೭ ॥

ಕರವೃದ್ಧ ಮಾಹೇಶ್ವರತಿ ಘನ
ಪುರುಷರೆಲ್ಲಿಂ ಬಿಜಯಗೈದಿರೊ
ಶರೀರಬಾಧೆಯ ಬಗೆಯದಿವರಂ ಕಂಡರೇನಾಯ್ತು
ಚರರೆ ನೀವೆಲ್ಲಿಂದ ಬಂದಿರೊ
ಉದರಕೆಯನ್ನವು ದೊರೆದುದಿಲ್ಲವೊ
ಕರುಣೆ ಚರುತ ಚರಣದಾಸಿಗೆಯರುಹಬೇಕೈ ನೀವ್ ॥ ೪೮ ॥

ಸೇತುವಿಂಬರುತಡಿಯ ಮಾರ್ಗದಿ
ಸೋತು ಬಳಲಿದೆನನ್ನನೀಯುವ
ದಾತೃಗಳು ದೊರಕಿಲ್ಲವಿಂದಿಗೆಯ್ಯೆದುಪಾವಾಸ
ಪ್ರಾಪ್ತವಾಯಿತು ಬಂದಿರಿಲ್ಲಿಗೆ
ಯೋತು ನುಡಿಸುವ ಭಕ್ತರಿಲ್ಲವು
ತಾತ ಬಸವನು ತಾನು ವನಭೋಜನಕೆ ಪೋಗಿಹನು ॥ ೪೯ ॥

ಹಸಿದು ಬಳಲದಿರಯ್ಯ ದೇವನೆ
ಸಸಿನೆ ಬಿಜಯಂಗೈವುದೆನ್ನಯ
ವಸತಿಗೀಗಲೆ ಎಂದು ಕರೆದೊಯ್ದಾಗ ಸಂತಸದಿ
ಮಿಸುನಿ ಮಂಚದಿ ಕೂಡ್ರಿಸುತ ಪದ
ಬಿಸಜಗಳಿಗೆರಗುತ್ತ ಕನಿಕರ
ಸುಶೀಲೆ ಸವಿಸವಿ ಹಣ್ಣುಹಂಪಲವಿತ್ತು ಹಾರೈಸಿ ॥ ೫೦ ॥

ಏನು ಮಾನಿನಿ ನಿನಗೆ ತಿಳಿಯದೆ
ಕಾನನದ ಹಣ್ಣೆತ್ತೆಯಾದರೆ
ನಾನು ತಿನ್ನಲು ಶುಕವೊ ಖಗವೋ ತಪಿಪ ವೆಳೆವಟುವೋ
ಬೋನವಂ ಕೊಡು ಶೀಘ್ರ ಕೊಡದಿರ
ಲಾನು ಪೋಗುವೆ ಹಾನಿ ಒದಗಿತು
ದಾನಿ ಕಲ್ಯಾಣಲ್ಲವಿದು ನಿಜ ಹೀನ ಕಲ್ಯಾಣ ॥ ೫೧ ॥

ಶಿರಕೆ ತೈಲಾಭ್ಯಾಂಗಸಾಗಿದೆ
ತ್ವರದಿ ಸ್ನಾನಂ ಗೈದು ಪಾಕದ
ಪರಿಕರಂಗಳನೆಲ್ಲ ಕೂಡಿಸಿ ಪಾಕಗೈಯ್ಯುವೆನು
ಚರರೆ ಸದ್ದಯಕರರೆ ಶಾಂತಿಯ
ವೆರಸಿ ಕ್ಷಣ ಮೂರ್ತಿಸುವದೆ ನೆಲದು
ಚರನು ಕೇಳುತ ನಿಲ್ಲಲಾರದೆ ಪೊರಟನಂಗಣದಿ ॥ ೫೨ ॥

ದೇವನ್ನೈರಿಸಿರೀಗ ತಡವೇ
ನಾವ ಕಾರಣ ಪೋಗುದಲ್ಲವು
ಸಾವಧಾನವೆ ಸರ್ವಸಾಧನ ಜೀವವಿರುತನಕಾ
ಭಾವೆ ಹಸಿದಿಹೆನೆನಲು ನಿಲ್ಲೆನು
ದ್ಯಾವ ನ್ಯಾಯವು ನೀನು ಪೇಳ್ವುದು
ಜೀವ ತೃಪ್ತಿಯ ಗೈವಳೆಂದಾಂ ಬಂದೆ ತಿಳಿಯದಲೆ ॥ ೫೩ ॥

ಕಡು ಹಸಿದು ಕಲ್ಕವರಿದೊಲು ನೀ
ರಡಿಸಿ ಬರೆಗೆರೆ ಪೊಕ್ಕ ತೆರ ಬೆಮ
ರಡಕೆ ಬೊಬ್ಬುಲಿ ನೆರಳು ಸೇರುತ ಸುಯ್ಯುತೆರನಾಯ್ತು
ತಡವು ಗೈದರೆ ಸೂರ್ಯ ಮುಳಗುವ
ದಡಿಯ ಪ್ರಮಥರ ಶಿಕ್ಷೆಯಿಂ ನಂ
ಬಿಡದೆ ಕಾಡುವದೇನು ಮಾಡಲಿ ಮೂಢ ನಾನಾದೆ ॥ ೫೪ ॥

ತಡಿರಿ ಬಿಸಿಯಡಗಿಯನು ಮಾಪ್ಪೆನು
ಕೊಡು ಮರುಳೆ ನೀಂ ಬೀಳಲನ್ನವ
ಕೊಡೆನು ಕೊಡದಿರೆ ಹಿಡಿವೆ ಮಾರ್ಗವದೇಕೆ ದಿನಮಣಿಯು
ಪಡುವಣಾದ್ರಿಯ ಸೇರ್ವಸಿಲ್ಲಿಪೆ
ನುಡಿವುದಲ್ಲವು ನುಡಿದು ಹುಸಿಯೆನು
ತಡೆದು ನಿಲ್ಲಿಸು ಭಾಷೆ ಪಾಲಿಸು ಚಂಡ ಸೋಮಂಮ ॥ ೫೫ ॥

ಬರುತ ದ್ವಾರದಿ ನಿಂದು ಯೆಲೆ ರವಿ
ಚರವರನು ಭೋಜಿಸುವತನಕಂ
ಇರುವದಿಲ್ಲೆಯು ಮುಂದೆ ಚರಿಪಲುಮಾಜ್ಞೆ ನಿನಗಿಲ್ಲ
ತರುಣಿ ಇವಳೆಂದರಿದು ಜರಿದರೆ
ತರುಣಿ ನಿನಗಾ ಬಸವ ಪ್ರಮಥರ
ಚರಣದಾಣೆಯುಮೆಂದು ನುಡಿಯುತ ಬಂದು ಗೃಹದೊಳಗೆ ॥ ೫೬ ॥

ಮಿಂದು ಮಡಿಯನ್ನುಟ್ಟು ಪಾಕದ
ದುಂದುಗದಿ ತೊಡಕುತ್ತ ನಾನಾ
ಚಂದ ಪಕ್ವಾನ್ನಗಳ ಗೈಯುತ್ತಿರಲು ರವಿ ಬೆದರಿ
ಮುಂದೆ ಪೋಗದಲಾಣೆ ಮೀರುತ
ನಿಂದ ತಾಣದಿ ನಿಂದುಬಿಟ್ಟನು
ಕುದುಗೊರಳನ ಭಕ್ತರಾಣೆಯು ಕಿರಿದೆ ಹಿರಿದಹುದು ॥ ೫೭ ॥

ದಕ್ಷಯಾಗದಿ ಭಕ್ಷ ತಿನ್ನುವ
ಪೇಕ್ಷೆಯಿಂ ಪೋಗಲ್ಕೆ ಶಿವನಣ್ಣಿ
ಯಕ್ಷದಿಂ ವೀರೇಶ ಜನಿಸುತ ಸುರರ ಶಿಕ್ಷಿಸುತೆ
ತಕ್ಷಣದಿಯಂ ನೀಕ್ಷಿಸುತ ಕರ
ಭಿಕ್ಷೆಮುದ್ಗರ ಮುಸುಡದೀಯಲು
ಪಕ್ಷ ದ್ವಯ ದ್ವಯರದಣಮುದುರುತ ಬೋಡ ನಾನಾದೆ ॥ ೫೮ ॥

ಭಕ್ತ ಮುನಿಮಾರ್ಕಂಡೇನನುತಾ
ಮತ್ತಿತರ ಪೋಗಲ್ಕೆ ಮಮಸುತ
ಹಸ್ತಿವಸನನ ಶೂಲದಿಂ ತಾ ಮಡಿದು ಬದುಕಿದನು
ಚಿತ್ರಜಾರಿಯ ಭಕ್ತಳೀಕೆಯು
ಮಿತ್ರಳಾಣೆಯು ಬಸವ ಪ್ರಮಥರ
ವತ್ತಿ ಬವೆಗಾಂ ಪೋದರೆನ್ನಯ ದತ್ತವಳಿತಲ್ಲ ॥ ೫೯ ॥

ಘೊಂಟಗೈಯನ ಮಾವ ಗೆಳೆಯನ
ಭಂಟ ಘಂಟಾಕರ್ನ ಪೂಜಿಪ
ಕಂಠ ವಿಷ ನೈರ್ಮಾಲ್ಯಮದು ಮಮಕಿರಣದೋನ್ನತಿಯಿಂ
ಅಂಟೆ ಶಪಿಸಿದನಾಗ ಕುಷ್ಟಂ
ಅಂಟಿತೆನ್ನಂ ಮೊರೆಯ ಪೊಗಲಾಂ
ಕಂಟಕಂ ಕೆಡಿಸಿದನು ಮನೋಹರ ಪ್ರಮಥನಿಂದೆಂದು ॥ ೬೦ ॥

ಸಾಗದಿಹನಾಕಿತ್ತಪಾಕವ
ದಾಗಿದೆಲೆ ಶಿವಯೋಗಿಯೇಳೆನ
ಲಾಗ ಜಂಗಮ ಸೂರ್ಯಮಂಡಲ ನೋಡಿ ಬೆರಗಾಗಿ
ಹ್ಯಾಗೆ ತಾಮೊದಲಿದ್ದ ತಾಣದಿ
ಹಾಗೆ ನಿಂತಿಹನಲ್ಲ ಶಿವಶಿವ
ಆಗ ನಾ ಬಂದಾಗ್ಗೆ ತಾಸ್ಹೊತ್ತಿತ್ತು ಮದುಮೀಗೆ ॥ ೬೧ ॥

ಮೂರು ತಾಸಾಯ್ತಲ್ಲ ಪಾಕವ
ನಾರಿ ಮಾಡುವದೀಗಲಾಯಿತು
ಸಾರಲಾಗದುಮಿವಳ ಸತ್ವವ ಮಾರಹರ ಬಲ್ಲ
ಗಾರುಗೊಳ್ಳುತ ಮುಖವ ತೊಳೆಯುತ
ಚಾರು ಗದ್ದಿಗೆಯಲ್ಲಿ ಮೂರ್ತಿಸೆ
ವಾರಿಯಿಂ ಪದವಾರಿಜವ ತೊಳೆಯುತ್ತಲಭಿ ನಮಿಸಿ ॥ ೬೨ ॥

ಅಷ್ಟವಿಧಪೂಜೆಯನು ತಾಮನ
ಗೊಟ್ಟು ಮಾಡುತ್ತಾಗಳತಿತ್ವರ
ಶ್ರೇಷ್ಠ ಪಕ್ವಾನ್ನಗಳ ಎಡೆಮಾಡಿದಳು ಭಕ್ತಿಯಲಿ
ಶಿಷ್ಟ ಜಂಗಮಲಿಂಗ ದೇವಗೆ
ಮುಟ್ಟಿ ನೆಲ ಸಾಷ್ಟಾಂಗವೆರಗುತ
ಕೊಟ್ಟಳಪ್ಪಣೆ ಕ್ಷಮಿಸು ದೇವನೆ ತಡವುಗೈದುದಕ್ಕೆ ॥ ೬೩ ॥

ಒಳಿತುಮೆಂದೆನುತಾ ಜಂಗಮ
ಸಲಿಸಲಾರಂಭಿಸಿದ ಸತ್ವರ
ಕಲಸುವನ್ನವು ಕಾಯಿಪಲ್ಲೆಯು ಬುಂದೆ ಬೇಸನವು
ತಿಲದ ಸಂಡಿಗೆ ಪಾಲುಪಾಯಸ
ಸಲಿಲ ಘೃತ ಕಜ್ಜಾಯ ಕಾರ್ಚೀ
ಫಲವು ಸುರಳೀ ಪೋಳಿಗೆಯು ಕರಿಗಡಬು ಸಕ್ಕರೆಯುಲಿ ॥ ೭೪ ॥

ಮನದಣೆಯಲುಣುತಿರ್ದ ಮತ್ತೆಯು
ಎಣಿಕೆಯಿಲ್ಲದೆ ನೀಡ್ವಳತಿ ಘನ
ಮನದ ಭಕ್ತಿಯ ಭಾಗ್ಯಶಾಲಿಯು ಚಂಡಸೋಮಮ್ಮ
... ... ... ...
... ... ... ...
... ... ... ... ... ... ॥ ೭೫ ॥

ಸಾಕುಸಾಕಾಯ್ತನ್ನ ತೃಪ್ತಿಯು
ನೀ ಕರುಣಿ ನಿಜಶರಣೆ ನಿನ್ನನುಮ
ನಾಕ ಭೂಪಾತಾಳದೊಳು ನಾಕಾಣೆ ಶಿವನಾಣೆ
ಪಾಕವೇನದು ಹೇಳಬಾರದು
ಮೂಕಯುತ ನಾನಾದೆ ಸತ್ಯವು
ಕಾಕು ಪಂಣ್ಯಾಮಣೆಯುಮಲ್ಲನ್ಪೂರ್ಣೆಯೇ ನಿಜವು ॥ ೭೬ ॥

ಎನ್ನುತಿಹ ಚರವರನ ನಳಿನೋ
ತ್ಪನ್ನ ಪದಕೆರಗುತಲಿ ಶಿವಶಿವ
ಚುನ್ನಳೀ ಮೂಳೆಯುನು ಸೂಳೆಯನೇಕೆ ಸ್ತುತಿಸುವಿರಿ
ಧನ್ಯ ತವಚರಣಾಳಿ ಬುಡದಿಹ
ಮಣ್ಣುನಾಬಲು ಮೂಢೆ ಚರವರ
ಕಣ್ಣು ಮೂರುಳ್ಳವನೆ ನೀ ನಿಜಮಹಿಮೆ ಘನಘನವು ॥ ೭೭ ॥

ಎಂದು ತಾಂಬೂಲಾದಿ ದಕ್ಷಿಣೆ
ವಂದದಿಂದೀಯುತ್ತ ಬಸವನ
ಮಂದಿರಕ್ಕಂ ಬಿಜಯಗೈಸುತ್ತಂದು ದಿನಮಣಿಗೆ
ಎಂದಳಾಣೆಯು ಬಿಟ್ಟೆನೊಳಿತುಂ
ಹೊಂದು ಪಡುವಣಗಿರಿಯನೆ ತ್ವರ
ದಿಂದ ಸಾಗಿದ ರವಿಯು ಮಸ್ತಾಚಲಕೆ ಬಿಜ್ಜಳನ ॥ ೭೮ ॥

ಸಭೆಯು ತಾಣದಿ ಘಳಿಗೆ ವಟ್ಟಲ
ವಿಭುವನಾಜ್ಞದಿ ಪಾಕಿಕೊಂಡಿರ
ಲಭ್ಯುದಯದಿಂ ತಾ ಸುದ್ವಾದಶ ಪೋಗಿ ಪದಿನಾಲ್ಕು
ಪ್ರಬಲ ವೀದಿನವೇಕೆ ತಿಳಿಯದು
ಮುಭಯ ತಾಸಧಿಕೆಂದು ರಾಜಗೆ
ಯುಭಿನಮಿಸಿ ಪೇಳಿದರು ದುಗುಡವನಾಂತು ಜವದಿಂದೆ ॥ ೬೯ ॥

ಕೇಳಿ ಬಿಜ್ಜಳ ಬಸವಗೆಂದನು
ವೇಳ್ಯವೇಕಾಯ್ತೆಚ್ಚು ಕಡಿಮೆಯು
ಪೇಳು ನೀನೆನಲಹುದು ನಮ್ಮಯ ಚಂಡ ಸೋಮಮ್ಮ
ಶೀಲಗುಣಿ ಶಿವಶರಣಿ ಭಕ್ತಿಯ
ಮೂಲೆ ಚರವರಲೋಲೆ ತಾನುಂ
ಕಾಲಹರ ಜಂಗಮಕೆ ಉಣಿಸುವ ಕಾರಣದಿ ರವಿಗೆ ॥ ೭೦ ॥

ಆಣೆ ಕಟ್ಟುತ ತಡೆದಳಾ ಶುಕ
ವಾಣಿಯದರಿಂ ಸೂರ್ಯ ನಿಲ್ಲಲು
ಮಾಣದೀ ದಿನ ಘಳಿಗೆ ವಟ್ಟಲು ತಪ್ಪಿ ಕಡಿಮ್ಹೆಚ್ಚು
ಕಾಣಬಂದಿತುಮೆನಲು ಬಿಜ್ಜಳ
ಕೇಣಗೊಳ್ಳುತಲೆಲ್ಲಿ ಮಾತಿದು
ಹೀನ ಮನುಜರುಮೆಲ್ಲಿ ದಿನಮಣಿಯೆಲ್ಲಿ ನೀನರಿಯೆ ॥ ೭೧ ॥

ಬೊಟ್ಟು ಭೂತಿಯ ಧರಿಸಿದವನಿಗೆ
ಬೆಟ್ಟದಷ್ಟುಚ್ಚಿರುವದೆಂಬದು
ಸ್ಪಷ್ಟದಿಂ ಕಾಣಲ್ಕೆ ಬಂದು ಕೇಳ್ವದೇನಿಹುದು
ಭ್ರಷ್ಟ ಸೂಳೆಯದೇನು ಪೌರುಷ
ಕೆಟ್ಟ ಪಾಪಾನ್ವಿತೆಯುಮಾಕೆಯು
ದೃಷ್ಟಿಯಿಂದಂ ನೋಡದಾ ನುಡಿ ಬೇಡ ನಗೆಗೇಡಾ ॥ ೭೨ ॥

ಲಕ್ಷಗಾವುದ ಮೇಲೆ ಇರುವನ
ಲಕ್ಷಿಸಲು ನಮ್ಮಕಣ್ಣು ಕುಕ್ಕುತ
ಲಾಕ್ಷಣಕೆ ಕತ್ತಲೆಯು ಕವಿವುದು ನೀನು ಪೇಳುವದು
ಪಕ್ಷಪಾತವುಮಲ್ಲೆ ಸತ್ಯವು
ಮೀಕ್ಷಿಸುವೆನವಳಾರು ಕರಿಸೆನೆ
ಲಕ್ಷತ್ರಯ ಶರಣೆಯರು ತಮ್ಮ ಸ್ಥಲಕೆ ಬರರೆಂದು ॥ ೭೩ ॥

ಪೇಳೆ ಬಿಜ್ಜಳ ತನ್ನ ಮಾರ್ಬಲ
ವೋಳಿಯಿಂದಂ ತಾನೆ ಬಸವನ
ಮೇಳದಿಂ ಪೋಗಲ್ಕೆ ಜವನಿಕೆ ಮರಿಯು ನಿಂತಿರಲು
ಕೇಳಿದನು ಬಸವೇಶನಾಗಲೆ
ಕಾಲಪಿತನಿಗೆ ಆಣೆ ಕಟ್ಟುತ
ಶೀಲೆ ನೀನಿಲಿಸಿದ್ದು ಬದ್ಧವೆ ಎಂದ ಸಂತಸದಿ ॥ ೭೪ ॥

ಬದ್ಧವೈ ಬಸವೇಶ ತಮ್ಮಯ
ಶುದ್ಧ ಚರಣದ ಮಹಿಮೆಯದು ತಾ
ಸಿದ್ಧಿಯಣಿಮಾಧ್ಯಷ್ಟಗಳನ್ನಸಾಧ್ಯ ಮಾಗಿಪುದು
ಶುದ್ಧಸಿದ್ಧ ಪ್ರಸಿದ್ಧ ಜಂಗಮ
ನುದ್ದಿಶಂ ರವಿಗಾಣೆ ಪಾಕುತ
ಲಿದ್ದ ತಾವಿಲಿ ನಿಲಿಸಿದು ನಿಜ ನಿಜವು ನಿಜವೆಂದು ॥ ೭೫ ॥

ಚಂಡ ಸೋಮಮ್ಮಾಗ ಪೇಳಲು
ಚಂಡ ಕಿರಣನನಿತಿಸಿದೀಕೆಯು
ಚಂಡಿಯಹುದಲ್ಲದೆಯು ಮತ್ತಿನ್ನಾರು ತ್ರೀಜಗದಿ
ಮಂಡಲಾಧಿ ಘನ ಮಿಸಿಯುಡುಗರೆ
ತಂಡವಾಭರಣಾದಿಯುನ್ನತ
ಮಂಡೆ ಮಣಿ ನವರತ್ನ ಮೊದಲಾಗಿತ್ತ ಪದಕಾಣ್ಕೆ ॥ ೭೬ ॥

ಭಾವೆ ಬಿಜ್ಜಳನಿತ್ತ ಸರ್ವವ
ದೇವ ಜಂಗಮಕಿತ್ತು ಭಕ್ತಿಯ
ಪಾವನಾಂಭುದಿಯೊಳಗೆ ಮುಳುಗಾಡುತಲಿ ಸುಖಿಮಿರ್ದು
ಸಾವಧಾನದಿ ಶಿವ ಚರಾರ್ಯರ
ನಾವಗಂ ತಣಿಸುತಲಿ ಸದ್ಗುಣ
ಸೇವಿ ಎನಿಸುತ ಶಿವನ ಬೆರೆದಳು ಕೇಳು ಶಿವಲಿಂಗಾ ॥ ೭೭ ॥

ಇದುವೆ ಜಂಗಮ ಮಹಿಮೆ ಇದನಂ
ಸದಮಲಾತ್ಮನೆ ತಿಳಿದು ನೀನತಿ
ಮುದದಿ ಪೂಜಿಸಿ ಪದವನಿಚ್ಛಾತೃಪ್ತಿಯನು ಮಾಡೈ
ಚದುರ ಚರವರ ಭಕ್ತಿ ಶುಲಭ
ಲ್ಲಿದಕೆ ಸಾಠಿಯು ಮಾವುದೆನಿಸದು
ಸದಯ ಜಂಗಮ ಲಿಂಗದೊಳು ನಿಂಬೆಕ್ಕ ಮೆರೆದಳಲಾ ॥ ೭೮ ॥

ಚರನು ಬೇಡಲು ಮಗಳ ಮುಡಿಯಂ
ನಿರದೆಯಿತ್ತನು ಮಾನಕಂಜರ
ತರುಣಿಯಿತ್ತನು ಶಿಂಧು ಬಲ್ಲಾಳರಸ ಕಲಿಕಂಭ
ಚರನವೇಶಕೆ ನಿಂದಿಸಿದ ತ
ತ್ತರುಣಿಯನು ತಾ ತರಿದನಿವರನು
ಮರಿಯದಿರು ಚರಭಕ್ತರನು ನೀ ಸ್ಮರಿಸು ಹಗಲಿರುಳು ॥ ೭೯ ॥

ಎನಲು ಗುರುಪದವನಜಕೆರಗುತ
ಘನ ಹರುಷದಿಂ ಕುಳಿತ ಸಮ್ಮುಖ
ತನಯನಂ ಕಾಣುತ್ತ ಸಂತಸವಾಂತು ಗುರುವರನು
ಸನುತ ಶಿವಲಿಂಗನಿಗೆ ಪೇಳಿದ
ಮನುಮಥಾರಿಯ ಭಸ್ಮ ಮಹಿಮೆಯು
ನನವರತ ನೀ ನಂಬಿ ಧರಿಸುತ ಘನತೆಗೊಳ್ಳುವುದು ॥ ೮೦ ॥

ಭಸಿತ ಮಹಿಮೆಯ ಪೇಳ್ವಡಾರಿಗೆ
ವಶವೆ ಪನ್ನಗರಾಜಗರಿದೆನ
ಲುಸುರಲಾನೆನಿತರವ ಸುಮಶರ ಹರನು ಧರಿಸುವನ್ನೆ
ಪೆಸರುಗೊಳಲಾ ಭೂತಿ ಸಂತತ
ನಸಿವುದದು ಭವಶಿದ್ಧಿ ಸಂಪದ
ವಿಸರವೆಲ್ಲಕೆ ಮೂಲ ಚಿದ್ವಿಭೂತಿ ತಾನಾಗಿ ॥ ೮೧ ॥

ಪರಮ ವಿಭೂತಿದಕೆ ಧರೆಯೊಳು
ಸರಿಯುದಾವದು ಸುಜನ ದುರ್ಧರ
ಬರಹ ಕೆಡಿಪದು ತನುಕರಣ ತಶಿವಿಮಲವೆನಿಸುವದು
ಕರುಣ ಮನ ಕೂಡಿಸುತ ಸಂಪ
ತ್ಕರವ ನೀವುದು ಶ್ರೀ ವಿಭೂತಿಯು
ನಿರುತದಿಂದಣಿಮಾದಿ ಸಿದ್ಧಿಗಳೊದಗಿ ಕೂಡುವವು ॥ ೮೨ ॥

ದೇವ ಮುನಿಸುರ ರಾಕ್ಷಸಾದಿಯು
ಜೀವ ಮೊದಲಾಗಿಹವಿವೆಲ್ಲಕೆ
ಶ್ರೀ ವಿಭೂತಿಯು ಸುಪ್ರತಿಷ್ಠೆಯನಿತ್ತು ಪಾಲಿಪುದು
ಆವಕಾಲದಲಾವ ತಲದಲಿ
ಪಾವನತೆಯಂಗೈವುದಿದುವೇ
ಸಾವಧಾನದಿ ಧರಿಸೆ ಕಾರಣ ಪೂರಣಂ ನಿಜವು ॥ ೮೩ ॥

ಭೂತಪತಿದ್ವಯ ತೃತಯ ಮುಖದಿಂ
ಜಾತಸುರಭಿ ಸೂಸೀಲೆ ಸುಮನೆ ಪ್ರ
ಖ್ಯಾತ ನಂದೆಯು ಭದ್ರೆಗೋಮಯದಿಂದ ಸುಭಸ್ಮ
ಭೂತಿ ಭಸಿತಃಕ್ಷಾರ ರಕ್ಷೆಗ
ಳೋತುಮಿವು ಪಂಚೊಗೆದ ವೈಗುಣ
ಪೂತ ಶಿವಲಿಂಗಾತಿಶಯ ಶಿವ ಭಕುತಿ ಸಂಪ್ರೀತಾ ॥ ೮೪ ॥

ಧರಿಸಲಿಕೆ ಐಸಿರಿಯು ತೇಜವು
ದುರಿತ ಭಸ್ಮಂ ಭಸ್ಮದಿಂದು
ರ್ಧರ ಮರಣ ವಿತ್ಕ್ಷಾರದಿಂ ಮರುಭೂತಪಸ್ಮಾರ
ಗರಳ ಭಯವುರಗಾದಿ ರಕ್ಕಸ
ರರಿಭಯಂ ಹರ ರಕ್ಷೆಯಿಂದಂ
ಪರಮ ಗಣ ಪದವಿಯದು ದೊರೆವದು ನಿರುತ ನೀ ನಂಬೆ ॥ ೮೫ ॥

ಮುನಿ ಕಶ್ಯಪಾಗಸ್ತ್ಯ ಗೌತುಮ
ನನುಮಿಷರು ಜಮದಗ್ನಿ ವರಶುಕ
ಮುನಿ ಕಪಿಲ ಕೌಂಡಿಲ್ಯ ಕಣ್ವ ದಧೀಚಿ ದುರ್ವಾಸ
ಸನುತ ಭೂತಿಯ ಮಹಿಮೆಯಿಂ ಜೀ
ವನ ಪಡೆದರವರ್ಮೂರು ವ್ಯಾಳ್ಯೆಂ
ದೆನುತ ಪೊಗಳ್ವದು ಮನುತ್ರಿಯಾಯುಷ್ಯೆಂದು ನಿಗಮದೊಳು ॥ ೮೬ ॥

ಮತಿಯುತನೆ ಕೇಳ್ಪೂರ್ವಕಥೆಯಂ
ಕಥಿಸುವೆನು ವಾಶಿಷ್ಟ ಋಷಿಗಳ
ಮತದಿ ಮೆರೆಯುವನತಿ ಧನಂಜಯನೋರ್ವನಿರಲವಗೆ
ಸತಿಯರಿರೆ ಶತ ಸಂಖ್ಯೆ ಬಹುಸುತ
ಸತಿ ಹಿರಿಯಳುದರದಲಿ ಕರಣನು
ಚತುರವನ ಸತಿಯಳು ಶುಚಿಸ್ಮಿತೆಯೊಡನೆ ಪರಿಣಮಿಸಿ ॥ ೮೭ ॥

ಅತಿಸುಖದಿಮಿವನಿರುತಿರಲ್ಕಾ
ಮತಿ ಬರುಡದಾಯಾದ್ಯರೆಲ್ಲರೂ
ಖತಿಗೊಳುತ ಜತೆಗೊಂಡ ಸೂಯ್ಕದಿ ಸತತ ಕಾಡುವರು
ಕ್ಷಿತಿಯ ಜನಗಳಲೀ ಗುಣವ ಸಿ
ದ್ಧತೆಯಗೊಂಡಿರುತಿರ್ಪುದಿದು ನಿಜ
ಯತಿಗಳೋಳ್ಳೀಗಾದರಿದಕೇಂ ಗತಿಯೊ ಸದ್ಗುರುವೆ ॥ ೮೮ ॥

ಜ್ಞಾನದೊಳು ವರರೂಪದೊಳು ಸ
ಸ್ಮಾನದೊಳಗಿವಗಾರು ಸರಿಯು ಸ
ಮಾನರಿಲ್ಲೆಂಬುವದದೊಂದವರಿಂಗೆ ಯತಿ ಬೇನೆ
ಮೇಣಿವನ ಸತಿ ಗುಣವದತಿಶಯ
ಮಾನಿಯೆಂಬುವದೊಂದು ಕೇಣವು
ಪ್ರಾಣಗೊಳ್ವನಕೊಂಡು ಸುಖವಂ ಕಾಣೆವೆನುತಿಹರು ॥ ೮೯ ॥

ಪಿಕನ ಬಾಧಿಪಕಾಕನಿಕರವೊ
ಚಕಿತ ದಿನಮಣಿ ಪಳಿವ ಗೂಗೆಯೊ
ಶುಕನ ಹಿಂಸಿಪ ದುರ್ಬಡಾಲವೊ ಮಚ್ಛ ಮೃಗಗಳನು
ಚಕನೆ ಕೊಲ್ಲುವ ಬಕವೊ ಬಾಣವೊ
ನಕುಲ ಬಂಧಿಪ ಸರ್ಪ ಬಳಗವೊ
ಪ್ರಕಟ ಕರಣನ ಕಾಡುತಿರ್ದರು ಕುಟಿಲ ಕುಚ್ಛಿತರು ॥ ೯೦ ॥

ಖಳರ ಕಾಟಕೆ ತಾಳದಾಪೋ
ಬಳ ಪುರದ ವರ ಪಾಪನಾಶಿನಿ
ಯೊಳುಸ್ನಾನವಗೈದು ಶಿವನಿಳಯದೊಳು ಲಿಂಗವನು
ಬಲವರುತ ನರಸಿಂಹ ದೇವನ
ಬಳಿಗೆ ಪೋಪೆಡೆಯೊಳಗೆ ಮುನಿ ಕುಲ
ತಿಲಕನೋರ್ವನು ಫಲವಸುಮರಸಗೊಯ್ಯುತಿರೆ ॥ ೯೧ ॥

ಶಳಿದುಘ್ರ್ರಾಣಿಸಲಾಗ ಕರಣನ
ಹೊಲಸು ನಡತೆಯ ಕಂಡು ಮುನಿ ಬಲು
ಮುಳಿದು ನೊಣ ಜನ್ಮದಲಿ ನೀ ಶತವರುಷ ಬಾಳೆಂದ
ಫಳಿನವ ಬಂದಾಗ ಶುಚಿಸ್ಮಿತೆ
ಯಳಿಗೆಯದನೆಲ್ಲರುಪಿಯಾಕ್ಷಣ
ದೊಳಗೆ ನೊಣವಾಗುತಲಿ ಪಾರಲು ಕಂಡು ಮರುಳಡಸಿ ॥ ೯೨ ॥

ಹಣೆಯದೆಯು ಬಡುಕೊಳುತ ಧೊಪ್ಪನೆ
ಮಣಿದು ಭೂಮಿಗೆ ಬೀಳುತೇಳುತ
ಲಿನಿಯನ ಸುಗುಣಗಳನು ಕೊಂಡಾಡುತಲಿ ಶೋಕಿಸುತೆ
ನಿನಗೆ ಮತಿ ಹೀನಾಯ್ತು ಮುಂದಿ
ನ್ನೆನಗೆ ಗತಿ ಸರಿದ್ಹೋಯ್ತು ಮತ್ತೆಯು
ತನುಭವರು ಮೊದಲಿಲ್ಲ ಧನಿಕನೆಯೆಂದು ಬಾಯ್ಬಿಟ್ಟು ॥ ೯೩ ॥

ಭೂರಿ ಶೋಕದಿ ಚೀರಿ ಬಲು ಬಾ
ಯಾರಿ ಬಳಲುತ ಮಣ್ಣು ಕೈಯ್ಯಿಂ
ತೂರಿ ಶಾಪವನಿತ್ತು ಮುನಿ ಕಿಡಿಗೇಡಿ ಸತಿಯಳಿಗೆ
ಸೇರಲೀ ಹಾಡೆಂದು ಸುಯ್ಯುತ
ಹಾರಮಣಿ ನಿನ್ನಗಲಿ ಧರೆಯೊಳು
ಮಾರಿ ತೋರಲಿಯೆಂತು ಗಿರಿಯಿಂದುರುಳಿ ಸಾಯುವೆನು ॥ ೯೪ ॥

ಎಂದು ಪತಿ ಸೊಣ ಪಾರಿದತ್ತಂ
ಸುಂದರಾಂಗಿಯು ಪೋಗಿಯು ಪೋಗಿ ಕಾಯು
ತ್ತಂದು ಪತಿ ಕಾಯಕ್ಕಪಾಯವನೊಂದುಗೊಡದಲ್ಲೆಯು
ಚಂದಿರಾನನೆ ಹೀಗೆ ಮಿರುತಿರ
ಲೊಂದುದಿನ ದಾಯಾದ್ಯ ಜನರುಂ
ಸಂಧಿ ಸಾಧಿಸಿ ಕೊಂದರಾಗಾ ಸೊಣವ ಖತಿಯಿಂದೆ ॥ ೯೫ ॥

ಸಾಯಲದು ಕಂಡಾಗ ಶುಚಿಸ್ಮಿತೆ
ಬಾಯಿಯದೆ ಬಾಯಿಯನು ಬಡಕೊಂ
ಡಾಯಕಳು ನಾನೇಕೆ ಸಾಯದಲುಳಿದೆನ್ನೆ ಶಿವನೆ
ಕಾಯೊ ನೀ ಎನ್ನಂಗದೊಡೆಯನ
ಕಾಯದಿರ್ದರೆ ಕೊಲ್ಲು ಎನ್ನಂ
ನ್ಯಾಯವಲ್ಲವು ನಿನಗೆ ಗಿರಿಜಾರಮಣನತ ಕರುಣಾ ॥ ೯೬ ॥

ದೇವ ನೀ ಘನ ದೇವ ಭಕ್ತರ
ಕಾವ ಬಿರಿದಿರಲೆನ್ನ ಮರತಿಯೊ
ಪಾವನಾಂಗನು ನೀನು ಪತಿವೃತೆಯರಿಗೆ ಸಹಕಾರಿ
ದೈವವೆನುತಿಹರಯ್ಯೋ ಶಿವ ಶಿವ
ಮೀ ವಿಧವೆಯಿಂನಾರ ಬಲದಿಂ
ಭೂವಿಯೊಳು ಮುತ್ತೈದೆಯೆನಿಸಳು ಮೃತ್ಯುಂಜಯ ಪೊರೆಯೈ ॥ ೯೭ ॥

ಕಂದುಕಂಧರ ನಿನ್ನ ಸುಖವಂ
ಕಾಂಬೆ ನಾ ನಿನ್ನೆಂದಿಗಂ ಬಾ
ಶುಂಭರೀ ಪತಿ ಕಷ್ಟ ಕೊಟ್ಟೆನ್ನ ವತಿಯ ನುಂಗಿದರು
ಅಂಬುಜೋದ್ಭವನೆನ್ನ ಘಣೆಗಿದ
ನಂಬರೆದನೇನಕಟ ರನ್ನದ
ಬೊಂಬೆ ನೀನಂದಂದು ಕಂಬನಿ ಸುರಿದು ಪಂಬಲಿಸಿ ॥ ೯೮ ॥

ಅತಿಶಯುವ ಶೋಕಿಸುತೆ ಸತಿತಾಂ
ಮೃತ ಪತಿಯು ದೇಹವನು ಕರದೊಳು
ಹಿತದಿ ಮಡುಗಿಸುತಾಗರುಂಧತಿ ಬಳಿಗೆ ಬರಮಾಡಿ
ಪತಿವ್ರತೆಯೆ ನೀ ಎನ್ನ ತಾಯಿಯೆ
ಪತಿಯ ಹಾಢ್ಹೀಗಾಯಿತೆನೆ ತ
ತ್ಸತಿಯರುಂಧತಿ ಕೇಳಿ ಪೂರ್ವದ ಚರಿತೆ ಎಲ್ಲವನು ॥ ೯೯ ॥

ಯಾತಕೀ ಚಿಂತೆಯನು ಬಿಡು ಬಿಡು
ಗೌತುಮಾಗಸ್ತಾದಿ ಕಸ್ಯಪ
ಪೂತ ಜಮದಗ್ನಿಗಳು ಪಡೆದ ಸುಭೂತಿ ಬಳಿಯಿರಲು
ನಾತಳುವದಸುಪಡಿವೆನೆಂದಾ
ನಾಥನ ಸುವಿಭೂತಿಯಡಗ್ಗೈ
ಯ್ಯಾತಳದೊಳಿಟ್ಟದಕೆ ಪಂಚಾಕ್ಷರಿಯ ಜಪಿಸುತಲಿ ॥ ೧೦೦ ॥

ತ್ರ್ಯಂಬಕಂ ತ್ರಿಯಾಯುಷಂ ಮನು
ವೆಂಬುದಂ ಜಪಿಸುತಲಿ ನೊಣಶವ
ಕಂ ಭಸಿತ ತಳಿಯಲ್ಕೆ ಗಂಡನಸು ಬಂದುದಂ ಕಂಡು
ಸಂಭ್ರಮದಿ ನಲಿದಾಡಿ ಪಾಡುತ
ಲಂಬೆ ನಿನ್ಪಾದಾಂಬುಜವನೆರೆ
ನಂಬಿ ಪಾವನಳಾದೆನೆಂಬುತ ನುತಿಸಿ ಮುದವೆರೆಸಿ ॥ ೧೦೧ ॥

ನೊಣವದನು ಕರತಳದಲಿರಿಸುತ
ಲುಣುತಿನುವದಂ ಮರೆತು ಹಗಲಿರು
ಳೆಣಿಸದಾಸರು ನಿದ್ರೆ ನೀರಡಿಕೆಗಳ ಸಂಕಟದ
ದಣುವನರಿಯದೆ ಸಲಹುತಿರೆ ಕೆಲ
ದಿನಸವಿಯೆ ಕೇಳುತ್ತ ಮತ್ತಾ
ನೊಣವು ಕೊಂದರು ಮೊದಲಿನಂತಾ ಬಣಗರೈತಂದು ॥ ೧೦೨ ॥

ಮನ್ನಾಥ ನನ್ನಗಲಿಸಿದರೀ
ಕುನ್ನಿಗಳು ತಾವಿನಿತು ಎನ್ನನು
ಬೆನ್ನುಬಿಡದಲೆ ಬನ್ನಕೊಡುತಿಹರಲ್ಲ ಹಾ ವಿಧಿಯೆ
ಇನ್ನು ನನಗಾರುಂಟು ಗತಿಮತಿ
ಎನ್ನುತಳುತಲಿ ಪೊರಟುಬಂದಳು
ಮುನ್ನಿನಂತಾ ಸತಿಯರುಂಧತಿ ಬಳಿಗೆ ಬರಮಾಡಿ ॥ ೧೦೩ ॥

ತಾಯೆ ನೋಡೌ ಪ್ರೀಯನನು ಮ
ತ್ತಾಯಗೊಳಿಸಿದರಂಮ ದುರ್ಗುಣ
ಸೂಯ ದಾಯಾದ್ಯರುಗಳಿವಕೇಂ ಗತಿಯು ನೀ ಕಾಯೌ
ತೋಯಜಾನನೆ ಎಂದು ಪಲಬುತ
ಬಾಯಿಬಿಡುತಿರು ಸಮಯಕಾ ಮುನಿ
ರಾಯ ಮಹಿಮ ದಧೀಚನೆನ್ನುವ ಸನ್ನುತಂ ಬಂದ ॥ ೧೦೪ ॥

ಬರಲು ಮುನಿವರಗೆರಗತಾಸನ
ವಿರಿಸಿ ಕುಳ್ಳಿರಿಸುತಲರುಂಧತಿ
ವರಪದವ ತೊಳೆಯುತ್ತ ಸತ್ಕರಿಸಲ್ಕೆ ಕೈಕೊಂಡು
ಪರಕೆಯಿತ್ತವಳಾರು ರೋದಿಪ
ಪರಿಯದೇಸಿಹುದೆಂದು ಕೇಳಲು
ಮರರೆ ಎನ್ನಂ ಕೇಳ್ವಿರೈ ತಾವರಿಯಿರೇನಿವಳು ॥ ೧೦೫ ॥

ಕರಣಸತಿ ಮಹಕರುಣೆ ಗಂಡನ
ಹರಣಗೊಳೆ ದಾಯಾದ್ಯ ಜನರುಂ
ಮರುಗುತಿರುವಳು ಗತಿಯು ತನಗಾರಿಲ್ಲವೆನುತಿಂತು
ಒರಲುವಳು ತಾ ಹೊರಳುವಳು ನೆಲ
ಕುರಳುವಳು ಕಂಬನಿಯ ಸುರಿವಳು
ಕರುಣ ಗೈಯ್ಯಲುಬೇಕು ತರುಣಿಯೊಳೆಂದು ಕರಮುಗಿಯೆ ॥ ೧೦೬ ॥

ಸತ್ತ ಮುನಿಸುತರೆಲ್ಲರಿಗೆ ಅಸು
ವಿತ್ತು ಮೂವ್ವಾಳ್ಯದಲಿ ಬಂದಪ
ಮೃತ್ಯು ಪರಿಹರಿಸಿರ್ದ ಭಸಿತೆನ್ನುತ್ತರಿರುತಿರಲು
ಅತ್ತಪಳದೇಕಿವಳ ತೋಪಿಪೆ
ನುತ್ತುಮೆಯೆ ಕೇಳೆಂದು ಸ್ನಾನವ
ನರ್ಥಿಯಿಂಗೈಯ್ಯುತ್ತ ಕೊಡುತ್ತುತ್ತುಮಾಸನದಿ ॥ ೧೦೭ ॥

ಯರಳೆ ಮುದ್ರೆಯದೆತ್ತಿ ಭೂತಿಯ
ಭರದಿಯಡ ಕರತಳದಲಿರಿಸುತ
ಲಿರದೆ ಬಲಹಸ್ತಂದು ಮುಚ್ಚುತ ಪ್ರಣುತವಂಗೈದು
ಪರಮ ಪಂಚ ಪ್ರಣಮ ಘಟ್ಪ್ರಣ
ವಿರದೆ ಶತರುದ್ರೀಯವರ ಮನು
ಹರತ್ರಿಯಾಯುಷಮೆಂದು ರಸನೆಯ ಕೊನೆಗೆ ತಂದೆಲ್ಲ ॥ ೧೦೮ ॥

ಮನುಗಳ ವನಷ್ಟೋತ್ತರಂ ಶತ
ವೆಣಿಸುತವನೊಂದಂದರಂತೆಯು
ನೊಣಶವಕೆ ವಿಭೂತಿಯನು ತಳಿಯುತಿರೆ ತತ್‌ಕ್ಷಣಕೆ
ಹೆಣಕೆಯಸುಬರುತಂದು ನರತನು
ಮಿನಗುತಿರೆ ಶತಕೋಟಿ ರತಿಪತಿ
ಮನಸಿಜನ ತೆರನೆಸೆದು ಮುನಿಪದ ವನಜಕೆರಗಿದನು ॥ ೧೦೯ ॥

ಮುನ್ನಿನಿಂ ರೂಪಾತಿಶಯಮೆಂ
ದೆನ್ನುತಂ ಸತಿಪತಿಯ ನೋಡುತ
ತನ್ನ ಶಿರಯುತಿ ವರನ ಪದಕಂ ಬಾಗಿ ನಮಿಸುತಲಿ
ಸನ್ನುತಾಮಳ ದೇವ ನಿನ್ನಿಂ
ಧನ್ಯಳಾದೆನು ಎಂದು ಭಜಿಪಳ
ಮನ್ನಿಸುತ ಮುನಿವರನು ತನ್ನಾಶ್ರಮಕೆ ಪೋದನುಮಾ ॥ ೧೧೦ ॥

ಕರಣ ಸತಿ ಶುಚಿಸ್ಮಿತೆಯ ಕೂಡುತ
ಮರಣ ಹರಭಸಿತವನು ಬಿಡದಲೆ
ನಿರುತ ಧರಿಸುತ ಹರನ ಪದವಂ ಕಂಡರತಿ ಮುದದಿ
ತರಳ ಶಿವಲಿಂಗೇಶ ನೀಕೇಳ್
ಪರಮ ಭೂತಿಯ ಮಹಿಮೆಯಿದನತಿ
ಹರುಷದಿಂ ಪೂಸುತ್ತ ಚಿರದಿನಬಾಳು ಶಿವನಾಳು ॥ ೧೧೧ ॥

ಗೌತಮನ ಮದುವೆಯಲಿ ಸುರಜನ
ವ್ರಾತಮಹಿಲ್ಲೆಯ ನೋಡಿ ತಾವ್ಕಾ
ಮಾತುರಂ ತಳಿದರ್ತಪೋದನ ಕಂಡು ಶಾಪಿಸಿದ
ಆತ ತಕ್ಷಣ ಕರವು ಮಡಗಲು
ಪೂತ ಮುನಿ ದುರ್ವಾಸಗರು ಹಲು
ಪ್ರೀತಿಯಿಂ ಕೇಳುತ್ತ ಭೂತಿಯ ಧರಿಸುತರು ವಿತ್ತಾ ॥ ೧೧೨ ॥

ಕುಸುರನೋರ್ವನು ಚೋರತನದಿಂ
ಮಸಣದಿರುತ ಸುಗಳಿವಪೊಳ್ತುಂ
ಸಸಿನೆ ಶುನಿ ಚಿಡ್‌ಭಸಿತ ತುಳಿದವನ್ನಣೆಯ ಮೆಟ್ಟಲಿಕೆ
ಶಶಿಧರನ ಚರರಾಗ ಕಾಣುತ
ಬಿಸಿಗದಿರ ಸುತನೊಶಕೆ ಕೊಡದಲೆ
ಭಸಿತ ಫಣೆತೋರುತ್ತ ಹರಪುರಿಗೊಯ್ದರೆಲೆ ತರುಳಾ ॥ ೧೧೩ ॥

ಭಸಿತವಿಲ್ಲದ ಹಣೆಯು ಘೋರ್ಡೋಣಿ
ಭಸಿತವಿಲ್ಲದ ಕಣ್ಣು ಸುಲಿಗಂ
ಭಸಿತವಿಲ್ಲದ ಎದೆಯು ಕಲ್ಲೆದೆ ಭಸಿತವಿಲ್ಲದಲೆ
ಎಸೆವ ರಟ್ಟೆಯು ನಾರಜಟ್ಟೆಯು
ಭಸಿತವಿಲ್ಲದ ಟೊಂಕು ಶುನಿಟೊಂ
ಭಸಿತವಿಲ್ಲದ ಪೊಟ್ಟೆ ಕುಂಬಳಸೊಟ್ಟೆ ತೊಗಲ್ಮೊಟ್ಟೆ ॥ ೧೧೪ ॥

ಭೂತಿಧರಿಸದೆ ಮಾತುಬರೆ ತಾ
ನೋತು ಕಲಿತರೆ ಯಾತಕದು ಘಟ
ರೀತಿಯಿಲ್ಲದ ನುಡಿಯು ದುರ್ಘಟ ಕೋತಿ ಕುಣಿದಾಟ
ಏತಕವ ತಾಭಾರ ಜಗದಲಿ
ಜಾತನಾಗಿದು ನಿಷ್ಫಲಂ ಸರಿ
ನೀತಿಯುತ ನೀನಾಗಿ ಭಸ್ಮವನಾತು ಕೊಂಡಿಹುದೈ ॥ ೧೧೫ ॥

ಗುರುವೆ ಭಸಿತದ ಮಹಿಮೆಯರಿದೆನು
ಮಿರದೆ ರುದ್ರಾಕ್ಷಿಯದ ಘನವನು
ಕರುಣಿಸುತ ವಿಸ್ತರಿಸು ಪುಣ್ಯಾಕಾರ ಭವದೂರಾ
ಶರಣ ಸಜ್ಜನ ಬಂಧು ತ್ರೈಮಲ
ಹರಣ ಸದ್ದಯ ಕರಣ ಸುಸ್ಥಿರ
ಶರಣು ಶರಣೆಂದೆರಗಿದನು ಸಾಷ್ಟಾಂಗ ಸಮ್ಮುದದಿ ॥ ೧೧೬ ॥

ಮಗನೆ ಹರನಾಕ್ಷಿಯ ಸುಮಹಿಮೆಯು
ಬಗೆಯ ಪೊಗಳಲ್ಕಾಗದಿರಲುಂ
ದೃಗುಶತಾಧಿಪ ಜಗಿದು ರಸತಳದೊಳಗೆ ತಲೆಬಾಗಿ
ಮುಗುಧನಾಗಿರುತಿರುವೆನೆನಲದು
ಜಗದಿ ಬಣ್ಣಿಪುನಾವನವ ಶಿವ
ದೃಗುಮಣಿಯ ಘನ ಪೇಳಲೆನ್ನೊಶವಲ್ಲ ತಿಳಿ ಬಾಲಾ ॥ ೧೧೭ ॥

ನೋಡಿ ಶಿವನಾಕ್ಷಿಯನು ಸ್ಪರ್ಶನ
ಮಾಡಿ ಮಿಗೆ ನಲಿದಾಡಿ ಭಕ್ತಿಯ
ಗೂಡಿ ಘನ ಕೊಂಡಾಡಿ ಪ್ರೇಮದಿ ಪಾಡಿ ಪೂಜಯನು
ಮಾಡಿ ಸಂತೋಷೂಡಿ ಶರಿರದಿ
ಸೂಡಿ ಚರಿಪರ ಪಾಪ ಕಿತ್ತೀ
ಡಾಡಿ ಸತತಂ ಬೇಡಿದುದ ಕೈಗೂಡಿಸುತ್ತಿಹುದು ॥ ೧೧೮ ॥

ಮಾರಹರವೃಗುಗಳಲಿ ಪುಟ್ಟಿದ
ಚಾರು ರುದ್ರಾಕ್ಷಿಗಳ ಮಹಿಮೆಯು
ಸಾರುವೆನು ಶಿವಲಿಂಗ ಪೂರ್ವದ ಕಥೆಯನಾಲಿಪುದು
ಧಾರುಣಿಯ ನೇಪಾಳದೊಳು ಕಿರಿ
ಯೂರು ವೇದನಪಳ್ಳಿಯಲಿ ಮಹ
ಕ್ರೂರ ಬೇಡನುಮಿರುತಲೊಂದಿನ ಘೋರ ಕಾನನದಿ ॥ ೧೧೯ ॥

ಬೇಟೆಯಾಡುವ ಕಾರಣಂ ಬಲೆ
ಗೂಟ ಕುಕ್ಕುರ ಖಡುಗ ಕತ್ತಿಯು
ನೀಟು ಬಿಲ್ಬಾಣೇಟೆಗಳ ಧರಿಸುತ್ತಲಗೆಬಗೆಯ
ಓಟದಿಂ ಬರುತಿರಲು ಬಿಸಿಲಿನ
ಕಾಟವಾಗುತ ಬಾಯಿಬತ್ತುತ
ನೋಟದಿಂದೀಕ್ಷಿಸುತ ಬಂದನು ರುದ್ರಮಣಿ ಮರವ ॥ ೧೨೦ ॥

ನೆಳನಲಿ ಕುಳಿತಾಗ ಶ್ರಮವನು
ಕಳೆದು ನೋಳ್ಪನಿತಕ್ಕೆ ಯಾ ಮರ
ಬಳಿಯ ಬಿದ್ದಿರಲೊಂದುಸಲೆ ರುದ್ರಾಕ್ಷಿಯನು ಕಂಡು
ಪೊಳೆಯುತಿದೆಯಿದು ತಾರಿಮಣಿಯಂ
ವೆಳಸಿ ಮನದೊಳುಕೊಂಡ ತಾನದು
ಗಳದೊಳುಂ ಕಟ್ಟುತ್ತೆ ಮುಂದಕೆ ಪೋಗಲನಿತರಲಿ ॥ ೧೨೧ ॥

ಚರಿಸುತೆದುರಂ ಬಂದ ಕಿಟಿಯಂ
ಭರದಿ ಬೇಡನು ಕಂಡು ತನ್ನಯ
ಕಿರಬನನು ಬಿಡೆ ಬೇಗ ಬೆನ್ನಟ್ಟುತಲಿ ಪಂದಿಯನು
ಮೆರಗಿ ಪಿಡಿವನಿತರಲಿ ಕಿಟಿಯದು
ಹೊರಳಿ ತನ್ನೊಢ್ಣ್ರ ಕೋರೆಯಿಂದಂ
ತರಿಯೆ ಕಿರಬನು ಹರಣ ಬಿಡುತಾಗುರುಳೆ ಧರಣಿಯೊಳು ॥ ೧೨೨ ॥

ಬೇಡನತಿ ರೋಷದಲಿ ಕಾರ್ಮುಕ
ಕ್ಡೊಡಿ ಶರಗಳ ಕರ್ಣಪರಿಶಳೆ
ದಾಡಿ ಬಿಡೆ ಬಡೆ ಬಾಣರೋಷದಿ ಕಿಟಿಯು ಭರಮಾಡಿ
ದಾಡಿಯಿಂ ಪಾಯ್ದವನ ಕೊಲ್ಲುತ
ಗಾಢನದು ಮಡಿಯಲ್ಕೆ ಯಮಸಾ
ಳ್ನೋಡಿ ಮೂರರ ಪ್ರಾಣ ಬಿಡುತೊಯ್ಯುತಿರೆ ಯಮಪುರಕೆ ॥ ೧೨೩ ॥

ಕಂಡು ಶಿವದೂತರುಗಳಡ್ಡಂ
ಗೊಂಡು ನಿಲ್ಲುತ ಕೊಡುವುದೆನೆ ಯಮ
ಗುಂಡಕೊಯ್ದೆವು ಕೊಡುವದಿಲ್ಲೆನೆ ಬಿಡೆವು ನಾವೆನುತೆ
ಕೊಂಡು ಬಲು ಹಿಂದೊಯ್ಯೆ ಕಾಲನ
ಕಂಡು ಪೇಳಿದರಾಗ ದೂತರು
ಪುಂಡ ಶಿವನಾಳುಗಳು ಮಾಡಿದ ಪರಿಯನೆಲ್ಲವನು ॥ ೧೨೪ ॥

ಕೇಳಿ ರವಿಸುತ ಕೋಪವಂನತಿ
ತಾಳಿ ಸೇನಾಧಿಪರ ಕಳುಹತ್
ಶೂಲಿಯಾಳುಗಳವರ ಸದೆಬಡೆದಾಗ ಕಳುಹಲ್ಕೆ
ಭಾಳ ಕೋಪದಿ ಯಮನೆ ತಾಬರೆ
ಭಾಳನೇತ್ರನು ಸುಟ್ಟು ಯಮನಾ
ಕಾಲದೊಳು ಶು.ಬೇಡ ಕಿಟಿಗಾರುದ್ರಗಣ ಪದವ ॥ ೧೨೫ ॥

ನಂದಿಕೇಶನ ಮುಖದಿ ಕೊಡಿಸು
ತ್ತಂದು ಸುಖದಿಂದಿರಲು ಮು.ಗಳ
ವೃಂದವೈತಂದಾಗ ಶಿವಪದಕ್ಕೊಂದಿ ಬಿನ್ನೈಪೆ
ಬೆಂದ ಯಮ ಪ್ರಾಣವನುಮಿತ್ತನು
ಕಂದುಕಂಧರ ಕೇಳುತ ನಯುನೆ
ಮುಂದೆ ಮತ್ತೊಂದಿದೆ ಸುಮಹಿಮೆಯನುಸುರುವೆನು ಮುದದಿ ॥ ೧೨೬ ॥

ದೇಶ ನೇಪಾಳದಲಿ ಮಣಿಪುರ
ವಾಸ ಭೂಸುರ ಮಡದಿ ಯಮುನೆಯು
ನಾಶವಾಗಲು ಪತಿಯು ಜಾರಿಣಿಯಾಗಿ ಚರಿಸುತಲಿ
ಪೋಷಿಸುತ ತನು ನೀಚ ಜನ ಸಹ
ವಾಸದಿಂ ಧನ ಕೂಡಿಸಿರಲು ಕು
ವಾಸಿನಿಗೆ ಜಾಮಿತ್ರನೆಂಬುವನೋರ್ವ ಸುತನುದಿಸೆ ॥ ೧೨೭ ॥

ಮರದ ಪರಿಫಳವಿರುವದದುಮೀ
ಧರಣಿಯೊಳು ಸಿದ್ಧೆಂಬ ನಾಣ್ನುಡಿ
ತೆರದೊಲವ ವರ ಯೌವ್ವನದಲತಿ ಜಾರತನ ಕಲಿತು
ಮಿರುವ ದ್ರುವ್ಯವನೆಲ್ಲನಾಶಿಸು
ತಿರಲು ಯಮನೆಯು ಸಿಟ್ಟುಗೈಯಲು
ಶಿರವ ತರಿದಾಕೆಯನು ಕೊಲ್ಲುತ ಜಾರತನದಿಂದ ॥ ೧೨೮ ॥

ಮಿರಲು ಘನವಂ ತೀರೆ ಹರಣವ
ಪೊರೆಯಲಿಕೆ ಹಣವಿಲ್ಲದಾಗಳು
ಮರಗುತಲಿ ನೇಪಾಳ ಪತಿಯರಮನಿಗೆ ಕನ್ನವನು
ಭರದಿ ಪಾಕಲು ರಾಜದೂತರು
ತರಿಮುಮವನಂ ರುದ್ರಭೂಮಿಯೊ
ಳಿರವೆ ಒಗೆದರು ಚೋರತನ ಸುಖಿಮುಂಡಿ ನೀನೆಂದು ॥ ೧೨೯ ॥

ಉದಯದಲಿ ಯಮನಿಪಸುತೆಯಳು
ಪದುಮಲೋಚನೆ ರತ್ನಮಾಲಿನಿ
ಸದಯ ಶಿವತೀರ್ಥದಲಿ ಸ್ನಾನವಸೊದಗಿಸಲು ತಾನು
ಸುದತಿಜನ ದಾಸಿಯರ ಕೂಡುತ
ಮುದದಿಯುಪವನಕಾಗ ಬಂದುಂ
ಚದುರೆ ತನ್ನಯ ಕಂಠದಿಹ ರುದ್ರಾಕ್ಷಿಮಾಲೆಯನಂ ॥ ೧೩೦ ॥

ತೆಗೆದು ಪೂವ್ವಿನ ಗಿಡಕೆ ಪಾಕುತ
ಸುಗುಣೆ ಸ್ನಾನವಗೈಯ್ಯುತಿರಲುಂ
ಬಗೆದು ವಾಯಸಮುಖದಿ ಕೊಂಡೊಯ್ಯುತ್ತ ಮಸಣದಲಿ
ಕುಗುಣ ಹೆಣಜಾಮಿತ್ರನ್ನಣೆಯಲಿ
ವಗೆದು ಪೋಯಿತು ಕಾಕವಾಗಲು
ಮಗಜೆಪ್ರಿಯನ ದೂತರಿದನರಿದಾಗ ಬರುತಿರದೆ ॥ ೧೩೧ ॥

ರುದ್ರಮಣಿಸರ ಮುಖದಿ ಬಿದ್ದಿರೆ
ರುದ್ರನಲ್ಲದೆ ಕ್ಷುದ್ರನಲ್ಲವು
ಮದ್ರಿಜಾಮಾತನ ಸುಪದಕಂ ಹೊದ್ದುವನುಮೆಂದು
ವೇದ್ಯಪುಷ್ಪಕದಿಂಸುತಲಿ ರಜ
ತಾದ್ರಿಗೊಯ್ದರು ಶಿವನು ಮೆಚ್ಚುತ
ರುದ್ರಗಣಪದವಿತ್ತ ಸುಗುಣ ಸಮುದ್ರ ಶಿವಲಿಂಗ ॥ ೧೩೨ ॥

ಧರಿಸಲಾರದೆ ಬರಿದೆ ಪಾಪದ
ಶರಧಿಯಲಿ ಮುಳುಗುತ್ತ ಮಡಿದಿಹ
ನರಗೆ ಗತಿ ನೈಮಿತ್ತ್ಯ ಕಾರಣಮಾಗಿ ಹರಪುರವ
ದೊರಕಿದುದು ಹರನಾಕ್ಷಿ ಮಾಲೆಯ
ನರಿದು ಧರಿಸಲುಮವಗೆಯಣೆಯಿ
ಲ್ಲರರೆ ಮೂಲೋಕದೊಳು ಧನ್ಯನು ಪುಣ್ಯಸಂಚಯನು ॥ ೧೩೩ ॥

ಜಾರೆ ರುದ್ರಾಕ್ಷಿಯನು ರಟ್ಟಿಲಿ
ಸೇರಿಸುತ ಜಾರನೊಳು ಸಂಗವ
ಪೂರಿಸುತಲಿರೆ ಪತಿಯು ಕಂಡು ಭಯರನು ಕೊಲ್ಲಲಿಕೆ
ಸೂರೆಗೊಂಡರು ಗಣಪದವನಾ
ಕೇರಳಾಧಿಪ ಸತಿ ಧರಿಸಿ ತ
ನ್ನಾರಮಣದು ವಿಕಾರಬಿಡಿಸುತ ರುದ್ರಪದವಾಂತರ್ ॥ ೧೩೪ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀ ಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀಸುಧೆ ಸಾಮ್ಯ ಕಾವ್ಯ
ಹರನ ಭಕ್ತರು ಕೇಳಿ ಸತ್ಫಲ
ದೊರಕೊಳಗುವಿಷ್ಟಾರ್ಥ ಸಿದ್ಧಿಯು ಪಂಚ ಸಂಧಿಯಿದು ॥ ೧೩೫ ॥

ಅಂತು ಸಂಧಿ ೫ಕ್ಕಂ ಪದನು ೪೮೦ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೬

ಪರಮ ಪಂಚಾಕ್ಷರಿಯ ತೀರ್ಥದ
ಚರಪ್ರಸಾದದ ಮಹಿಮೆಯನು ಗುರು
ವರನು ಪೇಳಿದ ಶಿಷ್ಯಗಾ ಕಥೆ ಭಕ್ತರಾಲಿಪುದು ॥ ಪಲ್ಲ ॥

ಇಂದುಶೇಖರ ನಂದಿವಾಹನ
ಇಂದಿರಾವರ ನಯನ ಪದಧರ
ಮಂದರಾಲಯ ಮುಂದುರಾಸನ ತಾತ ವಿಖ್ಯಾತ
ಬಂಧ ಭವಹರ ಸಿಂಧು ಸುರಶಿರ
ಕಂದು ಕಂಧರ ಕಾಲ ಸಂಹರ
ತಂದೆ ಶಿವಪುರ ಸಂಗತ್ರೈಪುರ ಭಂಗ ಶಿವಲಿಂಗ ॥ ೧ ॥

ತನಯ ಕೇಳ್ಗುರುಲಿಂಗ ಜಂಗಮ
ಸನುತಭೂತಿಯ ರುದ್ರಮಣಿಗಳ
ಘನತೆಯಂ ವಿಸ್ತರಿಸಿ ಪೇಳಿವೆನಿನ್ನು ಶಿವಮಂತ್ರ
ವಿನಯ ಭಾವದಿ ಸ್ಮರಿಸಿ ಮುಕ್ತಿಯ
ನನುಭವಿಸಿದರ ಚರಿತೆಯಂ ನಿಜ
ಮನದಿ ಕೇಳುತ ಪಠಿಸು ನೀನನುದಿನದಿ ಸಂತಸದಿ ॥ ೨ ॥

ಕೊಡುವ ಕೊಂಬುವ ವೇಳೆಯಲಿ ಗಡ
ನಡೆವ ನುಡಿವಲಿಯುಣುವಲುಡುವಲಿ
ಗಢನೆ ಲೇಖನಿ ಪಿಡಿದು ಲೆಕ್ಕವನೊಡನೆ ಲಿಖಿಸುವಲಿ
ಬಿಡದೆ ಹೊಲದೆಡೆರೆಂಟೆ ಕುಂಟೆಯ
ನ್ಹೊಡೆಯುತಿರಲೆಡೆಯನು ವಿಷಂ ಮನು
ನುಡಿವದೈ ಶಿವನಾಮ ಮೃಡ ಮಹಾದೇವನೆಂದಂದು. ॥ ೩ ॥

ಬಾಯಿನೋಯದು ನುಡಿಯ ತನಗದ
ಪಾಯವಾಗದುಮಾರರಿಂದಲಿ
ಸಾಹ್ಯವಾಗ್ವದು ರಾಯ ಮಂತ್ರ ನಮಃಶಿವಾಯೆಂದು
ಪ್ರಿಯದಿಂ ನುಡಿಯಲ್ಕೆ ಮುಕ್ತಿಗು
ಪಾಯವಾಗುತ ತನುತ್ರಯಂಗಳ
ಹೇಯವನ್ನೀಗಿಸುತ ಘನ ಗುರುರಾಯನೆನಿಸುವದು ॥ ೪ ॥

ಹರನ ಮಂತ್ರದ ಮಹಿಮೆಯಿಂತಾ
ನೊರೆಸಿ ಪೋಗ್ವದು ಬ್ರಹ್ಮಲಿಖಿತಂ
ಗರಳ ಸೇವಿಸಲಮೃತಪರಿಣಾಮಾಗುತ್ತ ವಳ್ಳುರಿಯ
ವರಜಲದ ತೆರ ತಣ್ಣಗಾಗ್ವದು
ದುರುಳ ಸರ್ಪಂ ಸರವಿಯಾಗ್ವದು
ಕರಡಿ ಪುಲಿ ಗೋಕರುವಿನಂತಾಗುವದು ನಿಶ್ಚಯವು ॥ ೫ ॥

ಕುಪಿತ ಕಾಪಟ್ಯವನು ಕೆಡಿಸುತ
ಸುಪಥದಲಿ ನಿಲಿಸುವದು ಸಂತತ
ವಿಪುಲ ಧನಧಾನ್ಯಾದಿ ಸಂಪತ್ತು ಕೃಪೆಯು ಗೈಯ್ಯುವದು
ಗುಪಿತ ಮಂತ್ರದ ಮಹಿಮೆ ಘನವಿದು
ತಪಕೆ ತಲೆಮಣಿಯಾಗಿ ಮೆರೆವದು
ಸಫಲಗೈವದು ಜನ್ಮಜಾಪಿಸೆ ಪರಕೆ ಪರನಹುದು ॥ ೬ ॥

ತನುವ ದಂಡಿಸಬೇಡ ವಾಸಿಪ
ಮನೆಯನಗಲಲಿಬೇಡ ಭ್ರಮೆಯಿಂ
ವನವ ಸೇರಲುಬೇಡ ಚರಿಸುವ ಮನವ ಕಟ್ಟುತಲಿ
ಘನತರದ ಗುಹೆಗಿರಿಯನಡರುತ
ಗೆಣಸು ಗಡ್ಡೆಯ ಸೇವಿಸುತ ಬಲು
ದಣಿಯದಿರು ನೀಸುಮ್ಮನೊಮ್ಮೆಯು ನುಡಿಯೆ ಗತಿಸಾಧ್ಯ ॥ ೭ ॥

ಚರಪದೋದಕ ಭಸ್ಮಮಂ ತಳೆ
ದಿರದೆಯೊಕ್ಕುದುಕೊಂಡು ಸುಸ್ಥಿರ
ಶರಣಸಜ್ಜನ ಪದ ಸವಿನಯದಿ ನಮಿಸಿ ಮುದವೆತ್ತು
ಕರಮನದಿ ಹರನಾಕ್ಷ ಮಾಲೆಯು
ಧರಿಸಿ ನಿಜ ಚರವರರ ಪೂಜೆಯು
ವಿರಚಿಸುತ ಲಿಂಗವನು ಭಜಿಪಂಗಿದುವೆ ಸಿದ್ಧಿಪುದು ॥ ೮ ॥

ಕೇಳು ಸುತ ಶಿವಲಿಂಗ ನಿನಗಾಂ
ಪೇಳುವೆನುಮಿದಕೊಂದು ಕಥೆಯಂ
ಚೋಳದೇಶದ ಭೂಪ ಚೋಳನು ವಾಮದೇವಾಖ್ಯ
ನೀಲಕಂಠನ ಭಕ್ತ ಪರಮು ದ
ಯಾಳು ಪ್ರಜೆ ಪಾಲಕನು ಸದ್ಗುಣ
ಶೀಲ ಹರಪದಲೋಲ ಭಕ್ತಿಯ ಮೂಲಕನುಕೂಲ ॥ ೯ ॥

ಭೂಮಿಪನ ಸತಿ ಹೇಮಕುಂತಲಿ
ನಾಮ ರೂಪದಿ ಕಾಮ ಸತಿ ರತಿ
ಆ ಮಹಾವಿದ್ಯದಲಿ ಸರಸ್ವತಿ ಸೋಮಧರ ಮಂತ್ರ
ಪ್ರೇಮಿ ಶಿವಪದಪೂಜೆಯಲಿಯು
ದ್ಧಾಮ ಪಾರ್ವತಿಯೆನಿಸಿತನು ಸೌ
ಧಾಮಿನಿಯ ಪ್ರಭೆಯಾಂತಗಾಮಿನಿ ಬಂದ ಜಂಗಮಕೆ ॥ ೧೦ ॥

ಮಾಡಿ ಪದಪೂಜೆಯನು ಭಕ್ತಿಯ
ಗೂಡಿ ಸವಿ ಸವಿ ನೀಡಿ ಮನದಣಿ
ಕಾಡಿ ತೃಪ್ತಿಯ ನೋಡಿ ಮುದದಿಂ ಪಾಡಿ ನಲಿದಾಡಿ
ಬೇಡಿದ...ತುಂ ದ್ರವ್ಯನಿತ್ತು ಚ
ರಾಥ್ಯರುಂ ಕೊಂಡಾಡಿ ಕಳುಪುವ
ಜಾಡ ಜಾಂಬಕಿ ಕೀರ್ತಿಪ್ರಭೆ ನಾಡೆಲ್ಲ ಬೆಳಗಲಿಕೆ ॥ ೧೧ ॥

ಕೇಳಿ ಸಿಂಹಳ ಶೂರ ಚಂದ್ರನು
ತಾಳಿ ಮತ್ಸರ ಗುಣವನಾಗದು
ರಾಳೋಚನೆಯಂ ಬಗೆದನೀಕೆಯುಮಬಲೆ ತಾನಿರ್ದು
ಹೇಳಬಾರದ ಕೀರ್ತಿ ಜಗದಲಿ
ಮೇಲೆನಿಪದಿದು ತಾಳದೆನಗಾ
ಮೇಲೆ ಸ್ತ್ರೀಯಳು ಬುದ್ಧಿ ಮೊಣಕಾಲ್ಗಳಗೆ ಸಿದ್ಧವಿದು ॥ ೧೨ ॥

ಎಂದು ಮನದಲಿನೊಂದು ದ್ವಯಚರ
ರಂದು ಕರೆಸುತ ಪೇಳ್ದನೀ
ಸುಂದರಾಂಗಿಯ ಬಳಿಗೆ ಸತಿ ಪತಿಯಾಗಿ ಪೋಗುತಲಿ
ಚಂದ ದಂಪತ ಪೂಜೆ ಕೈಕೊಂ
ಡಿಂದು ಬರುವದು ಶೀಘ್ರದಲಿಯನೆ
ಮಂದಹಾಸದಿ ನುಡಿದರಾ ಚರರಂದು ಭೂಪತಿಗೆ ॥ ೧೩ ॥

ಬೇಡ ಪ್ರಭುವರ ಕೇಡು ಬರುವದು
ನಾಡಿನಲಿಯುಪಹಾಸ್ಯವಾಗ್ವುದು
ಪಾಡವಲ್ಲಿದು ನಡತೆ ನೀನಾಡೊಡೆಯನಾಗಿರ್ದು
ಕಾಡ ಜನರ ತೆರದಿ ಬೋಧೆಯ
ಮಾಡುವದು ಒಳಿತಲ್ಲವಾಕೆಯು
ನಾಡಸ್ತ್ರೀಯಳುಮಲ್ಲ ಮೃಡಮಂತ್ರವನು ಬಲ್ಲಾಕೆ ॥ ೧೪ ॥

ತಿಳಿದು ನಮ್ಮಯ ಕುಟಿಲ ಗುಣವನು
ಮುಳಿದು ಶಾಪಿಸಲೇನುಗೈಯ್ವದು
ನಳಿನ ಮುಖಿ ಸಾಮಾನ್ಯಳಿಲ್ಲವು ನಾವು ಕೇಳಿಹೆವು
ಸುಳಿಯ ಮಡುವನು ಕಂಡು ಕಣ್ಣಲೆ
ಮುಳುಗುವದುಮೆಂತಕಟ ನಿನ್ನಿಂ
ದಳಿವದಿದು ಹಿತವಹಿತಮವಳಿಂದೊದಗುವದು ನಿಜವು ॥ ೧೫ ॥

ಎನಲು ಭೂಪತಿಯಂದ ಚರರೊಳು
ಕಿನಿಸುಗೈಯ್ಯಳುಮಾಕೆಯೆಂದಿಗು
ವಿನಯದಿಂ ಪೂಜಿಪಳು ಚರಲಿಂಗವನು ಕಂಡಾಗೆ
ಮನುಮಥಾರಿಯ ಭಕ್ತಿ ಪ್ರೀಯಳು
ಸನುತರಿರೆ ಭಯ ಬೇಡ ಪೋಗಿರಿ
ಎನಲುಪಾಯಂ ಕಾಣದಲೆ ತಾವ್ನುಡಿದರಿಂತೆಂದು ॥ ೧೬ ॥

ದೇವರಾಜ್ಞೆಯ ಮರೆತು ನಡೆ ಗುರು
ದೇವನಾಜ್ಞೆಯ ಹೊರತು ನಡೆಸನೆ
ಭೂವರಾಜ್ಞೆಯ ಮತ್ತೆ ಪಿತಮಾತೆಯರ ಮನದಾಜ್ಞೆ
ಆವನಾದರು ಮೀರಿ ನಡೆದರೆ
ಪಾವನನುಮಲ್ಲಲ್ಲ ನರಕದ
ಜೀವಿದುರ್ಗುಣಭಾವಿಸತ್ಯನುಮೆಂದು ಚರರಾಗ ॥ ೧೭ ॥

ಸತಿಪತಿಯು ತಾವಾಗಿ ಕೃತಕದಿ
ಯತುಲ ಶೃಂಗರವಾಂತು ಜಂಗಮ
ದ್ವಿತಿರೈತಂದಾಗ ದೂತರು ಹೇಮಕುಂತಲಿಗೆ
ಅತಿಥಿ ಚರ ಸತಿಪತಿಗಳೀರ್ವರು
ಮತಿಯುತೆಯೆ ಬಂದಿಹರುಮೆನಲ್ಕಾ
ಸತಿಶಿರೋಮಣಿ ಮಂತ್ರರೂಪಿಣಿ ಕಂಡು ಕರೆತರುತೆ ॥ ೧೮ ॥

ನೋಡಿ ಜಂಗಮ ಕೃತಕರನು ತಾ
ನಾಡೆ ಕೇಳ್ದಳುಮಾರುಮೀಕೆಯು
ಪೌ್ರಢಮಮ ಸತಿ ನಿಜವೆನಿಜವೆಂದಾಡಲಿದು ಕೇಳಿ
ಗಾಢದಲಿ ಮೃಡ ಮಂತ್ರ ಜಪಿಸುತ
ಮಾಡಿದಳು ವಂದನೆಯನೀರ್ವರ
ರೂಢ ಸಿಂಹಾಸನವನಾ ಮಾಡಿಸುತೆ ಮಮತೆಯಲಿ ॥ ೧೯ ॥

ಒಲಿದು ದಂಪತ ಪೂಜೆಯನು ಮನ
ನಲಿದು ಮಾಡುತೆ ಷಡ್ರಸನ್ನವ
ಸಲಿಸಿಯುಣಿಸುತ ದ್ರವ್ಯ ವರದಕ್ಷಣೆಯನಂ ಕೊಡುತ
ಸಲಿಲ ಜಾಂಬಕಿ ಹೇಮ ಕುಂತಲೆ
ಯಲ ಸದಪ್ಪಣೆಯೀಯೆ ಸತಿ ಪತಿ
ಕುಲುಕುಲು ನಗುತಾಗ ಪೊರಟರು ಪುರವದಾಟುತಲಿ ॥ ೨೦ ॥

ಬರುತ ಮಾರ್ಗದಿ ನೋಡಲವಯುವ
ಪರಿಯ ಬೇರಾಗುತ್ತ ಮದನನ
ಸರಳ ಬಾಧೆಯ ತಾಳದಲೆ ಭೋಗಿಸಿದ ಸತಿ ಚರನ
ಮರುಗಿ ಮರಮರ ಬರುತಲರಸನೆ
ಪೊರೆಯೊ ನಮ್ಮನುಮಿಲ್ಲದಿರೆಯಾ
ತರುಣಿ ಬಳಿ ನಡಿನಡಿಯದಿರೆ ಹರಣವನು ಹತಿಸೆನಲು ॥ ೨೧ ॥

ಕೇಳಿ ಭೂಪನು ಕೋಳುಗೊಳು ತಾ
ಗೋಳುಕಾಣುತ ತಾಳಿ ಮನಖತಿ
ಜಾಳ ವಿದ್ವಾಂಸರನು ಕರೆಸುತ ಪೇಳಿರಿದಕೇಸು
ಪೇಳುವೆವು ನೀಕೇಳ್ವೆನೆಂದರೆ
ಕೇಳುತಿಹೆ ಪುಸಿಯಿಲ್ಲವಿಲ್ಲವು
ಮೇಲು ಪೂಸಂಕೋಲೆಯನು ಕರತಳಕೆ ಪಾಯ್ಕೊಂಡು ॥ ೨೨ ॥

ಹೇಮಕುಂತಲೆ ಬಳಿಗೆ ಪೋಗುತ
ತಾಮರಸ ಪದಕೆರಗಿ ಸ್ತುತಿಸೆಂ
ದಾ ಮಹಿಮ ವಿದ್ವಜ್ಜನಾದಿಗಳಾಗ ಪೇಳಲ್ಕೆ
ಆ ಮಹಾನೃಪನಂತೆ ಗೈಯ್ಯುತ
ಪ್ರೇಮದಿಂ ಚರ ಸತಿಪತಿಯರುಂ
ತಾ ಮಹಿಳೆ ಸ್ಥಲದೆಡೆಗೆ ಕರೆದೊಯ್ದಾಗ ಪದಕೆರಗಿ ॥ ೨೩ ॥

ಮಾತೆ ನೀನಾ ಬಾಲಮತಿ ನೀಂ
ಕೋತಿ ನಾ ನೀಂಕರುಣಿ ಕುಚ್ಛಿತ
ಪೂತೆ ನೀಂ ನಾ ಪಾಪಿ ದಯಾಗುಣಿ ನೀನು ಕೋಪಿಯು ನಾ
ಶೀತ ಕರಧರ ಮಂತ್ರ ಸೌತ್ರೃಳಿ
ದಾತೆ ಜಂಗಮ ಪ್ರೀತೆ ಪಾವನೆ
ನಾಥೆಯಂ ನವಗುಣವ ನೋಡದೆ ಸಲಹು ಚರವರರ ॥ ೨೪ ॥

ಎಂದು ನುತಿಸಲು ಹೇಮಕುಂತಲಿ
ನೊಂದು ಮನದಲಿ ಭೂಪ ನೀಂ ನಾ
ನಂದನೆಯು ಮಿಂತೇಕೆ ನುತಿಸುವಿರೆನ್ನ ಗುಣಹೀನ
ಕಂದುಗೊರಳನ ರೂಪ ಚರವರ
ತಂದೆ ತಾನೇ ಸತಿಪತಿಗಳೆಂ
ತೆಂದ ಕಾರಣಮವರ ನುಡಿಯವರಂತೆ ತಾನಾಗೆ ॥ ೨೫ ॥

ಕುಂದು ಎನ್ನದುಯೇನದಿಲ್ಲವು
ಹೊಂದಿ ನುಡಿದಾ ನುಡಿಯು ಪುಸಿಯೆನೆ
ತಂದೆಯೀರ್ವರು ಎನಗೆ ನೀವ್ಯೆ ಎಂದು ಮನುಜಪಿಸೆ
ಹೊಂದಿದಾ ಸ್ತ್ರೀ ರೂಪವವಯವ
ಮುಂದಿನಾ ಪರಿಯಾಗೆ ಚರವರ
ರಂದ ಚರಣಕೆ ನಮಿಸಿ ಕಳುಹಿದಳಾಗ ಭೂಪತಿಯ ॥ ೨೬ ॥

ಎಲೆ ತನಯ ಕೇಳ ಲಘು ಮಂತ್ರದ
ಒಲುಮೆ ತಿಳಿಯಲು ಸುಲಭವಲ್ಲವು
ಬಲು ಘನವು ಕಲಿಕಾಲದಲಿ ಈ ನರರು ಭವಮಾಲೆ
ಗೆಲುವದಕೆ ಕಾರಣವು ಮುಕ್ತಾ
ಲಲನೆ ಮಣಿ ಫಣಿ ತಿಲಕವೆನಿಸುವ
ಲಲಿತ ಪಂಚಾಕ್ಷರಿಯ ಮಹಿಮೆಯು ಪರಕೆ ಪರವಹುದು ॥ ೨೭ ॥

ದೇವ ಮುಪ್ಪಿನ ವಿರತ ಷಡಕ್ಷರ
ಭೂವಳಯದಲಿ ಚರಿಸುತ್ತಳ್ಳಿಯ
ತಾವಿನಲಿಯೊಂದಿನವು ಪಟ್ಟಣಕ್ಕೈದು ದಿನವಿರ್ದು
ಬೇವ ಭಿಕ್ಷವ ಕರತಳದಿ ಮಡು
ಜೀವನವ ಸ್ವೀಕರಿಸುತಲಿ ತಾ
ನಾವಗಂ ಮಂತ್ರವನು ಸ್ಮರಿಸುತಮಿರಲು ಮರದಡಿಯ ॥ ೨೮ ॥

ಧಾವಿಸುತ ಬಿಸಿಲಿಂದ ಬಳಲುತ
ಹಾವುಗಾರರು ಬರುತ ಕಂಡರು
ತೀವಿರುವ ನೆರಳಿಂದ ಮರಕಂ ಬಂದರವರಾಗ
ದೇವನಂ ಕಂಡಾರು ನೀಸೆನೆ
ಭಾವ ಮೌನದೊಳಿರಲು ಭವಿಜನ
ಹಾವುಬಿಟ್ಟರೆ ನುಡಿವನೆನುತವರುಗನಾಲ್ಕಾರು ॥ ೨೯ ॥

ಬಿಡಲು ವಿರತರ ಪಾದದಡಿಯಲಿ
ನುಡಿಯುತಿರೆ ಮಂತ್ರವನು ಮುಖದಲಿ
ಮುಡಿದು ಮುಕ್ತಿಯಕಂಡದವು ಗಾಬರಿಸಿ ದುರ್ಜನರು
ಬಡಿಯಬೇಕೆನುತವರು ಮೇಲೆಯು
ಕಿಡಿಯಕಾರುತ ಬೊಗಳುತಂ ಬರೆ
ಮೃಡನ ಮಂತ್ರದ ಮಹಿಮೆ ಕರಿ ಶುನಕಾಗಿಸಿತುಮವರಂ ॥ ೩೦ ॥

ಅಂದಿಗಿಂದಿಗು ಬೊಗಳ್ವ ಜನ್ಮವ
ನ್ನೊಂದಿ ಮುಕ್ತಿಯ ಕಾಣದಿರುವರು
ಕಂದ ಕೇಳಾ ಹಾವುಗಾರರೆ ಕೃಷ್ಣ ಶುನಕೆಂದು
ಹಿಂದೆ ನಾರದ ಪೇಳ್ದ ಕಥೆಯ ಕು
ಪೇಂದ್ರುಗಂ ಕೇತಕಿಯ ಸಂಗಮ
ನಂದ ಪೌರಾಣದೊಳು ರಚಿಸಿಹುದದನು ನೀ ಕೇಳು ॥ ೩೧ ॥

ಮತ್ತೊರೆವೆ ಚರ ತೀರ್ಥ ಮಹಿಮೆಯ
ಚಿತ್ತ ಶುದ್ಧದಿ ಕೇಳಿ ಶಿವಲಿಂ
ಗೋತ್ತಮನೆ ನೀ ಬಿಡದೆ ಸಲಿಸಲುಮಾಯುರಾರೋಗ್ಯ
ಸತ್ಯವಿದು ಪುಸಿಯಲ್ಲ ಸಿದ್ಧವು
ಚಿತ್ತಜಾರಿಯ ಪದವು ದೊರೆವುದು
ಮೃತ್ಯುಜನನಾದಿಗಳು ನಸಿಪವು ಮುಕ್ತಿಕರತಳವು ॥ ೩೨ ॥

ಲಿಂಗ ಚರಗುರು ಭಸಿತ ಹರನಯ
ನಂಗಳಾ ಶಿವಮಂತ್ರಮಿವುಗಳ
ತುಂಗ ಮಹಿಮೆಯನೊರೆದ ಬಲ್ಲನಿತಾ ಸಕುಮಾರ
ಅಂಗಜಾರಿಯ ರೂಪ ಚರವರ
ನಾಂಘ್ರಿಸಲಿಲದ ಮಹಿಮೆ ಪೇಳುವೆ
ನಂಗೈಸಿ ನೀ ಕೇಳು ವರ ಘೋರಾಂಡವೆಂದೆಂಬ ॥ ೩೩ ॥

ಪುರದ ನೃಪ ಸಾರಂಗ ಸುಖದಿಂ
ದಿರುತ ಬರ್ಭರ ಭೂಪನಾತ್ಮಜೆ
ಪರಮ ವೀಣಾವಾಣಿಯುತಿ ಚೆಲ್ವಿಕೆಯು ವಾರ್ತೆಯನು
ಮರೆದು ಭೂಪತಿ ತವಕದೊಳು ಮಾ
ಪುರಕೆ ನಿಬ್ಬಣ ಸಂಭ್ರಮದಿ ಪೋ
ಗಿರದೆ ಮದುವೆಯನಾಗಿ ಸತಿ ಸಹ ತನ್ನ ನಿಜಪುರಕೆ ॥ ೩೪ ॥

ಸಾಗಿ ಬರುತಿರಲಾಗಳುಪವನ
ಪೂಗವನು ಕಂಡಿಳಿದು ಶ್ರಮವನು
ನೀಗಿ ಮಜ್ಜನ ಭೋಜನಾದಿಯ ಗೈದು ಸತಿ ತಾನು
ಬೇಗ ಮಣಿಮಯ ರಥದಿ ಮೂರ್ತಿಸು
ತಾಗ ವನದೊಳಗಿಪ್ಪ ದ್ರುಮ ಪು
ಷ್ಪೌಘ ಫಲಗಳ ನೋಡುತ್ತೈತರಲ್ಕಲ್ಲಿ ಪಾಲ್ಕುರಿಕೆ ॥ ೩೫ ॥

ವೇಮನಾರಾಧ್ಯರುಗಳತಿ ಮುದ
ಕಾಮ ಹರನಾರ್ಚನೆಗೆ ಸುಮಗಳ
ಪ್ರೇಮದಿಂ ತೆಗೆಯುತಿರೆ ಕ್ಷಿತಿಪತಿ ಕಂಡು ಹರುಷದಲಿ
ಆ ಮಹಾರಥದಲ್ಲೆ ನಮಿಸಲು
ವೇಮನಾರ್ಯರು ನೋಡದಿರಲಾ
ಭೂಮಿಪನು ತಿಳಿದಂದು ರಥದಿಂದಿಳಿದು ಶರಣೆನುತ ॥ ೩೬ ॥

ದೀರ್ಘ ದಂಡನೆ ಪಾಕೆ ಭೂಪನ
ಯೋಗಿ ನಿಟ್ಟಿಸದ್ಹಾಗೆ ಸಿಕನಿರ
ಲಾಗ ನೃಪ ಕೋಪದಲಿಯುರಿದೇಳುತಲಿ ನಿಂದೆಲವೋ
ಯೋಗಿ ನೀನೆಂದೆರಗಿರದರೆ ಓರಿ
ಗೂಗಿಯಂದದಿ ಗರ್ವದಿರುವರೆ
ನಾಗಧರನವತಾರಿ ನಿಮಗೀ ಗುಣವು ಚಂದಹುದೆ ॥ ೩೭ ॥

ಎಂದು ನೃಪನುಡಿಯಲಿಕೆ ಮನದಲಿ
ವಂದಿನಿತು ಕೋಪಂಕುರಿಸದಾ
ನಂದಯುತಿ ಮನ ಮೌನದಿಂದಿರೆ ಭೂಪ ಕಡುನೊಂದು
ಕಂದುಗೊರಳನ ರೂಪ ಧರಿಸುತ
ತಿಂದು ಮನೆ ಮನೆ ತಿರುಗ್ವಿರಲ್ಲದೆ
ಬಂದ ದುರ್ಮರಣವನು ಹರಿಸುತ ಫಣಿಯ ಬರಹವನು ॥ ೩೮ ॥

ಕೆಡಿಸಿಯಾಯುಷ್ಯವನು ಹೆಚ್ಚಿಗಿ
ಕೊಡುವದಾಗ್ವದೆ ನಿಮ್ಮ ಕೈಯಿಂ
ದೊಡನೆ ನುಡಿ ನುಡಿ ಸುಮ್ಮನಿರುವೀಹಂಮು ಥರವಲ್ಲ
ಒಡೆಯರೀ ತೆರ ಗರ್ವಮೇಕೆನ
ಪೊಡವಿಪನೆ ಕೇಳ್ನಾಳಿನ ದಿನಂ
ನಡುಪ್ರಹರ ರಾತ್ರಿಯಲಿ ಮರಣವು ನಿನಗೆಯೊದಗುವದು ॥ ೩೯ ॥

ಅನಿಮಿತ್ಯಂ ಪರಸದಾದೆನ
ಲಾನೃಪತಿ ಘುಡಿಘುಡಿಸಿ ಘೂರ್ಮಿಸು
ತೇನು ಕೆಡನುಡಿಯಾಡಿದೆಲೆ ನೀ ಪಾಪಿಯುತಿಯೆಂದು
ಮಾನು ಬಿಡಲಾಯ್ತಲ್ಲದೊಡೆ ನಿಂ
ನ್ಗೋಣಮುರಿಯುತಲಂಗ ಕಡಿಕಡಿ
ದೀ ನೆಲದಿ ಹಾಕುವದುಮಿಲ್ಲದಲೆರಡು ತುಂಡವನು ॥ ೪೦ ॥

ಮಾಡುತಿರ್ದಿನ್ನೇನು ಛೀ ನಡಿ
ಮೂಢಯುತಿಯೆಂದಾಡಿ ಸತಿಯಳ
ಕೂಡಿಪಡೆ ಸಹಿತಾಗ ಪುರವಂಪೊಕ್ಕು ಸಡಗರದಿ
ರೂಢನಾಗುತ ಸಿಂಹಪೀಠಾ
ಕೊಡಿದೆಡಬಲ ಮಕುಟಮಾನ್ಯರ
ನಾಡೆ ಬೀಳ್ಕೊಡುತಾಗಳೆಲ್ಲರನುಚಿತ ವೈಭವದಿ ॥ ೪೧ ॥

ಅರಸು ತನ್ನೇಕಾಂತ ನಿಲಯದ
ಲರಸಿಯನು ಕೂಡುತ್ತ ಮಂಚದಿ
ಪರಿಮಳದ ದ್ರವ್ಯವನು ಪೂಸುತ ಕಂತು ಸಮರದಲಿ
ಬೆರೆದು ಮೈಮರದೊರಗಿ ನಿದ್ರಿಸು
ತಿರಲು ಕಾಳುಗರಾಗ ಭೂಪನ
ಚರಣದಿಂ ಮೃಡಕಚ್ಚೆ ಸತಿಯಳು ಕಂಡು ಗಾಭರಿಸಿ ॥ ೪೨ ॥

ಪತಿಯನೆಬ್ಬಿಸಲೆದ್ದು ಸರ್ಪನ
ಕ್ಷಿತಿಪ ಕಾಣುತ ಮರಣವಾದನು
ಮತಿಯುಡುಗಿ ಸತಿಯಳುತ ಹಿತವಹ ಮಂತ್ರಿ ಸೇವಕರ
ಅತಿ ತವಕದಿಂ ಬರಿಸೆ ನೆರೆಯಿತು
ಮಿತತ ಪುರಜನರೆಲ್ಲರಾಗಳು
ಕ್ಷಿತಿಪನಿಗೆ ಮರಣೆಂತು ಮಾಯ್ತೆಲೆ ತಾಯಿ ಪೇಳೆನಲು ॥ ೪೩ ॥

ವಹವಾಗಲಿಂದ ಬರುತೆಡೆ
ನವಿನ ವನವಂ ನೋಡಬೇಕೆಂ
ದವನಿಪತಿ ನಾ ರಥವಡರಿ ಬರೆಯೋಮನಾರ್ಯರನಂ
ಜವದಿ ನಮಿಸಲು ಪರಸದಿರೆ ಧರೆ
ಧವನು ಕೋಪಿಸಲಾತ ಮರಣೆನ
ಲವರ ಸಂದಿಸುತರಮನಿಗೆ ಬರುತಂದು ನಿದ್ರಿಸಲು ॥ ೪೪ ॥

ಉರಗ ಮುಟ್ಟಿದುದನಿತದೆಲ್ಲವ
ನರುಹಲಾಗಳೆ ಸೂರ್ಯನುದಯಕೆ
ಪುರದ ಜನಗೋಳಿಡುತಲರಸನ ಶವವ ಪೊತ್ತಾಗ
ಬರುತ ಮಹಿಮರ ಪದದಿಡುತಲಾ
ಅರಸಿ ಪರಿವಾರ್ಮಂತ್ರಿ ಸಹಿತಲು
ಕರಮುಗಿದು ನಿಲೆ ಯೋಮನಾರ್ಯರು ಕಂಡುಮಿದುಯೇನು ॥ ೪೫ ॥

ದೇವ ಮಹಿಮರೆ ಭೂವರನ ಶವ
ಪಾಪ ಕಾರ್ಯವು ಜೀವ ಕೊಡುವದು
ನಾವು ಶಿವರೆಂತಾಪೆ ವರ ಶಿವ ಭೂಮಿ ಮನುಜರ್ಗೆ
ಪಾವನವಗೈರೆನಲು ಘನ ಸ
ದ್ಭಾವಿಗಳು ಶೋಕವನು ನಿಲ್ಲಿಸಿ
ಭಾವಜಾರಿಯ ರೂಪ ಜಂಗಮ ದೇವನಂ ಬರಿಸಿ ॥ ೪೬ ॥

ಉನ್ನತಾಸನದಿರಿಸಿ ಚರಪದ
ವನ್ನು ತೊಳೆದಾ ಪಾದೋದಕವಂ
ಚಿನ್ನ ಕುಂಭದೊಳಿರಿಸಿ ಪೂಜಿಸಿ ನೃಪನ ಶರೀರವನು
ಮುನ್ನ ತೋಯದಿ ತೊಳೆದು ಫಣೆಯಲಿ
ಸನ್ನುತಾಮಳ ಭಸಿತ ಧರಿಸುತ
ಚನ್ನ ಜಂಗಮನಿರುಪದೊಳಗಾಪಾದ ತೀರ್ಥವನು ॥ ೪೭ ॥

ಅರಸನಂಗದ ಮೇಲೆ ಯೋಮನ
ಶರಣರಾಗಳೆ ತಳಿಯಲುಂ ನೃಪ
ದೆರೆದ ಕಣ್ಣಂ ಪ್ರಾಣ ಬರುತಲೆ ನೆರೆದ ಜನ ಪೊಗಳೆ
ಧರಣಿಪತಿ ಶಿವ ಜಂಗಮಕೆ ನಮಿ
ಸಿರದೆ ವ್ಯೋಮನಾರಾಧ್ಯಗೆರಗಲು
ಕರುಣದಿಂ ದ್ವಯಕರದಿ ಶಿರವಿಡಿದೆತ್ತಿ ಪರಸಿದರು ॥ ೪೮ ॥

ನೂರುವತ್ಸರ ಬಾಳ್ದು ಶಿವಪದ
ಸೇರು ನೀನೆಂದೆನುತ ಶರಣರು
ಹಾರೈಸಿ ಪಲಕಾಲ ತಾವಿರುತಿರ್ದು ಕರದಿಷ್ಟ
ಚಾರುಲಿಂಗದಿ ಬೆರವರಿತ್ತಲು
ಭೂರಮಣನವರಾಜ್ಞೆಯಿಂದದಿ
ನೂರುವರುಷಂ ಬಾಳಿ ಶಿವನೊಳು ಬೆರೆದ ಶಿವಲಿಂಗ ॥ ೪೯ ॥

ಶಂಭು ಭಕ್ತನೆ ಕೇಳು ಚರಚರ
ಣಾಂಬುವಿನ ಮಹಿಮೆಯನು ಪೊಗಳಲು
ಮಂಬುಜೋದ್ಭವಗರಿದು ಕಥೆಯಿಂಸೊಂದು ಪೇಳುವೆನು
ಜಂಬುದ್ವೀಪದೊಳಾಂಧ್ರ ದೇಶ ಪು
ಲಿಂದ್ರ ಪುರದಲಿ ಕಾಚಿರಾಜಯ
ಸಂದ ಶಿವಶರಣಾಧಿವಷ್ಟಾವರಣ ನಂಬಿರಲು ॥ ೫೦ ॥

ಒಂದು ದಿನ ಪರವಾದಿಗಳು ನಲ
ವಿಂದ ನುಡಿದರು ಕಾಶಿ ತೀರ್ಥದ
ಕಿಂದಮದಿಕಿಲ್ಲೆಂದು ಶಾಸ್ತ್ರವನೋದುತಿರಲಾಗ
ಇಂದುಧರನವತಾರ ಚರಪದ
ದಿಂದ ನಿರ್ಮಿತವಾದ ತೀರ್ಥವು
ಮೆಂದಿಗಾದರುಮಧಿಕಮಿರೆ ದುರ್ಭಾಷಣಾಡುವರೆ ॥ ೫೧ ॥

ಧರಣಿಯೊಳು ರಾಜಿಸುವ ಮುನ್ನೂ
ರರುವತ್ತು ವ ತೀರ್ಥದೊಳು ಭಾ
ಗಿರಥಿಯಧಿಕದರಿಂದ ಚರಪದ ತೀರ್ಥವದಿಕೆಂದು
ಒರೆವುತಿರಲಿತಿಹಾಸ ಪೌರಾ
ಣರಿದು ಮರುಳ್ಗಾದಿಸುವದೇನಿದು
ತರವೆ ನಿಮಗಲ್ಲಲ್ಲವೆಂದನು ಕಾಚಿ ರಾಜಯ್ಯ ॥ ೫೨ ॥

ಸಾರಮತಕಾ ಭಾಗಿರಥಿ ಘನ
ವೀರಶೈವಗೆ ಚರಪದಾಂಗುಟ
ಸಾರಘನ ಘನವಲ್ಲ ಕಾಶಿಯ ತೋಯ ಶೈವರಿಗೆ
ಸಾರಲಾಗದು ವೀರಶೈವಗೆ
ಪಾರವೇದಿಸಲರಿದು ಹೆಮ್ಮೆಯ
ಕ್ರೂರ ನುಡಿಯಾಡಿದಕೆ ಶಿಕ್ಷೆಯು ಬರುವದದು ಸಹಜ ॥ ೫೩ ॥

ಎಂಬ ಸಾಕ್ಷಿಯನೋವೆ ಕೇಳದೆ
ಶುಂಭ ಜನ ದೃಷ್ಟವನು ತೋರೆಸೆ
ಲಂಬಿಕಾಧವ ಶರಣ ಕಾಚಿಯು ಕಾಲಿ ಜಲತರಿಸಿ
ಶಂಭು ಜಂಗಮ ಪಾದೋದಕವಂ
ಸಂಭ್ರಮದಿ ತರಿಸುತ್ತ ತ್ರಾಸಿನ
ಲಿಂಬುಗೊಳಿಸುತತೊಗೆಪದ ಜಲ ಭೂಮಿಯನು ಬಿಟ್ಟು ॥ ೫೪ ॥

ಏಳದಿರೆ ಪರವಾದಿಗಳು ಕಾ
ಡಾಳೋಚಿಸಿದರು ಶರಣ ಬಿಡುಬಿಡು
ಶೀಲ ಜಂಗಮ ತೀರ್ಥದಲಿ ಗುಣಶೀತವೇನುಪ್ಪ
ಹೇಳು ನೋಡುವೆವೆನಲು ಶರಣನು
ಹೇಳಿದರೆ ಕೆಡಕಹುದು ತೀರ್ಥದ
ಲೀಲೆದ್ವಯ ನಂಬಿದಗೆ ಶಾಂತಿಯು ನಂಬದವಗಗ್ನಿ ॥ ೫೫ ॥

ಯಾಗಿ ತೋರ್ಪುದು ತೋರಿಸೆನೆ ಜವ
ದಾಗ ಜಂಗಮ ಪಾದತೀರ್ಥವ
ಸಾಗಿಸಿದ ಪರವಾದಿ ಕೇರಿಗಳತ್ತಲ್ಹರುಷದಲಿ
ಬೇಗೆಯಂದದಲುರಿಯು ತಾಗಳೆ
ಭೂ ಗಗನಕೇಕಾಗಿ ವಾದಿಗ
ಳಾಗೃಹವ ದಹಿಸಿದುದು ದುರ್ಜನ ಮರಣವಸದಳವು ॥ ೫೬ ॥

ನೋಡಿ ಪೊರೆಯಿಡಲಾಗ ಕರುಣವ
ಮಾಡಿ ಮನೆಗಳನಳುಹಿ ಕೆಡನುಡಿ
ಯಾಡಿದವರಿಗೆ ಪ್ರಾಣದಾನವನಿತ್ತು ಸರ್ವರನ
ನಾಡೆ ಶಿವಭಕ್ತರನು ಮಾಡುತ
ಲೂಡೆ ಚರಪದತೀರ್ಥಮಿಗಿಲೆಂ
ದ್ಹಾಡಿ ಹರುಷವಗೂಡಿ ಮೆರದನು ಕಾಚಿ ರಾಜಯ್ಯ ॥ ೫೭ ॥

ರವಿಯು ಗೌತುಮ ಸತಿಗೆ ಮೋಹಿಸ
ಲವನದುಂ ಮುನಿ ತಿಳಿದು ಶಾಪಿಸ
ಲವಯುವಂ ತೊನ್ನಾಗೆ ಮುನಿಪತಿಗೆರಗಿ ನಿಃಶಾಪ
ವಿವರಿಸಿದ ಶಿವ ಮಜ್ಜನೋದಕ
ಜವದಿ ಮೀಯ್ಯನಲದರ ಪರಿಗೈ
ದವನು ಶುದ್ಧತೆ ತಾಳ್ದ ಮಹಿಮೆಯ ಕೇಳು ಶಿವಲಿಂಗ ॥ ೫೮ ॥

ಬೇಡ್ವರಿಲ್ಲದೆ ಬಡವನಾದೆಂ
ದಾಡೆ ಬಸವನು ಕೇಳಿ ಮಡಿವಾ
ಳ್ಳಾಘದಿಂ ಕಿವಿಮುಚ್ಚಿ ಬರೆ ಜಲಗುಂಡಕಡೆ ಬಸವ
ನೀಡಿ ಕರಗಳನಿಲೆ ಶರಣಪದಿ
ದೊಡೆ ಜಲರತುನಾಗೆ ಬಸವನು
ಪಾಡಿದನು ಚರಪದವು ಬಡವಲ್ಲೆಂದನೆಲೆ ತರಳ ॥ ೩೯ ॥

ಮೋಳಿಗಯ್ಯನ ಮಂದಿರದಿ ಪೊಂ
ನ್ನಾಳಿಗಿಡೆ ಬಸವೇಶ ಶರಣನು
ಕೇಳಿ ಚರಸರ್ವರನು ಬರಿಸುತವಟ್ಟಿದ್ಹೊರೆಗಳಿಗೆ
ಧೂಳ ಪಾದೋದಕವ ಪ್ರೋಕ್ಷಿಸಿ
ಮೇಲು ಚಿನ್ನದ ಕೋಲುಗೈಯ್ಯುತ
ಶೂಲಿಚರಕಿತ್ತಾಗ ಮೆರೆದನು ಕೇಳು ಶಿವಲಿಂಗಾ ॥ ೬೦ ॥

ಶರಣನಾ ದೂಡಯ್ಯ ಸ್ನಾನವ
ನೆರೆದ ಜಲದಲ್ಲಿ ಬಿದ್ದ ವಿಪ್ರನ
ಶರೀರ ತೊನ್ನವ ಪೋಗೆ ನೋಡುತಲೇಳು ನೂರ್ದ್ವಿಜರು
ಬರುತ ಸ್ನಾನವ ಮಾಡಲಂಗದ
ಕಯಿಯ ಕುಷ್ಟವು ಪೋಗೆ ಶರಣನ
ಚರಣ ಸ್ಮರಿಸುತ ಪೋದರ್ನೈಮಮ ತನಯ ನೀ ಕೇಳು ॥ ೬೧ ॥

ಸ್ವಾಮಿ ಗುರು ಘನಕಾಮಿ ಭಕ್ತರ
ನೇಮಿ ಸತ್ತ್ಯಾಚಾರನತಜನ
ಪ್ರೇಮಿ ಪುಣ್ಯಾರಾಮಿ ಸದ್ಗುಣಧಾಮಿ ಸಂಸೇವ್ಯ
ಆ ಮಹಾಪ್ರಾಸಾದದ ಮಹಿಮೆಯ
ನೇಮದಿರುವರ ಕಥೆಯನುಸುರುತ
ಲೀ ಮನದ ಭ್ರಮೆಬಿಡಿಸಿ ಪೊರೆಯ್ಯೈ ಮರಣ ಭವಹರಣ ॥ ೬೨ ॥

ಕೇಳು ನೀ ಪ್ರಾಸಾದ ಮಹಿಮೆಯ
ಪೇಳಲೆನ್ನೊಶವಲ್ಲ ಸದ್ಗುಣ
ಶೀಲ ಶಿವಶರಣಾಳಿಗಳಿಗದು ಸಾಧ್ಯ ಸಂವೇದ್ಯ
ಮೂಲ ಕರ್ಮದ ಜಾಲ ಪರಿಸುತ
ನೀಲಕಂಠನ ಮೇಲುಪದಕನು
ಕೊಲಗೈಯ್ಯುತ ಪಾಲಿಪುದು ಮನಲೋಲದಿಂ ಸಲಿಸೆ ॥ ೬೩ ॥

ಕಮಲ ದಿನಕರ ದುಃಖಿದಧಿ ಮುನಿ
ತಮನಗಜ್ಞಾನೊಜ್ರ ಮದಕರಿ
ವಮನ ಹರಿದುಷ್ಕರ್ಮ ತರು ಬುಡ ಪರಶುಚರವರರ
ವಿಮಲ ಪ್ರಾಸಾದವನು ನಂಬುತ
ಲಮೃತ ಸಮವೆಂದೆನುತ ಸೇವಿಸ
ಲಮರನಾಗುತ ಶಿವ ಪದಾಬ್ಜಕೆ ಸಾಗ್ವ ಭವನೀಗ್ವ ॥ ೬೪ ॥

ನಿಂದಿಸುವ ವಹಾದುರ್ಮದಾಂದರು
ಪೊಂದುವರು ನರಕವನು ಸತ್ಯವು
ಕಂದ ಕೇಳಿದಕೊಂದು ಕಥೆಯಂ ಪೇಳ್ವೆನಾಲಿಸು ನೀ
ಹಿಂದೆ ಬಹುಕಾಲದಲಿ ಶ್ರೀಗಿರಿ
ಸಂದ ಯಾತ್ರೆಯಗೈಯ್ಯಲೋಸುಗ
ಚಂದ ಚರಮೂರ್ತಿಗಳು ನಾಲ್ವರು ಪೊಂದಿ ಪೋಗುತಲಿ ॥ ೬೫ ॥

ಮಿಂದು ಪಾತಾಳ್ಗಂಗೆಯಲಿ ತನು
ಮಿಂದುಧರ ದೇವಾಲಯಕೆ ತಾ
ವ್ಬಂದು ಗೋಪುರದ್ದಿಂದೆ ಬಿಲ್ವವನಾಂತದೇಳಿಗೆಯಂ
ಹೊಂದಿಕೊಡುತ ಲಿಂಗಪೂಜೆಯ
ನಂದದಿಂದಾಚರಿಸಿ ಪದಜಲ
ವಂದು ಸೇವಿಸಿ ತಂದ ಬುತ್ತಿ ಪ್ರಸಾದವನು ಬಿಚ್ಚಿ ॥ ೬೬ ॥

ನೀಡಿಕೊಳುತಲಿ ಸರ್ವರಾಗಳೆ
ಕೂಡಿ ಪ್ರಾಣ್ಲಿಂಗಕ್ಕೆ ಪ್ರಾಸಾ
ದ್ಮಾಡಿ ಸೇವಿಸಿ ಮಿಕ್ಕುದಂ ವಬ್ಬೊಬ್ಬರೆಡೆಯೊಳಗೆ
ಗಾಢ..ರಿಸುತ ಸಲಿಸುತಿರೆ ಗಗ
ನಾಡಂಬರಂ ಹತ್ತಿ ಸಂಚರ
ಮಾಡುತಿಹ ಗಂಧರ್ವಕೆಳಗಂ ನೋಡೆ ಜಂಗಮರು ॥ ೬೭ ॥

ಉಣುವದಂ ಕಂಡಾಗ ಮುಖದಿಂ
ದಣಕವಾಡ್ದನು ಏನು ನಿಮ್ಮಯ
ಗುಣವು ಎಂಜಲ ತಿನುವದಿದು ನಿಮಗೇಣಿಕೆಯುಹುದೇನು
ಥಣಿಯ ಜಂಗಮ ರೀತಿಯಲ್ಲೀ
ಟೊಣಪರ್ಧೇಸಿಕೆಯಿಲ್ಲವೇಯೆಂ
ದಣಕಿಸುತ ಪಲ್ಕೆರದು ನಕ್ಕನು ತೊಳಲಿ ಬಳಲುದಕೆ ॥ ೬೮ ॥

ಮೇಲೆ ನಗುವದು ಕೇಳಿಯೀಕ್ಷಿಸ
ಲಾ ಗಣಂಗಳು ಕಂಡು ಕೋಪದ
ಲಾಗ ನುಡಿದರು ನಿಂದೆಯಾಡಿದಿ ಹಂದಿಯಾಗೆನಲು
ಮಾಗಲಿಳಿದನು ಮುಖವ ಬಾಡುತ
ಶ್ರೀಗಣಾರ್ಯರೆ ಜಂಗಮಾರ್ಯರೆ
ಪ್ಯಾಗಿಯಂನವಗುಣವ ನೋಡದು ಶಾಪವೀಯುವದು ॥ ೯ ॥

ಎನುತ ದುಃಖದಿ ಚರಣಕಮಲಕೆ
ಮಣಿದು ಬೇಡಲು ಪಾಪಿ ನೀನಾ
ತೃಣಯುರೂಪನ ಚರಪ್ರಸಾದವನುಣಲು ನಿಃಶಾಪ
ಎನುತ ಪೋದರು ಚರವರರು ಮಾ
ಕ್ಷಣಕೆ ಮರಿ ಪಂದ್ಯಾಗಿ ಗಂಧ
ರ್ವಣಿಕೆಯಿಲ್ಲದ ದುಃಖದಲಿ ಚರಿಸಾಡುತಿರುತಿರ್ದ ॥ ೨೦ ॥

ಕೆಲವು ದಿನವಾಪಂದಿ ಮರಿಗಿರಿ
ವಲಯದೊಳು ಚರಿಸಾಡುತಿರಲುಂ
ನೆಲದೊಳತಿ ಘನತೆಯನು ಪಡೆದಿಕ್ಕೇರಿ ಸಂಸ್ಥಾನ
ಹಲಿ ಮೆರೆಯ ಬೇಡೋರ್ವ ಬೇಂಟೆಯ
ನಲಿದು ತಾನಾಡುತಲಿ ಬರುತಿರೆ
ಪುಲಿಯು ಪುಲ್ಲೆಯ ಪಿಡಿಯಲೋಸುಗವಾಗ ಬೆನ್ನಟ್ಟೆ ॥ ೨೧ ॥

ಕಂಡು ಬೇಡನು ಪುಲಿಯನುಂ ಜವ
ಗುಂಡಿಲಿಡು ನೈಮಿತ್ಯ ಬೆನ್ನಂ
ಗೊಂಡು ಓಡಲು ಮುಂದೆ ಪುಲಿ ಘೋರಡವಿ ಸೇರಿದುದು
ಪುಂಡ ಬೇಡನು ಪುಡುಕೆ ಸಿಗದಿರೆ
ಹಿಂಡಿ ಒಗೆದಂತಾಗಿ ಬರುತಿರೆ
ಹಂಡವರ್ಣದ ಕಿಟಿಯಮರಿಯನು ನೋಡಿ ಹರುಷದಲಿ ॥ ೨೨ ॥

ಮನೆಗೆ ತರುತದ ಸಾಕೆ ನಿತ್ಯದಿ
ಮಿನಿದು ಮೈಯಂಪಾಕು ತನ್ನವ
ಮನೆಯುನದಕಂ ಬೇರೆ ಕಟ್ಟುತಲಿಟ್ಟ ಪಲದಿನಕೆ
ಮನಸಿಜಾರಿಗೆಯರಿಕೆಯಾಗಲು
ಸನುತ ಜಂಗಮ ರೂಪದಾಳುತ
ಬಿನದಿಸುತ ತಾ ಬಂದ ಬೇಡನ ಮನೆಗೆ ಭೋಜನಕೆ ॥ ೨೩ ॥

ಭಕ್ತಿಯುತನಾ ಬೇಡ ಜಂಗಮ
ನೋಕ್ತಿಯಾಲಿಸುತಾಗ ಮನದಣೆ
ಭುಕ್ತಿಗೈಸುವ ಕಾರಣಂ ಘನರಾಗಿ ಮುದ್ದಿಯನು
ಅರ್ಥಿಯಿಂಗೈಯ್ಯುತ್ತ ಶೀಘ್ರದಿ
ಭಕ್ತಿಯಿಂ ನೀಡುಣಿಸೆ ವರದಾ
ಸಕ್ತನಾಗಳೆ ಕಿಟಿಗೆ ಮುದ್ದಿಯನೊಂದು ವಗಿಯಲಿಕೆ ॥ ೭೪ ॥

ತಿಂದು ವರಹವು ಹೊಂದಿ ಶಾಂತಿಯು
ಹಿಂದಣದ ಸ್ಮೃತಿಯಾಗಲದಕೆ
ನ್ಮುಂದೆ ತಿನ್ನದೆ ಹಾಗೆ ನೀರ್ಡ್ಡಾರೊಂದು ತಿಂಗಳವು
ಕುಂದುಮಿಲ್ಲದೆ ಬೀಳೆ ಬೇಡನು
ಮಂದನಿದಕಂ ರೋಗಮಾಗಿದೆ
ಎಂದು ಬರೆಯುನು ಕಾಸುತಂಗದಿ ಬರೆದ ನಾಲ್ಕಾರು ॥ ೭೫ ॥

ಬರಿಯು ಗುಣಗಳು ಚರಪ್ರಸಾದದ
ವರ ಮಹತ್ವದಿ ಕನಕವಾಗಲು
ಪುರದ ಜನ ಮೊದಲಾಗಿ ತಮ್ಮಯ ಮನೆಯ ಕಬ್ಬಿಣವ
ಪೊರೆಯು ಕಟ್ಟುತ ತರುತ ಬೆಂಕಿಯು
ಲಿರಿಸಿ ಕಾಸುತ ವರಹದಂಗವ
ನಿರದೆ ಸುಟ್ಟರು ಸರ್ವವೆಲ್ಲವು ಮಾಗೆ ಭಂಗಾರ ॥ ೭೬ ॥

ರಾಜನಿದು ತಾ ಕೇಳಿ ಕಾಣುತ
ಸೋಜಿಗಂಗೊಂಡಾಗ ತನ್ನಯ
ರಾಜಧಾನಿಯಲದರ ಹೆಸರಿನ ನಾಣ್ಯವರಹೆಂದು
ಬಾಜಿಸಿದ ಡಂಗುರವನಾಗಳೆ
ಮೂಜಗವ ಮರಿಯಲ್ಕೆ ಮೆರೆದವು
ರಾಜಧರ ಸಮರೂಪ ಜಂಗಮಶೇಷ ಮಹಿಮೆಯಿದು ॥ ೭೭ ॥

ಕೇಳಿ ಶಿವತಾಂ ಬಂದು ವರಹದ
ಕೀಳುಜನ್ಮವ ಬಿಡಿಸಿ ಜನ ಸ
ಮ್ಮೇಳ ನೋಡಲು ಮೊದಲಿಗಿಹ ಗಂಧರ್ವ ರೂಪಿನಲಿ
ಶೂಲಧರ ಕರೆದೊಯ್ದು ತನ್ನ ವಿ
ಶಾಲ ಶಿವಪುರಕಾಗಳವನಂ
ಕೇಳು ಚರಪ್ರಸಾದ ಮಹಿಮೆಯು ಮೂಲ ಶಿವಲಿಂಗಾ. ॥ ೭೮ ॥

ಗುರುಲಿಂಗ ಚರಭೂತಿ ಮಂತ್ರಂ
ಚರವರನ ಪಾದೋದಕಂ ಘನ
ಹರ ನಯುನ ಪ್ರಾಸಾದವಾವರಣಷ್ಟಮಿವು ನಂಬಿ
ಹರುಷದಿಂ ತನು ಮನ ಧನವಿನಿ
ತ್ರಿರದೆ ಧರಿಸುತ ಸ್ಮರಿಸಿ ಸೇವಿಪ
ನರಗೆ ಮೋಕ್ಷವು ಸತಿಸುತರು ಸಿರಿದೊರಕೊಳಗು ಸತ್ಯಂ ॥ ೭೯ ॥

ಎಣ್ಣೆ ಉಂಡಿಹ ಪತ್ರದಲಿಯು
ತ್ಪನ್ನವಾಗವು ಬರೆಯಲಕ್ಷರ
ಚುನ್ನ ವಿಷಯುದ ಮಗ್ನ ಮನದೊಳು ಭಕ್ತಿ ನೆಲೆಗೊಳದು
ತನ್ನಿಮಿತ್ಯಂ ಪೇಳ್ದೆನಷ್ಟಾ
ವರ್ಣ ಮಹಿಮೆಯು ನಿನಗೆ ನಾಂ ಮುಂ
ದಿನ್ನು ಪಂಚಾಚಾರಗಳ ಪೇಳುವೆನ ಕೇಳ್ಮುದದಿ ॥ ೮೦ ॥

ಸುಚಿತವಷ್ಟಾವರಣವೇ ತನು
ನಿಚಯು ಪಂಚಾಚಾರ ಪ್ರಾಣಂ
ಪ್ರಚುರಮಾಗಿಹ ವೀರಶೈವರ್ಗಾವರಣಮಿರ್ದು
ಸಚಲ ಪಂಚಾಚಾರವಿರದಿರೆ
ಕಚ ಸಮೂಹಂನಿರದ ಶಿರವದ
ನುಚಿತವಾಗುತ ತೋರುವಂದದಿ ಧರ್ಮ ನಿಃಫಲವು ॥ ೮೧ ॥

ಐದು ಆಚಾರಂಗಳಿವನಂ
ನೈದೆಯಾಚರಿಸವನು ತಿಳುಪುವೆ
ವೇದ್ಯ ಲಿಂಗಾಚಾರ ಮತ್ತೊಂದಾ ಸದಾಚಾರ
ಸಾಧ್ಯ ಭೃತ್ಯಾಚಾರ ಶ್ರೀಯುತ
ವಾದ ಮತ್ತೊಂದಾ ಶಿವಾಚಾ
ರೈದೆ ಸುಗಣಾಚಾರ ಪಂಚಾಚಾರಮಿವು ಸಿದ್ಧ ॥ ೮೨ ॥

ಗುರುವಿನುನ್ನತ ಕರುಣವಾಂತುರೆ
ಪರಮಲಿಂಗಾಂಗೈಕ್ಯ ಭಾವದಿ
ಪರಿಣಮಿಪ ಸದ್ಭಕ್ತ ಸ್ಥಾವರ ಲಿಂಗದೆಡೆ ಪೋಗಿ
ಮರದು ನಮಿಸುವದಿರಲಿ ಭಾವದಿ
ಸ್ಮರಿಸದಿರುತಿಹುದಿದುವೆ ಸಿದ್ಧಿಸ
ಲುರುತರೋನ್ನತವಾದ ಲಿಂಗಾಚಾರಮೆನಿಸುವದು ॥ ೮೩ ॥

ಪಿಡಿದ ಕಾಯಕ ಬಿಡದೆಯರಿಂ
ದೊಡನೆ ಬಂದ ಪದಾರ್ಥವೆಲ್ಲವ
ಒಡೆಯ ಗುರು ಚರ ಲಿಂಗ ಮುಖದಿಂ ನಡೆಸಿ ದಾಸೋಹ
ಮೃಡನ ಭಕ್ತಿಯ ಪಥಕೆ ಕುಂದಂ
ತೊಡಕು ಬರುದಂತಾಗೆ ವರ್ತಿಸಿ
ದೃಡತರಂ ಬಲಿಯುತಲಿ ಕೊಡುತಿಹುದೇ ಸದಾಚಾರ ॥ ೮೪ ॥

ಸತ್ಯ ಗುರು ಚರ ಲಿಂಗ ಭಕ್ತರೆ
ಪೃಥ್ವಿಗಧಿಕರು ನಾನೆ ಕಿರಿಯನೆ
ನುತ್ತೆ ನಿರಹಂಭಾವದಲಿ ಭಯಭಕ್ತಿಯಿಂ ಕೂಡಿ
ತತ್ತ್ವಕತನು ಮನವ ಧನವಂ
ನಿತ್ತು ನೆರೆ ನಲುವಿಂದ ವರ್ತಿಪ
ಚಿತ್ತ ಶುದ್ಧದ ಭಕ್ತಿ ಭೃತ್ಯಾಚಾರಮೆನಿಸುವದು ॥ ೮೫ ॥

ಭಕ್ತರೊಳು ಕುಲವರಸಜಾಸ
ವ್ಯಕ್ತರೆನಗತ್ಯಧಿಕರೆಂದಾ
ಭಕ್ತರಂ ತೃಪ್ತಿಸುತ ತಾನವರೊಕ್ಕುದಂ ಕೊಂಡು
ಮುನಿಗಾಶ್ರಯವೆಂದು ತಾನತಿ
ಭಕ್ತಿಯಿಂ ಸ್ವೀಕರಿಸಿ ತಣಿವುದೆ
ಸತ್ಯ ಕೇಳಿದು ಶರಣರಾಚರಣೆಯ ಶಿವಾಚಾರ ॥ ೮೬ ॥

ಶಿವಶರಣ ಗುರು ಲಿಂಗ ಜಂಗಮ
ಸುವಿಭೂತಿ ರುದ್ರಾಕ್ಷಿ ಮಂತ್ರಂ
ಶಿವಚರಾರ್ಯರ ಪಾದಜಲ ಪ್ರಸಾದಗಳ ನಿಂದೆ
ಯವನು ಮರವಿಂದೊಮ್ಮೆಯಾದರು
ಕಿವಿಯೊಳಂ ತಾ ಕೇಳಿದಿರ್ಪುದೆ
ಶಿವನ ಭಕ್ತಗೆ ಕಾರಣತ್ಯಧಿಕೇ ಗಣಾಚಾರ ॥ ೮೭ ॥

ಇಂತು ಪಂಚಾಚಾರ ಮಹಿಮೆಯ
ನಾಂತ ಅಷ್ಟಾವರಣದೊಳು ಮನ
ಶಾಂತಿಲಿರಿಸುತಲಂತಕಾಂತಕ ಭಕ್ತಿಯನು ನಡಿಸೈ
ಚಿಂತಿತಾರ್ಥವನೀವ ಸದ್ಗುರು
ಶಾಂತಮೂರುತಿ ಪರಮಭಕ್ತಿಯ
ಪೆಂಥವದು ಸೂಚಿಪುದುಮೆನೆ ಸದ್ಗುಣಿಯು ಪೇಳಿದನು ॥ ೮೮ ॥

ಶರಣ ಶಿವಲಿಂಗೇಶ್ವರನವರ
ಚರಿತೆಯಂ ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ಸಾಮಕನು
ಪರದ...ೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳಿ ಸತ್ಪಥ
ದೊರಕೊಗುಮಿಷ್ಟಾರ್ಥ ಸಿದ್ಧಿಯು ಷಷ್ಟ ಸಂಧಿಯಿದು ॥ ೮೯ ॥

ಅಂತು ಸಂಧಿ ೬ಕ್ಕಂ ಪದನು ೫೦೯ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೭

ಭಕ್ತಿಮಾರ್ಗಾಚಾರವನು ಮ
ವ್ಯಕ್ತ ಗುರುವಿಂದರಿಯುತಲಿ ಶಿವ
ಭಕ್ತ ಶಿವಲಿಂಗೇಶ ಪರಿಣಯನಾಗಿ ಸುಖದಿರ್ದ ॥ ಪಲ್ಲ ॥

ಶ್ರೀ ನಗೇಂದ್ರಾತ್ಮಜೆಯ ರಮಣ ಸು
ಮೌನಿ ಗಣವಂದಿತ ಪದಾಬ್ಜನೆ
ಭಾನುಸುತಜಿತ ಮದನಮರ್ದನ ತ್ರಿಪುರ ವಿಧ್ವಂಸ
ದೀನ ಜನಘನ ಬಂಧು ಭಕ್ತಾ
ಧೀನನಘಕಾನನದ ವಾನಲ
ಪಾನ ವಿಷ ಶಿವಪುರದ ಶಿವಲಿಂಗೇಶನ ತಪೋಷಾ ॥ ೧ ॥

ಸೂನು ಕೇಳ್ ಶಿವಭಕ್ತಿಯೆ ಘನ
ಮಾನವಾದಿಗಳೆಲ್ಲರಿಗೆ ಸುಖ
ತಾನುಪೋಗುವ ಮುಕ್ತಿಗ್ರುಹಕಿದು ಭಕ್ತಿ ಸೋಪಾನ
ಸ್ವಾನುಭಾವದ ಮೂಲ ಮತ್ತಾ
ಜ್ಞಾನ ಕ್ರೀಯಾಚಾರ ವಿರತಿಗೆ
ದಾನಪಾನಾದಿಗಳಿಗಿದು ಮುಖ್ಯಂದ ಗುರುನಾಥ ॥ ೨ ॥

ವೇಷ ಧರಿಸುತ ಭಕ್ತನೆಂದರೆ
ಈಶ ಭಕುತನು ಮಾಗಲರಿಯದು
ರಾಶೆಯಳಿದಾ ಭಕ್ತಿಯಾಂತರೆ ಭಕ್ತನಪ್ಪವನು
ಈಶ ಪ್ರಭು ಬಸವೇಶನ ಗುಣಂ
ಸೋಸಿ ನೋಡುತ ಭಕ್ತನಹುದೆಂ
ದಾಶಿರ್ವದಿಸಿದನಲ್ಲದಾ ವೇಷಕ್ಕೆ ಪೊಗಳಿಲ್ಲ ॥ ೩ ॥

ಪರವನಿತೆ ಪರರರ್ಥ ಮತ್ತಾ
ಪರದೈವ ಪರಸಮಯಗಳಿಗಾ
ತುರಿಪನವ ಭಕ್ತಲ್ಲ ನರಗುರಿ ಕೇಳು ಶಿವಲಿಂಗ
ಹರನ ನೆನಿ ಲಿಂಗವನು ಪೂಜಿಸು
ಚರರ ತೃಪ್ತಿಸು ಭಸ್ಮಧರಿಸೈ
ಗುರುವಿನೊಚನಾಲಿಸುತೆ ಭಕ್ತಿಯವೆರಸಿ ಮುಕ್ತಾಗು ॥ ೪ ॥

ಬಂದ ಜಂಗಮರಂದ ಕುಲ ಗೋ
ತ್ರೆಂದು ಕೇಳದೆ ವಂದಿಸುತ ಮಾ
ನಂದ ಮಿಗೆ ಹರುಷದಲಿ ಹರನೆಂದವರ ತಿಳಿಯುತಲಿ
ಹೊಂದಿ ಪದ ಪದ್ಮಗಳಿಗತಿ ಮುದ
ದಿಂದ ಪೂಜಿಸಿ ತೃಪ್ತಿಸುವದದು
ಮಿಂದುಧರವರ ಭಕ್ತಿ ಸತ್ಯವು ಕೇಳು ಭಕ್ತಾಂಗಾ ॥ ೫ ॥

ಜನರು ತನ್ನನು ಬೈಯ್ಯಲುಂ ಮೇ
ಣನಿತು ನಿಂದಿಸೆ ಶಾಂತಿ ಸೈರಣೆ
ಮನದಲಿರೆ ದೇವತ್ವಮೆನಿಪುದು ಮರಳಿತಾನವರ
ಮನಕೆ ಬಂದಂತೊಂದಕೆಂಟುಂ
ಕನಿಸಿನಿಂದಂ ಬೈವ ಗುಣವಿದು
ತನಗೆ ಸಲ್ಲದು ಭಕ್ತನಾದುದರಿಂದೆ ಫಲವೇನು ॥ ೬ ॥

ತಪ್ಪುಮಿಲ್ಲದೆ ಬೈದರವರಂ
ನಪ್ಪಿಯಪ್ಪೆನಬೇಕು ಮೊದಲಿನ
ತಪ್ಪುಮುಳ್ಳೊಡೆ ಬೈವರಲ್ಲದೆ ಮುಂದೆಯಂನಿಂದ
ತಪ್ಪುಮಾಗದ ತೆರೆದೊಲೆಚ್ಚರ
ವಿರ್ಪುದೆನುತೆಂದ್ವೇಳ್ವರೆನುತಲಿ
ಸುಪ್ರಮೋದದಲಿರುವದಿದು ಭಕ್ತಂಗೆ ಕಾರಣವು ॥ ೭ ॥

ಬಡಿದು ಭಂಗಿಸಿದವರನುಂ ತಾಂ
ಬಡಿಯಲಾಗದು ಭಕ್ತನಾದರೆ
ಗಿಡವು ತನಗಾ ಜಡವನೆರದಾತೊಬ್ಬಗೆ ನೆರಳು
ಕೊಡುವದೇ ಕೊಡದಿಹುದೆ ತನ್ನನು
ಕಡಿಯ ಬಂದವನಗೀಯದೇ ನೆರ
ಳ್ಪಡನೆಯದರನು ಪರಿದು ವರ್ತಿಸು ಮೃಡ ಪದಾರ್ಚಕನೆ ॥ ೮ ॥

ಹರನ ದಯ ತನಗಿರಲು ದುರ್ವಿಷ
ದುರಗ ಕಚ್ಚಿದರೇನು ಕೆಡಕಿ
ಲ್ದುರುಳ ನಿಂದಕರಿಂಗೆ ವಂದನದಿರುವದದು ಮೇಲು
ಹರನ ಭಕ್ತಗೆ ಕಾರಣೆನಿಪುದು
ಪರಸುತಿರ್ಪುದು ಕೆಡಕು ನುಡಿಯದೆ
ಪರಮ ಶಾಂತಿಯಲಿರುವದಿದು ಭಕ್ತಂಗೆ ಲಕ್ಷಣವು ॥ ೯ ॥

ಜಗದ ಸುಖವನು ಬಗೆಯದಲೆ ತಾ
ಮೃಗಧರನ ಕಾಯಕವ ಕೈಕೊಳು
ತಗಣಿತೋತ್ಸವದಿಂದೆ ಧನಕಾಳುಗಳು ಕೂಡಿಸುತೆ
ಅಗಜೆಯಾಣ್ಮನ ಭಕ್ತಿ ಗೈಯ್ಯಲು
ಹಗರಣದ ಬಡತನವೆ ತನಗುಂ
ಸೊಗಸು ಪರಜನಕಾಸೆ ಗೈಯ್ಯಲುಬೇಡ ಕೆಡಬೇಡಾ ॥ ೧೦ ॥

ಬಡತನವೆ ಬಹುಲೇಸು ಕಾರ್ಯಕೆ
ತೊಡಕಲರಿಯನು ಧನಿಕನಾಸೆಯು
ಬಿಡದೆ ಮುಂದಕೆ ಮನವ ಹರಿಯುತ ಕೆಡಕು ಪುಟ್ಟಿಪುದು
ದುಡಿವನವ ಬಲು ಮಡ್ಡಿಗಾಗೆಯು
ಕೊಡುವ ಕೊಂಬುವದರಿಯದಿರುತಿಹ
ನೊಡನೆ ವಿರತಿಯ ಪುಟ್ಟಿಸುವ ಬಡತನವೆ ಬಹುಲೇಸು ॥ ೧೧ ॥

ದೊರಕಿಸುತ ಗೃಹಸ್ಥನಥವ
ದುರಿತ ಕಾರ್ಯಕೆ ವೆಯವನ್ನೈದಿಸೆ
ಬರುವುದೇಂ ಪುಣ್ಯವದು ಪಾಪವೆ ಕೊಡುತಿಹುದಾಗಿ
ಸಿರಿಮದದಿ ಬರಿ ಬಿನದ ದುಂದಿನೊ
ಳಿರಿಸಿ ಸಂತತ ಕಲಹ ಕಂಟಕ
ಪರಿಪರಿಯ ದುಃಸಾಧನದಿ ಧನವೆಚ್ಚಿಸಲು ದ್ರೋಹ ॥ ೧೨ ॥

ಧನಮದವುದುರ್ದರವು ಬಳಲುವ
ಜನರು ಕೊಂಡಾಡುತಲಿ ಧನಿಕನ
ಮನೆಗೆ ಬರಲುಂ ಮೋರೆದಿರಗುತ ಕೂಷ್ಪ ನುಡಿಯದಲೆ
ವಿನಯ ಗುಣರಂಕವನ ಸಮ್ಮುಖ
ಕನುವಿನಿಂಬರಲೆದ್ದು ವಳಿಯಕೆ
ತಿನಲು ಪೋಗುವನೆನಿತು ಧನಮದ ಕೂಳು ಬಲಕಾಳು ॥ ೧೩ ॥

ಹಿತವನಹಿತವ ತಿಳಿಯದಲೆ ಶ್ರೀ
ಯುತನು ಕಾರ್ಯಂಗೈವನಲ್ಲದ
ಲತಿಶಯಂ ಧನ ನಿಃಪ್ರಯೋಜನ ಕಾರಣಮದೆನಲು
ಮತಿಯುತರು ಮನವಪ್ಪಲಾರರು
ಕೃತಕ ಮಾರ್ಗದಿ ಜಾರುತಿಪ್ಪುದು
ಸತತ ಸನ್ಮತದಿರುತ ಶಿವಭಕ್ತಿಯನೆ ಗೈಯ್ಯಂದ ॥ ೧೪ ॥

ಗುರುಚರಾರ್ಯರ ಸೇವೆಯಲಿ ತಾ
ಪರಮಕಾಯಕವಾಂತು ದುಡಿಯುತ
ದೊರಕಿದರ್ಥದಲಿಂದೆ ಗೈಯ್ಯುವ ಭಕ್ತಿಯುತ್ತಮವು
ಹಿರಿಯರಾರ್ಜಿತ ಮಧ್ಯಮಂ ಬಲು
ದುರುಳತನದಿಂ ಧನವ ಕೂಡಿಸಿ
ಗುರುವತದಿಂಗೈವುದದುಮಧಮಾಧಮೆನಿಸುವದು ॥ ೧೫ ॥

ಸಾಲವಿತ್ತರೆಯೀಯಬುದಾ ಧನ
ಶೀಲಚರಗುರು ಭಕ್ತರಿಗೆ ಸದ
ಯಾಳ ಧರ್ಮಿಷರಿಗೆ ಕೊಡಲಾ ಧನವು ಸತ್ಪಾತ್ರ
ಮೇಲೆಯದು ಬಾರದಿರೆ ಗಿರಿಜಾ
ಲೋಲಗರ್ಪಿತವಹುದು ದುರ್ಜನ
ಜಾಲ ಕಿತ್ತಾ ಧನವು ರಜಕನಶುನಿಯ ತೆರನಹುದು ॥ ೧೬ ॥

ಲಿಂಗ ಪೂಜಿಪ ಭಕ್ತ ಮಹಿಮರ
ಸಂಗದೊಳಗಿರಲೇಸು ದುರ್ಗುಣ
ಹಿಂಗುವದು ತನ್ನಿಂದಲಹುದನ್ಯರಿಗೆ ನಿಜ ಸುಖವು
ಸಂಗ ಸಜ್ಜನದಿಂದ ಲಾಭವು
ಭಂಗವಾಗ್ವದುದುರಿತತಿಳಿ ಶಿವ
ಲಿಂಗ ನೀನೀಗೆಲ್ಲ ಪೇಳಿದ ತೆರದಿಯಾಚರಿಸು ॥ ೧೭ ॥

ವೀರನ ಗುಣಂ ಯುದ್ಧದೊಳು ನಿಜ
ನಾರಿಗುಣ ದಾರಿದ್ರ್ಯದೊಳುಹಿತ
ಕಾರಿಗುಣವಾಪತ್ತಿನೊಳು ಶ್ರೀಯುತನು ಕೊಟ್ಟಿರುವ
ಸಾರಗುಣ ಕೇಳ್ವಿಡೆಯೊಳಾರುಣೆ
ಸಾರತಿಳಿಗುಮಪಾರ ಜಂಗಮ
ವಾರಕಾಟದೊಳ ಭವ ಭಕ್ತರ ಭಕ್ತಿ ತಿಳಿಯುವದು ॥ ೧೮ ॥

ಗುರುವು ತನ್ನನು ಮುನಿದೊಡುಂ ಘನ
ಪರಕಿಯಂದೆ ತಿಳಿದು ಸದ್ಗುರು
ಚರಣ ಸೇವಿಸುತಿರುವದಲ್ಲದೆಯವರ ಸನ್ನಿಧಿಯ
ಜರೆದು ಪೋಗುತನ್ನ ಗುರುವಿನ
ನೆರೆಯ ಸೇರಲು ಭಕ್ತನೆಲ್ಲವ
ನರರೆ ನರಕದ ಹಿರಿಯ ಭವದಲಿ ತಿರಗುವನು ಬಿಡದೆ ॥ ೧೯ ॥

ಹೇಡಿ ಭಟ ಯುದ್ಧಾಡುವಲಿ ಸರಿ
ದೋಡಿ ಪೋಗ್ವನು ಕಲಿಯು ಸಮರದಿ
ಮಾಡುವನು ಸಹಸವವೋಡದೆ ಡಾಂಬಿಕರು ವ್ರತವ
ಮಾಡುತಂ ಸಂಕಟದಿ ಬಿಡುವರು
ನಾಡೆ ರವಿ ಪಡುವಣದಿಯದಿಸಲು
ಮಾಡ್ವ ವ್ರತವಂ ಬಿಡರು ಶರಣರು ಭಕ್ತರತಿ ಘನರು ॥ ೨೦ ॥

ವಿಷಯ ಸುಖಕಂ ಹೊಂದಿ ಮಾನವ
ವಿಷಯ ಕರುಣದಿ ಕುದಿಯುತಿರುವನು
ವಿಷಮ ನೇತ್ರನ ಭಕ್ತಿಗೈಯುತಲೀಕ್ಷಣತ್ರಯುವ
ನಸಿಸಿ ಶಿವ ಸಾಯೋಜ್ಯ ಪದವನು
ವಶವಗೈಯುವ ಕಾರಣಂ ಬಲು
ಪೊಸತು ವೈರಾಗ್ಯವನು ಪಡೆವುದೆ ಲೇಸು ಭಕ್ತಂಗೆ ॥ ೨೧ ॥

ಘೃತವ ನೀಡಿದ ಅಗ್ನಿಯಂದದಿ
ವಿತತ ವಿಷಯಗಳಾಶೆಯಲಿ ದು
ರ್ಮತಿಯ ಕಾಮಂ ಬೆಳೆವುದಲ್ಲದೆ ಕಡಿಮೆಯಾಗಿರದು
ಕೃತಕ ವಿಷಯಾದಿಗಳ ಕೊರತೆಗೆ
ಮತಿಯುತರು ಮಾಧವನ ಸ್ಮರಣೆಯ
ಹಿತದ ಸಾಧನ ಭಕುತಿಯಂ ನಾಸಿಪರು ಮನವೊಪ್ಪಿ ॥ ೨೨ ॥

ವಿಷಯದಾಸೆಯಿಂದ ನರನಿಗೆ
ವಿಷಯಮದು ಪ್ರಾಪ್ತಿಪುದು ದುರ್ವಾರ
ವಿಷಯ ಪ್ರಾಪ್ತಿಯಲುಹುದು ಕಾಮೋತ್ಪತ್ತಿ ಕಾಮನಕೆ
ವಿಷಯು ತೃಪ್ತಿಯುಮಾಗದಿರ್ದೊಡೆ
ಪಿಸುಣ ಕ್ರೋಧವು ಜನಿಸಲದರಿಂ
ಹಸನಗೆಡಿಪುದದುದಿಪುದಾದು ಮೋಹ ಸಂಚಯವು ॥ ೨೩ ॥

ಮೋಹದಿಂ ಮನಸ್ಮೃತಿಯನಳಿವುದು
ಸಾಹ್ಯಸ್ಮೃತಿ ಕೆಡೆಮತಿಯು ಕೆಡುವದು
ಬಾಯ್ಯಮತಿ ಬಂಗಾಲದರಿಂ ನಾಶಮೀ ತೆರದಿ
ಲೋಹ ಸಂಗದಲಗ್ನಿ ಪೆಟ್ಟನು
ಮೂಹಿಸಿದ ತೆರನಾಯ್ತು ಕ್ಷಿತಿಯಲಿ
ಬಾಹುವಂಬಿಡದಾಯ್ತು ಜಗಜೀವಿಗಳು ಬಳಲುವರು ॥ ೨೪ ॥

ರಾಗಮೆಂಬಾ ಬಲಿಯ ಸನ್ನಿಧಿ
ಸಾಗಿಬರುತಂ ಮೃಗವು ಬೀಳುತ
ಕೂಗುವಂದದಿ ಕರ್ಮಬಲದಿಂ ಜನರು ಶಿರಬಾಗಿ
ಮೇಗೆ ಕೆಳಗಂಚರಿಸುತಿರ್ಪರು
ಸಾಗಲರಿಯರು ಪುಣ್ಯಪದವಂ
ನಾಗುತೀರ್ಪೀ ಕಷ್ಟವಂ ಜಗವರಿಯದಕಟಕಟ ॥ ೨೫ ॥

ಸಿರಿಯು ಸಂಪದವೆಲ್ಲ ಕನಸಿನ
ತೆರದಿ ತೋರುತಲಿಲ್ಲವಾಗ್ವದು
ಪರಮ ಪೂಷ್ಪಿನ ತೆರದಿ ಯೌವನ ಮುದರಿ ಪೋಗುವದು
ಅರಿಯೆ ಕ್ಷಣಿಕಂ ಮಾಯೆಯಾಯುಂ
ಕರಿದು ನೆಚ್ಚಿಕೆಯಿಲ್ಲ ನರನೀ
ಬರಿದೆ ಕೆಡಬೇಡೆಚ್ಚರಿಕೆ ಎಚ್ಚರಿಕೆಯುನುತ್ತೇಳೆ ॥ ೨೬ ॥

ಕೇಳಿ ಶಿವಲಿಂಗೇಶ ಶರಣನು
ತಾಳಿ ಶಾಂತಿಯ ನರರು ಭವಭಯ
ಜಾಲದಿಂ ಕಡೆಗಾಗ್ವ ಬಗೆಯಂತಕಟ ಗುರುವರ್ಯ
ಲೋಲಮನದಿಂ ಪಂಥ ಷಟುಸ್ಥಲ
ಮೂಲ ತಿಳಿದರೆ ಮೇಲು ಮುಕ್ತಿಯ
ಪಾಲಯುವ ಸೇರುವನು ಮದುವೆಯನಾಗು ನೀನೆನಲು ॥ ೨೭ ॥

ಮದುವೆ ಮತ್ತದನೇಕೆ ಗುರುವರ ಪ
ಪೆಮ ಪೇಳುವಿರಯ್ಯೊ ಸಂಕಟ
ವದನು ಕೈಕೊಳುತೀ ಪ್ರಪಂಚದಿ ಕುದಿಯಲಾರೆನು ನಾಂ
ಸದಯ ಸದ್ಗುರು ನಿನ್ನ ಬೋಧೆಯು
ಮದುವೆ ಕಲ್ಯಾಣೆನಗೆ ಮಂಗಳ
ಮದುವೆಯದು ಬೇಡಯ್ಯ ಸುಖವದರಿಂದಲೇನ್ಸಹುದು ॥ ೨೮ ॥

ಶರಣ ಸತಿ ನಾ ಲಿಂಗವದು ಪತಿ
ಕರಕೆ ಕಂಕಣ ಶ್ರೇಷ್ಠವಷ್ಟಾ
ವರಣ ಬಂಧಿಸಿ ಪಂಚಾಚಾರವ ಪಂಚಕಲಶಶ್ಹೂಡಿ
ಪರತರಾಚಿಚ್ಛಕ್ತಿ ಚಿನ್ಮಯ
ರೊರದ ಹಸ್ತದಿ ಧಾರೆಯೆರಸಿದಿ
ಗುರುವೆ ಮತ್ತೆನಗೆಲ್ಲಿ ಲಗ್ನವನೊಲ್ಲೆ ವಿಘ್ನವನು ॥ ೨೯ ॥

ಸತ್ಯಸುತ ನೀನೆಂದ ನುಡಿ ಶಿವ
ಭಕ್ತಿ ನಡೆಸಲು ಶಕ್ತಿ ಬೇಕೀ
ಪೃಥ್ವಿಯಲಿ ಸಂಸಾರಗೈದಾ ಶರಣಪಥ ಕೇಳು
ಅರ್ಥಿಯಿಂ ಸತಿಯರನು ವರಿಸುತ
ಚಿತ್ತಜಾರಿಯ ಭಕ್ತಿಗೈದರು
ವ್ಯರ್ಥವಲ್ಲಿದು ಸಾಗಲರಿಯದು ವರಿಸು ಲಗ್ನವನು ॥ ೩೦ ॥

ಗುರುವೆ ತವ ವಚನಾಳಿ ಮೀರುವ
ಹಿರಿಯತನವೇಕಿವಗೆ ಮನೆತನ
ದ್ಧಿರಿಯ ಜನಕನು ಪೋದ ಹರನೊಳು ಮಡಗಿ ಮಾತೆಯಳು
ಮಿರುವಳವಳಿಂ ಕಾರ್ಯಮಾಗ್ವುದೆ
ಕಿರಿಯ ನಾನೆಂನಿಂದ ತೀರದು
ಗುರುವೆ ಮದುವೆಯನಾರು ಗೈವರು ಮಿದಕೆ ಯೋಚನೆಯೇಂ ॥ ೩೧ ॥

ಮಾತೆ ನಿನ್ನನು ಗರ್ಭದೊಳು ತಾ
ನೋತು ನವಮಾಸ್ಹೊತ್ತು ರಕ್ಷಿಸಿ
ಭೂತಳದಿ ಪೊರೆದಾಕೆಯುವಳೇಂ ನೀತಿಯಲ್ಲದಳೆ
ಯಾತಕೀ ಮನ ಚಿಂತೆಯಾಕೆಯ
ಪ್ರೀತಿಯೇಸಿಹುವದನು ತಿಳಿವೇಂ
ಸಾತಿಶಯ ಶಿವಲಿಂಗ ಸಂತಸವಾಳುತಿರುಯೆನಲು ॥ ೩೨ ॥

ಮಾತೆ ಸುವರ್ಣಾಂಬೆ ಕೇಳುತ
ಪೂತ ಗುರುವರನಾಥ ಮದುವೆಯ
ನೋತು ಗೈಯ್ಯಲು ಮನೆಯೊಳೇನಿದೆ ಬಡತನದ ಬಾಳ್ವೆ
ತಾತ ಗುರುವರ ತಾವೆ ಲಗ್ನವ
ಸಾತಿಶಯದಿಂಗೈವುದೆನುತಾ
ನೀತೆ ಗುರುವಿನ ಪಾದಕೆರಗಿದಳಾಗ ಗುಣವಾತೆ ॥ ೩೩ ॥

ಕಂಡು ಗುರವರನಾಗ ಭಕ್ತಳ
ಮಂಡೆಯಲಿ ಕರವಿತ್ತು ಏಳೌ
ಪಂದುಸುತಗೊಲಿದೀಶ ತಾನೇ ಗೈವ ವಿವಹವನು
ಗೊಂಡು ಸಂಶಯ ಕುದಿಯದಿರು ಪುರ
ಮಂಡಳಿಯು ಬರಿಸುತಲೆ ತವ ಬಳಿ
ಗೊಂಡು ಕೇಳಿದ ಲಗ್ನಗೈಯ್ಯುವ ಬಗೆಯ ಗುರುವರನು ॥ ೩೪ ॥

ಕುಲದ ಭಕ್ತರ ಕೂಡಿ ನಿಮ್ಮಯ
ಕುಲದೊಳಾರಲಿ ಕನ್ನೆಯಿರುವದು
ತಿಳುಪಿರೆನೆ ಗುಲಗಂಜಿ ಶಿವಲಿಂಗಾಖ್ಯನಂಗನೆಯು
ಚಲುವೆ ವೊಂಕಾರಾಂಬೆಯುದರದ
ಜಲದಿ ಕುವಲಯ ಜನಿಸಿದಂದದಿ
ಲಲಿತಪವಳಾಂಬೆಯಳು ಶಿವಲಿಂಗನಿಗೆ ಶೋಭಿಪಳು ॥ ೩೫ ॥

ಎನುವ ಪುರ ಭಕ್ತಾದಿಗಳ ಮತ
ದನುವರಿತು ಪಿತಮಾತೆಯರ ಮನೆ
ತನಕ ತಾವೇ ದೈವ ಮಂಡಳಿ ಕೂಡಿ ಪೋಗುತಲಿ
ತನಯ ಪವಳಾಂಬೆಯನು ಕಾಣುತ
ಮನದಿ ಸಂತಸರಾಗಿ ನಿಶ್ಚಯ
ವೆನುವ ಕಾರ್ಯವಗೈದರಾ ಪಿತಮಾತೆ ಮನದಂತೆ ॥ ೩೬ ॥

ಬಂದು ಗುರುವರನಾಗ ನಿನ್ನಯ
ಕಂದ ಶಿವಲಿಂಗನಿಗೆ ಕನ್ನೆಯ
ಳಿಂದು ನಿಶ್ಚೈಸಿದೆವು ಬಂಗಾರಾಂಬೆ ನೀ ಕೇಳು
ತಂದೆಯೆಲ್ಲಿದೆ ಪುರದಲವರಾ
ರ್ಚಂದ ಗುಲಗಂಜಿವರ ಮನೆತನ
ದೆಂದು ಪೇಳಲ್ಸುಂದರಿಹಳೀ ಬಹಳ ಸುಂದರಿಯು ॥ ೩೭ ॥

ಹೀಗೆ ಗುರುವಾಕ್ಯವನು ಕೇಳುತ
ಸಾಗಿ ಸೊವರ್ಣಾಂಬೆ ವಳಿತೆಂ
ದಾಗ ಮನೆ ಸಾರಣೆಯುಗೈಸುತ ಪುರದ ವನುತೆಯರಂ
ಬೇಗ ಬರಿಸುತ ಬೀಸು ಕುಟ್ಟುವ
ಮೇಗೆ ಹಪ್ಪಳ ಸಂಡಿಗೆಗಳಂ
ರಾಗದಿಂದಂ ಮಾಳ್ಪ ಕಾರ್ಯಗಳೆಲ್ಲವಂ ಬೆಸಸೆ ॥ ೩೮ ॥

ಶರಣ ಸತಿ ನಾ ಲಿಂಗವದು ಪತಿ
ಕರಕೆ ಕಂಕಣ ಶ್ರೇಷ್ಠವಷ್ಟಾ
ವರಣ ಬಂಧಿಸಿ ಪಂಚಾಚಾರವ ಪಂಚಕಲಶಧ್ಟಾಡಿ
ಪರತರಾಚಿಚ್ಛಕ್ತಿ ಚಿನ್ಮಯ
ತೊರದ ಹಸ್ತದಿ ಧಾರೆಯೆರಸಿದಿ
ಗುರುವೆ ಮತ್ತೆನಗೆಲ್ಲಿ ಲಗ್ನವನೊಲ್ಲೆ ವಿಘ್ನವನು ॥ ೨೯ ॥

ಸತ್ಯಸುತ ನೀನೆಂದ ನುಡಿ ಶಿವ
ಭಕ್ತಿ ನಡೆಸಲು ಶಕ್ತಿ ಬೇಕೀ
ಪೃಥ್ವಿಯಲಿ ಸಂಸಾರಗೈದಾ ಶರಣಪಥ ಕೇಳು
ಅರ್ಥಿಯಿಂ ಸತಿಯರನು ವರಿಸುತ
ಚಿತ್ತಜಾರಿಯ ಭಕ್ತಿಗೈದರು
ವ್ಯರ್ಥವಲ್ಲಿದು ಸಾಗಲರಿಯದು ವರಿಸು ಲಗ್ನವನು ॥ ೩೦ ॥

ಗುರುವೆ ತವ ವಚನಾಳಿ ಮೀರುವ
ಹಿರಿಯತನವೇಕಿವಗೆ ಮನೆತನ
ದ್ಧಿರಿಯ ಜನಕನು ಪೋದ ಹರನೊಳು ಮಡಗಿ ಮಾತೆಯಳು.
ಮಿರುವಳವಳಿಂ ಕಾರ್ಯಮಾಗ್ವುದೆ
ಕಿರಿಯ ನಾನೆಂನಿಂದ ತೀರದು
ಗುರುವೆ ಮದುವೆಯನಾರು ಗೈವರು ಮಿದಕೆ ಯೋಚನೆಯೇಂ ॥ ೩೧ ॥

ಮಾತೆ ನಿನ್ನನು ಗರ್ಭದೊಳು ತಾ
ನೋತು ನವಮಾಸ್ಥೊತ್ತು ರಕ್ಷಿಸಿ
ಭೂತಳದಿ ಪೊರೆದಾಕೆಯುವಳೀಂ ನೀತಿಯಲ್ಲದಳೆ
ಯಾತಕೀ ಮನ ಚಿಂತೆಯಾಕೆಯು
ಪ್ರೀತಿಯೆಸಿಹುವದನು ತಿಳಿವೇಂ
ಸಾತಿಶಯ ಶಿವಲಿಂಗ ಸಂತಸದಾಳುತಿರುಯೆನಲು ॥ ೩೨ ॥

ಮಾತೆ ಸುವರ್ಣಾಂಬೆ ಕೇಳುತ
ಪೂತ ಗುರುವರನಾಥ ಮದುವೆಯ
ನೋತು ಗೈಯ್ಯಲು ಮನೆಯೊಳೇನಿದೆ ಬಡತನದ ಬಾಳ್ವೆ
ತಾತ ಗುರುವರ ತಾವೆ ಲಗ್ನವ
ಸಾತಿಶಯದಿಂಗೈವುದೆನುತಾ
ನೀತೆ ಗುರುವಿನ ಪಾದಕೆರಗಿದಳಾಗ ಗುಣದಾತೆ ॥ ೩೩ ॥

ಕಂಡು ಗುರವರನಾಗ ಭಕ್ತಳ
ಮಂಡೆಯಲಿ ಕರವಿತ್ತು ಏಳೌ
ಪಂದುಸುತಗೊಲಿದೀಶ ತಾನೇ ಗೈವ ವಿವಹವನು
ಗೊಂಡು ಸಂಶಯ ಕುದಿಯದಿರು ಪುರ
ಮಂಡಳಿಯು ಬರಿಸುತಲೆ ತವ ಬಳಿ
ಗೊಂಡು ಕೇಳಿದ ಲಗ್ನಗೈಯ್ಯುವ ಬಗೆಯ ಗುರುವರನು ॥ ೩೪ ॥

ಕುಲದ ಭಕ್ತರ ಕೂಡಿ ನಿಮ್ಮಯ
ಕುಲದೊಳಾರಲಿ ಕನ್ನೆಯಿರುವದು
ತಿಳುಪಿರೆನೆ ಗುಲಗಂಜಿ ಶಿವಲಿಂಗಾಖ್ಯನಂಗನೆಯು
ಚಲುವೆ ಪೊಂಕಾರಾಂಬೆಯುದರದ
ಜಲದಿ ಕುವಲಯ ಜನಿಸಿದಂದದಿ
ಲಲಿತಪವಳಾಂಬೆಂಪಳು ಶಿವಲಿಂಗನಿಗೆ ಶೋಭಿಪಳು ॥ ೩೫ ॥

ಎನುವ ಪುರ ಭಕ್ತಾದಿಗಳ ಮತ
ದನುವರಿತು ಪಿತಮಾತೆಯರ ಮನೆ
ತನಕ ತಾವೇ ದೈವ ಮಂಡಳಿ ಕೂಡಿ ಪೋಗುತಲಿ
ತನಯ ಪವಳಾಂಬೆಯನು ಕಾಣುತ
ಮನದಿ ಸಂತಸರಾಗಿ ನಿಶ್ಚಯ
ವೆನುವ ಕಾರ್ಯವಗೈದರಾ ಪಿತಮಾತೆ ಮನದಂತೆ ॥ ೩೬ ॥

ಬಂದು ಗುರುವರನಾಗ ನಿನ್ನಯ
ಕಂದ ಶಿವಲಿಂಗನಿಗೆ ಕನ್ನೆಯ
ಳಿಂದು ನಿಶ್ಚೈಸಿದೆವು ಬಂಗಾರಾಂಬೆ ನೀ ಕೇಳು
ತಂದೆಯೆಲ್ಲಿದೆ ಪುರದಲವರಾ
ನಂದ ಗುಲಗಂಜೆವರ ಮನೆತನ
ದೆಂದು ಪೇಳಲ್ಸುಂದರಿಹಳೀ ಬಹಳ ಸುಂದರಿಯು ॥ ೩೭ ॥

ಹೀಗೆ ಗುರುವಾಕ್ಯವನು ಕೇಳುತ
ಸಾಗಿ ಸೊವರ್ಣಾಂಬೆ ವಳಿತೆಂ
ದಾಗ ಮನೆ ಸಾರಣೆಯಗೈಸುತ ಪುರದ ವನುತೆಯರಂ
ಬೇಗ ಬರಿಸುತ ಬೀಸು ಕುಟ್ಟುವ
ಮೇಗೆ ಹಪ್ಪಳ ಸಂಡಿಗೆಗಳಂ
ರಾಗದಿಂದಂ ಮಾಳ್ಪ ಕಾರ್ಯಗಳೆಲ್ಲವಂ ಬೆಸಸೆ ॥ ೩೮ ॥

ತಮ್ಮ ಕುಲದೇವರ ಮಹೋತ್ಸವ
ನೆಮ್ಮಿ ಮಾಡ್ವಂತಾ ಸತಿಪತಿಗ
ಳುಮ್ಮಯದಿ ಸಲೆ ಹರಿದ್ರ ಕುಂಕುಮತಂದುಲುಪ್ಪೆಣ್ಣೆ
ರಮ್ಯಗುಡ ಸಕ್ಕರೆಯ ಘೃತವಂ
ದಿಮ್ಮೆ ಖೊಬ್ಬರಿ ಬೇಳೆ ಕಾರಗ
ಳಂ ಮತ್ತೆ ಯಲೆಯುಡಿಕಿ ಸುಪ್ಪಾಕುಗಳು ಮೊದಲಾಗಿ ॥ ೩೯ ॥

ಸಿದ್ಧಗೊಳಿಸುತ ಶುದ್ಧ ಗುರುಪದ
ಕ್ಕೊದ್ಧಿ ತಿಳಿಸಲು ಬರಿಸಿ ಪತ್ರಿಕೆ
ಸದ್ಯದಲಿ ಬಳಗಿದ್ದ ಗ್ರಾಮಕೆ ಕಳಿಸಲತಿ ತ್ವರದಿ
ವಾದ್ಯದವರಂ ಬರಿಸಿ ನಂಟರು
ಬುದ್ಧಿವಂತರು ದೈವ ಮಂಡಳಿ
ಮುದ್ದು ಮಿತ್ರರ ಸಾಧ್ಯ ಚರಶರಣಾದ್ಯರಂ ಬರಿಸೆ ॥ ೪೦ ॥

ಕೆಲರು ಗುಳಿಗೆಯ ಪರಿಯಂ ಮೇಣ್
ಕೆಲರು ಶಾವಿಗೆ ಸಂಡಿಗ್ಗಪ್ಪಳ
ಕೆಲಬರುಪ್ಪಿನಕಾಯ್ಗಳಂ ಮೇಣ್ ಕಾಯಿಪಲ್ಲೆಗಳಂ
ಕೆಲರು ಸುಧೆ ಘೃತದಧಿ ಮಧುವ ಮ
ತ್ತೆಲರು ಪುಗೆಯಂಬಾಡಿ ಕುರುಡಿಗೆ
ತಲೆಯೊಳಾನುತ ತಾವೆ ತಂದರು ಪೇಳ ಕೇಳದಲೆ ॥ ೪೧ ॥

ತಮ್ಮ ಮಕ್ಕಳ ಮದುವೆಗೈವೆಡೆ
ಕಮ್ಮಿಯಾದರೆಮಿರಲಿ ಎನ್ನುವ
ರೊಮ್ಮೆ ಬೇಡಲು ಕೊಡದೆ ಸುಮ್ಮನೆ ಮೂಲಿಗಡರುವರು
ಒಮ್ಮನದಿ ಸತಿಪುರುಷರೆಲ್ಲರು
ಗಮ್ಮನೆ ಬೇಡಿಮುದ ಸೀವರು
ತಮ್ಮ ಶಿವಲಿಂಗೇಶನೇನವರ್ಮರುಳುಗೈದಿದನೋ ॥ ೪೨ ॥

ಕಾರಣೆಲ್ಲದಲಾರು ಸೋಲ್ವರು
ಕಾರಣಿಕಮಿವನೆಂದು ತಮ್ಮಯ
ನಾರಿ ಪತಿ ಪಿತ ಸುತರು ಪುರಜನ ಮಿತ್ರ ಬಾಂಧವರು
ಮಾರಹರಪದ ಭಕ್ತ ಲಗ್ನಕೆ
ಸಾರಿಬರುತಲಿ ಕಾರ್ಯಕಾರಣ
ಪೂರ ಮನದಿಂ ತೀರಿಪುದಕಂ ನೆರದರೇನಂಬೆ ॥ ೪೩ ॥

ಪೊಳೆವ ಕೆಂಪಿನ ಶುಭ್ರ ಛತ್ತಾ
ವಳಿಯು ಮೇಲ್ವಿಲಿವಾರ ಕಟ್ಟುತ
ತಳಿರ ತೋರಣ ಗೊಂಚಲು ಪೂಮಾಲೆ ಸೊಬಗಿಂದಂ
ನಿಳಯು ಬಿತ್ತಿಯೊಳ್ಮುಕುರ ಮಾಣಿಕ
ವಲಯು ಬಿಣ್ಣೊನೆ ಬಾಳಿಕಂಭಗ
ಳಿಳಸಿ ಮನ ರಚನೆಯಲಿ ರಚಿಸಿದರಾಗ ಮಂಟಪವ ॥ ೪೪ ॥

ಮಂದಗಮನೆಯರಿಂದುಮುಖಿಯರು
ಕುಂದ ಕುಟ್ಮಳ ಸಾಮ್ಯ ಕುಚೆಯರು
ಬಂಧುರವ ಬಲ್ಮುಡಿಯ ಬಡುನಡು ಕಂಬುಗ್ರೀವೆಯರು
ಚಂದನಾದಿ ಸುಗಂಧ ಪೂಸುತ
ಚೆಂದುಟಿಯ ಚಂಚಲ ಸುನೇತ್ರೆರು
ಪೊಂದಿ ಬಂದಾ ವಿವಹ ಮಂಟಪದಲ್ಲಿ ಶೋಭಿಪರು ॥ ೪೫ ॥

ಕೀರ ನುಡಿಯರು ಕೋಕ ಕುಚೆಯರು
ಸಾರಸಾನನೆ ಚಾರುಕದಪಿನ
ನೀರೆಯರು ವೈಯ್ಯಾರಿಯರು ಜಂಭಾರಿ ಸತಿಸಮರು
ಹಾರ ಮುತ್ತಿನ ಕಂದ ಪದಕಂ
ಸಾರ ಕನಕಾಭರಣ ಭೂಷಣ
ಸಾರಿಯರು ಪರಿತಂದರಾ ಶುಭಲಗ್ನ ಮಂಟಪಕೆ ॥ ೪೬ ॥

ಭಕ್ತರುಂ ಬಹುಶಾಸ್ತ್ರ ಕೋವಿದ
ರುಕ್ತರುಂ ಘನಚತುರ ರಸಿಕರು
ಭಕ್ತಿಯೂರ್ಜಿತ ಶರಣಧರ್ಮ ಪರಾಯಣೋತ್ತಮರು
ವ್ಯಕ್ತರುಂ ಸವಿಗಾನ ಕೀರ್ತನಾ
ಸಕ್ತರುಂ ಶುಭಲಗ್ನ ವಿಧಿ ಪ್ರ
ಯುಕ್ತ ಕಾರ್ಯಾಧ್ಯಕ್ಷರಿಂಬಲು ಒಪ್ಪಿತ್ತಂದರವು ॥ ೪೭ ॥

ಸುಮದಿ ಸರಮಾಲೆಯನು ರಚಿಸುತ
ವಿಮಲ ಶ್ರೀಗಂಧವನ ತೇಯುತ
ಕ್ರಮದಿ ಕಲಶವ ತುಂಬುತಂ ಸೇಸೆಯನು ಪಸರಿಸುತ
ಸಮದುಕೂಲರಸಿಣವು ಕುಂಕುಮ
ಸುಮನ ಪರಿಮಳ ತೈಲಭಸಿತವ
ಸುಮನದಿಂದಳವಡಿಸುತಿರ್ದರು ಸುಂದರಾಂಗಿಯರು ॥ ೪೮ ॥

ದಧಿಕ ಚೂರಂ ಪೂರ್ಣ ಕುಂಭಂ
ಮಧು ಸುಲಾಜ್ಜ ಸರೋಜ ತಂತುಂ
ಮೃದುಲ ರೋಚನಮಾದಳದ ಪೊಂಬಾಳೆ ಕಂಭಗಳಂ
ಸುಧೆ ರಸಾಲಂ ಗುಗ್ಗಲಂ ಸ
ದ್ವಿಧಿಗವಸ್ಯ ಪದಾರ್ಥಗಳನಾ
ವಿಧು ಮುಖಿಯರಳವಡಿಸೆ ಮೆರದುದು ಲಗ್ನ ಮಂಟಪವು ॥ ೪೯ ॥

ಕವಿದ ಮಂಗಲವಾದ್ಯ ರಭಸವು
ಸ್ತವನ ಮಂತ್ರಾದಿಗಳ ಶಿವಘೋ
ಷವನು ಗೈಯ್ಯುವದೆಲ್ಲವಂ ಸುವಿನೋದ ಕಾಣುತಿರೆ
ಯುವತಿ ಸಮು ಮಂಗಲವ ಪಾಡುವ
ಸವಿಯು ಮಿಗೆ ಸಂಭ್ರಮಿಸಿ ಲಗ್ನೋ
ತ್ಸವದ ಮಂಟಪ ಮೀರಿ ರಾಜಿಸಿತು ವೈಭವದಿ ॥ ೫೦ ॥

ಪರಮ ಮುತ್ತೈದೆಯರುಂ ಸಂಭ್ರಮ
ವೆರೆಸಿ ಪವಳುಂಬೆಯನು ಶಿವಲಿಂ
ಗ್ವರನನಾಂ ಹಂದರದಿ ಕರತರುತರಿಶಿಣವ ಪೂಸಿ
ವರಜಲಟಮಿಸಿಸುತ್ತ ವಸ್ತ್ರಾ
ವರಣಗೈಸುತ ಭಸಿತ ಗಂಧವ
ಧರಿಸಿ ಕುಂಕುಮವಿಟ್ಟು ಪೂಮಾಲೆಗಳು ಪೂದಂಡೆ ॥ ೫೧ ॥

ಸುದತೆಯರು ಧರಿಸಿದರು ಕನ್ನೆಗೆ
ಸುದಯ ಶಿವಲಿಂಗಗೆ ಮಾತುಲ
ಮುದದಿ ಪೂಮಾಲೆಯನು ಪಾಕುತ ಭಾಸಿಗವ ಧರಿಸೆ
ಪುದಿದ ಸಭೆ ಬೆರಗಾಗಿ ಕಾಣುತ
ವಿಧವಿಧದಿ ಬಣ್ಣಿಸಿದರೀರ್ವರ
ನದನು ಪೇಳಲುಬಾರದೆನಿಂ ಪೇಳ್ವೆತಕ್ಕನಿತ್ತು ॥ ೫೨ ॥

ಶಿವೆ ಶಿವೆನೆಂತೆಂಬೆನೆಗಳ
ಡಿ ವಿಷ ಚಂಡನ ರುಂಡವಿಲ್ಲವು
ತವೆ ಹರಿಯುಲಕುಮೆನಲು ಕುಟಿಲತೆ ಚಪಲತೆಗಳಿಲ್ಲ
ಕುವಜ ಸರಸ್ವತಿ ಸತ್ಯರೆನೆ ಪುಸಿ
ಕವದು ವಿದ್ಯಾಮದಗಳಿಲ್ಲವು
ಮಿವರೊಳೇನಿಲ್ಲಿಃಕಲಂಕ ವಧೂವರರ ತೆರನ ॥ ೫೩ ॥

ನೆರೆದ ಗುರುಹಿರಿಯರಿಗೆ ಹರ ಭ
ಕ್ತರಿಗೆ ಚರ ಶರಣರಿಗೆ ಜನನಿಗೆ
ಭರದಿ ಫಲಪುಷ್ಪಾದಿಗಳ ಪದಕಿಡುತಲಭಿನಮಿಸಿ
ಹರಸ ಸ್ಮರಿಸುತಲಾಗಳಾ ವಧು
ವರರು ಪಂಚ ಕಲಶಗಳೆದುರೊಳು
ಮಿರದೆ ಮಂಡಿಸೆ ರಾಮಲಿಂಗಾಚಾರ್ಯಗಂ ನಮಿಸಿ ॥ ೫೪ ॥

ಪ್ರೇಮದಿಂ ಗುರುಪಂಚ ಕಲಶಗ
ಳಾ ಮಹಾ ಸೂತ್ರವನು ಕರದಲಿ
ನೇಮದಿಂ ಕೊಟ್ಟ ಲಘು ವಿಧಿಗನುಸರಿಸಿ ಶುಭ ಮುಹೂರ್ತ
ಯಾಮದೊಳು ಶೃತಿಘೋಷವೂಣ್ಮೆರೆ
ಸ್ತೋಮ ಪಲವಾದ್ಯಂಗಳುಲಿಯಲು
ಸ್ವಾಮಿ ಮಂಗಲ ಸೂತ್ರಧಾರಣಗೈಯ್ಯಲನಿತರಲಿ ॥ ೫೫ ॥

ಜನನಿ ಜನಕರು ಸುತೆಗೆ ಜಾಮಾ
ತನಿಗೆ ವರದಕ್ಷಣೆಯ ಬಳವಳಿ
ಯನು ಕೊಡುತ ಧಾರೆಯನು ಮೆರೆವಲೆ ಮಹಿಮ ನಿನ್ನಿಂದ
ಜನುಮ ಶುದ್ಧಾಯ್ತಯ್ಯ ನಮ್ಮಯ
ತನುಜಳಿಗೆ ಸುಖವಾಯ್ತುಮಿಂದಿಗೆ
ಮನುಮಥಾರಿಯ ಭಕ್ತ ಶಿವಲಿಂಗಾಖ್ಯ ನೀನೆಂದು ॥ ೫೬ ॥

ಸ್ತುತಿಸೆ ಸಭೆ ಜನವಿತತಿ ಪಾರ್ವತಿ
ಪತಿಯೆ ಜಯಜಯ ಮಹಾದೇವೆಂ
ದತಿಶಯಂಬೀ ನಾದದೊಳಗಕ್ಷಯ ಸುಖಂಗೊಡುವ
ವಿತತ ವೈಭವದಕ್ಷತವ ಪಾ
ಕುತಲಿ ಕ್ರಿಯಗಳಲೇರ್ಚಿಸುತ ದಂ
ಪತಿಗಳಿಗೆ ಸೇಶೆಯನು ತಳೆದಾರತಿಯ ಬೆಳಗಿದರು ॥ ೫೭ ॥

ತ್ವರದಿ ನೆರದಿಹ ಭಕ್ತ ಚರವರ
ಶರಣ ಪ್ರಮಥಾದಿಪರ ತಣಿಸುತ
ಲಿರದೆ ಧನವಸ್ತ್ರಾದಿಗಳ ದಾನಿತ್ತು ಸಂತಸದಿ
ಪುರದಿ ಮೆರವಣಿಗೆಯನು ಗೈಸುತ
ಭರದಿ ಗುರುಪದದೆಡೆಗೆ ಒರೆ ತ
ತ್ತರುಳ ತರುಳಿಗೆ ಹರಿಸಿ ಹಾರೈಸಿದನು ಗುರುವರನು ॥ ೫೮ ॥

ಸ್ವಾಮಿ ಸರ್ವಜ್ಞಸುದಯಾ ವಿ
ಶ್ರಾಮ ಸದ್ಗುರುರಾಯನೆನುತಂ
ಭೂಮಿಯೊಳು ಸೈಗೆಡದು ವಂದಿಸಲನಿತರೊಳು ಘನರು
ಪ್ರೇಮದನರಾಗುತಲಿ ತನಯನೆ
ಕಾಮವೈರಿಯ ಭಕ್ತಿಯಲಿ ನಿ
ಸ್ಸೀಮನಾಗಿರುತಿರಲು ರಕ್ಷಿಪ ಮಾಯಮರ್ದನನು ॥ ೨೯ ॥

ಪವಳಿ ನಿನ್ನಯಧವನೆ ಗುರುವೆಂ
ದವಿರತಂ ಮನವೊಸೆದು ಸೇವೆಯ
ಸವನಿಸಲು ಪತಿಯಿಂದ ಸುಖವದು ನಿನಗೆ ಲಭಿಸುವದು
ಶಿವನೆ ನಿಮ್ಮನು ಪೊರೆಯುತಿರ್ಪನು
ಭವದ ಬಾಧೆಯು ನೀಗಿದೈ ನೀ
ಕುವರ ಶಿವಲಿಂಗೇಶ ಸದ್ಗುಣ ಕೋಶಮಮ ಶಿಷ್ಯ ॥ ೬೦ ॥

ನಿರುತಮಾತೆಯ ಸೇವೆಗೈತಿರು
ಹರಶರಣ ಚರರರ್ಚಿಸುತ್ತಿರು
ಪರಮ ದಯಗುಣವಾಂತು ಧರೆ ಪ್ರಾಣಿಗಳನರಿಯುತಿರು
ಮರಿಯದಿರು ಶಿವಭಕ್ತಿ ಸದ್ಗುಣ
ಮರಿಯದಿರು ಮಮತರುಳನೆನುತಲಿ
ಹರಿಸಿ ತನ್ನಯ ಪುರಕೆ ಪೋದನು ಪರಮ ಗುರುರಾಯ ॥ ೬೧ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ಸಪ್ತ ಸಂಧಿಯಿದು ॥ ೬೨ ॥

ಅಂತು ಸಂಧಿ ೭ಕ್ಕಂ ಪದನು ೬೩೧ಕ್ಕಂ ಮಂಗಲಮಹಾ ಶ್ರೀ ಶ್ರೀ

## ಸಂಧಿ ೮

ಶರಣ ಶಿವಲಿಂಗೇಶ ಸತಿಯಳ
ನಿರದೆ ಕಳಪುತ ಹರಪುರಕೆ ತಾ
'ರುಚರಾರ್ಚನೆ ಗೈಯುತ್ತಿರ್ದನು ಪರಮ ವಿರತಿಯಲಿ ॥ ಪಲ್ಲ ॥

ಸಕಲದೇವ ಸುರಾಸುರೇಶ್ವರ
ಮಕುಟತಟ ಸಂಘಟಿತ ರತ್ನ
ಪ್ರಕರ ದಿಧಿತಿ ಪುಂಜರಂಜಿತ ಮಂಜುಳಾಂಘ್ರಿಯುಗ
ಶುಕಸನಕ ಮುಖ್ಯಾದಿ ಮುನಿಜನ
ಪ್ರಕಟಿತೋತ್ತಮ ಚರಿತ ಘೋರಾಂ
ಧಕ ಹರಣ ಗೌರೀಶ ಶಿವಲಿಂಗೇಶ ಗುಣಕೋಶಾ ॥ ೧ ॥

ಉದಯಕಾಲದೊಳೆದ್ದು ಶರಣನು
ಮದನ ಹರನನ್ನೆನೆಯುತಂ ತಾ
ಮುದದಿ ಬಹಿಃಕಾರ್ಯಗಳ ತೀರಿಸಿಬಂದು ಮುಖದೊಳೆದು
ಪುದಿದು ಭಸ್ಮವನಾಗ ಮಾತೆಯ
ಪದಕೆ ವಂದಿಸುತಾಗಳುಂ ಗುಣ
ಸದಯ ತನ್ನಯ ಗೃಹದ ಕೃತ್ಯದಿ ತೊಡಗಿ ದುಡಿಯುವನು ॥ ೨ ॥

ಪಿತನು ಗಳಿಸಿದ ದ್ರವ್ಯವಿಲ್ಲಂ
ಹಿತದ ಮಾತೆಯ ಬಳಿಯೊಳೇನಿ
ಲ್ಲಿತತ ಮನೆ ಪ್ರಾಪಂಚ ನಡೆಯುವದೆಂತುಮಿವನಿಂದ
ಕೃತಕ ಕಾಪಟ್ಯಾದಿ ಕುಟಿಲತೆ
ಸತತ ಗೈಯ್ಯಲು ಸಾಗದಿಹಮೀ
ಪತಿತ ಸಂಸಾರಾಂಧಕಾರಂ ಘೋರವಲ್ಲಗುರಂ ॥ ೩ ॥

ಶರಣ ಶಿವಲಿಂಗೇಶನೆಂದುಂ
ತರುವ ಕೊಡುವದು ಬಲ್ಲನೇಮೇ
ಣ್ಪರಿಯು ಧನಿಕರ ಪರಿಚಯಂ ಮೊದಲಿಲ್ಲಮಿವನೆಂದು
ಹರಿದು ಕೃಷಿತನ ಮಾಡಬಲ್ಲನೆ
ನರಿಯ ತನ್ನಯನ್ನೈಶರೋ೦ನ್ನತ
ಮಿರಲು ಮತ್ತೊಂದೇಕೆ ಯೋಚನೆ ಎಂದು ಸಿದ್ಧಿಸುತಾ ॥ ೪ ॥

ಪಿಂದೆ ಮುದನೂರಲ್ಲಿ ತವನಿಧಿ
ತಂದೆ ವರ ದಾಸಿಮಯ್ಯರು
ಮೊಂದು ವಸ್ತ್ರವನೆಯ್ದು ಪ್ರಮಥರ ಭಕ್ತಿ ನಡೆಸುತಲಿ
ಕಂದುಗೊರಳನ ಪದವ ಕಂಡರು
ಕುಂದಿ ಕುಳಿತರೆ ಯಾಗ್ವದೇನದು
ಎಂದು ಯೋಚಿಸಿ ತನ್ನ ಕಾಯಕವಾಂತನನುದಿನದಿ ॥ ೫ ॥

ಕುಳಿತು ತಿಂದರೆ ಕುರುಳಿ ಹೊನ್ನಂ
ಬಳಕಿಗಾನ್ವದೆಯೆಂಬ ಗಾದೆಯು
ಹಳೆಯ ನಾಣ್ನುಡಿ ಸಿದ್ಧ ನರಗುದ್ಯೋಗವೇ ಸಿದ್ಧ
ಆಳಲು ಬಂತೆಂದಳು ಕೂತರೆ
ತೊಲಗುವದೆ ತತ್ತಳಲು ಯತ್ನದ
ಬಲುಹಿನಿಂ ಶಿವಧರ್ಮ ಕ್ರಿಯೆಗಳು ನೆಲದಿ ಸಾಗುವವು ॥ ೬ ॥

ಎಂದು ಉದಯದಿ ಕುಳ್ಳಿರದೆ ಸಿತ
ಸಂದರಕಿಯನುಗೈದು ವಸ್ತ್ರವ
ನೊಂದು ಮಧ್ಯಾನ್ಹರಿಯ ನೇಯುತ ಕೊಟ್ಟು ಧನಿಕರಿಗೆ
ಬಂದ ಹಣದಿಂ ಶರಣ ಪ್ರಮಥರ
ವೃಂದ ದಾಸೋಹವನು ಗೈಯ್ಯುತ
ಕುಂದು ಕುಟಿಲನ್ಯಾಯ ನೆನೆಯದೆ ನಡೆಸಿ ಸಂಸಾರ ॥ ೭ ॥

ತಾನು ತಾಯಿಯು ಸೋದರತ್ತೆಯು
ಮಾನಿ ವೀರಂಮಾಖ್ಯೆಳೆಂಬಳು
ಮಾನಿ ತನು ಶಿವಲಿಂಗನೋರ್ವನೆ ದುಡಿಯ ಕಳವಳಿಸಿ
ತಾನು ಕೂಡದೆಮಿವನ ಸರಿಯಾ
ಮಾನಿನಿಯು ಮನೆ ಕೆಲಸ ನೈಸರ
ದೇನು ಕಾರ್ಯವ ಸರ್ವವೆಲ್ಲನು ಜರುಗಿಸುತ್ತಿರಲು ॥ ೮ ॥

ತನುವಿಗಂ ಕರದಂದದಿ ಲೋ
ಚನಕೆವೆಯು ಪರಿಯಿಂದಲಾ ಘನ
ಮನಕೆ ಕರಣೇಂದ್ರಿಗಳು ಸಾಹ್ಯವಗೈದ ತೆರನಂತೆ
ಸನುತ ಶಿವಲಿಂಗನಿಗೆ ವೀರ
ಮ್ಮನುನಯಂ ಸಾಹ್ಯಾಗುತಿರ್ದುರೆ
ಮನೆಯ ಕಾರ್ಯವ ನಡಿಸಲೀ ತೆರನರಿದು ಶಿವಲಿಂಗ ॥ ೯ ॥

ಸಾವಧಾನದಿ ನಿಯುತ ವ್ರತದಿಂ
ದಾವುದೊಂದಕೆಯುಂಟಿಕೊಳದಾ
ಭಾವ ಭಕ್ತಿಲೆ ಲಿಂಗಪೂಜೆಯಗೈವ ತ್ರೈಕಾಲ
ಸೇವಿಸುತ ಚರ ಶರಣಪದ ಮನ
ತೀವಿದಾನಂದದಲಿ ಶಿವ ಭಜ
ನಾವ ಕಾಲದಿ ಗೈಯ್ಯುವಂ ವರ ಮೋಕ್ಷ ಸಾಧನಕೆ ॥ ೧೦ ॥

ನಿತ್ಯ ಕ್ರಿಯ ನಿತ್ಯಾತ್ಮ ಶ್ರದ್ಧೆಯು
ತತ್ವ ವಚನಾಶಾಸ್ತ್ರ ಮೂಲವ
ನರ್ಥಿಯಿಂ ಪರಿಸುತ್ತ ತನ್ನೊಳು ತಾನೆ ತಿಳಿಯುತ್ತ
ಕರ್ತುಗುರುಬೋಧಾಖ್ಯ ಮಂತ್ರವ
ಚಿತ್ತ ಶುದ್ಧದಿ ಸ್ಮರಿಸಿ ಭವಹರ
ಮತ್ತಿಭೂತಿಯ ಧರಿಸಿ ಪರತರ ವೀರಶೈವದಲಿ ॥ ೧೧ ॥

ಬೆಳಗಿ ಶಿವಕಳೆ ಮುದ್ರೆಗಳನಂ
ತಿಳಿದು ತತ್ವಂ ಪದವಕುಳನಂ
ಮುಳಿವ ಮನಕರಣಾದಿ ವಿಷಯಂ ಕಳೆದು ನಿಶ್ಚಲದಿ
ಹಳಿದು ಕಾಮವಿಕಾರ ಗುಣವಂ
ತಳೆದು ಸೈರಣೆ ಶಾಂತಿ ಶಮೆದಮೆ
ಗಳಲಿ ವರ್ತಿಪನಿಂತು ಶಿವಲಿಂಗಾಖ್ಯನನವರತಂ ॥ ೧೨ ॥

ವೀರಶೈವರುಗಳಲಿ ನೈರಾ
ಭಾರಿ ಸಾಮಾನ್ಯಿರೆಷ್ಟೆಂಬುವ
ಮೂರು ವಿಧಗಳನರಿತು ಪ್ರತಿಯೊಂದದರ ಧರ್ಮವನು
ಬೇರೆ ಬೇರಾಚರಿಸಿ ನೈರಾ
ಭಾರವೇ ಮಿಗಿಲೆಂದು ಮಾರಿಗು
ತೋರಗೊಡದಾ ಚರಿಪ ಜಗದಲಿ ಜಾಣ ಸುಪ್ರವೀಣಾ ॥ ೧೩ ॥

ಸತಿ ವಿದ್ಯೆ ಸುತಜ್ಞಾನ ಬಂಧು ವಿ
ರತಿ ಕ್ಷಮಾಪರಿಚಾರಕಾಚಾ
ರ್ಪಿತನು ಮಾತಾ ಭಕ್ತಿಸುತೆ ಸತ್ ಶಾಂತಿಯೇ ಸಖಿನು
ಸುತನ ಸುತ ಮೈತ್ರಾದಿ ಸದ್ಗುಣ
ತತಿಯೆ ಶ್ರದ್ಧೆಯು ತೋಷ ಸೊಸೆತನು
ಮತಿಯೆ ಕ್ಷೇತ್ರಾ ಹಿಂಸೆದಾಸ್ಯಾಸ್ತೇಯ ವೇದಾಸ ॥ ೧೪ ॥

ಧರ್ಮವಾಹಕನಾಗಿ ಪ್ರತಿದಿನ
ಧರ್ಮ ಶಿವಶರಣನುಮರ್ಚಿಸಿ
ಧರ್ಮ ಭಕ್ತಿ ಪ್ರಸಾದಮಂ ನೀಡುಂಡು ಶೇಷಮನಂ
ಧರ್ಮಬಾಧೆಯ ನೀಗಿ ಸ್ವಕುಲದ
ಕರ್ಮಕರ್ತವ್ಯನುಸಾರದ
ಧರ್ಮದಿಂ ಪರಮಾರ್ಥವೆನುವ ಕುಟುಂಬಯುತನಾಗಿ ॥ ೧೫ ॥

ಜ್ಞಾನ ದಂಡವ ಪಿಡಿದು ಕರದಭಿ
ಮಾನ ಕಂಥೆಯುದಕ ಮಂಡಲ
ಧ್ಯಾನದಾವಿಗೆ ಮೆಟ್ಟಿ ಪದದಲಿ ಶಿರದಿ ಜಡೆಗಟ್ಟಿ
ದಾನವಂನ ಸುಸ್ನಾನವನಿಸುತ
ಮಾನವಪ್ರಮಾಣ್ವಹಿಸಿ ಭಸ್ಮವ
ತಾನುತ್ರಿರತಿಯ ಪಾತ್ರೆ ಕ್ಷಮೆ ಘುಟಿಕಾದಿ ಧಾರಣದಿ ॥ ೧೬ ॥

ಭೂಮಿ ಹಾಸಿಗೆ ಗೈದು ಮೇಲಣ
ವ್ಯೋಮವೇ ಹೊದಿಕೆಂದು ಮೆರೆಯುತ
ಲಾ ಮಹಾದಿಶವಷ್ಟ ಮುಡಿಗೆಯು ವಸನವೆಂದರಿದು
ಕಾಮಿಸದೆ ಭೋಗಾರ್ಥ ವಿಷಯವ
ನಾ ಮಹಾಶಿವಯೋಗಿ ವೇಷದಿ
ನಾಮ ಶಿವ ತ್ರೈಪುಂಡ್ರ ತ್ರೈಗುಣ ಭಸಿತವಂ ಧರಿಸಿ ॥ ೧೭ ॥

ಶಿವಲಿಂಗ ಶರಣೇಶ ನಿರ್ಮಲ
ಶಿವಯೋಗಿ ಶಿವಲಿಂಗ ವರ್ಚಿಸಿ
ಶಿವನೈಷ್ಠೆ ಶಿವಭಕ್ತಿ ಪರಶಿವ ನೇಮ ಭಜನೆಯಲಿ
ಶಿವಪಥಾಚಾರಕನು ಜಪಮನು
ಶಿವಕುಳ ಸ್ಥಳ ಗುರು ವಿವೇಚನ
ಶಿವನೆ ಜೀವಾಜೀವ ಶಿವನೆಂಬರುವಿನಲಿ ನೆಲೆಸಿ ॥ ೧೮ ॥

ಲೋಕದೊಳು ವರ್ತಿಪನು ನಿಜಪರ
ಲೋಕ ಸಾಧಕನೆನಿಸಿನಿಶಿದಿನ
ವೇಕ ಮಾನಸನಾಗಿಯೇಕಾತ್ಮದಲಿ ಬೆಳಗುತಲಿ
ಸಾಕ ಸಲಹಿದ ಮಾತೆಯಂ ಸುವಿ
ವೇಕ ಪೊರೆಯುತಲಿರ್ದನಿವನೀ
ಲೋಕ ಮಾನವನಲ್ಲ ಶಿವಲೋಕಿಗನೆ ನಿಜನಿಜವು ॥ ೧೯ ॥

ಇಂದ್ರಿಯಂಗಳ ಬಲವಗಣಿಸದೆ
ನಂದಿವಾಹನ ಶರಣ ಶಿವಲಿಂ
ಗೇಂದ್ರ ಪವಸಹ ತುಚ್ಛವೆಂದಿರಾತ್ಮ ಬುದ್ಧಿಯಲಿ
ಬಂಧ ಮೋಹ ಪಿಶಾಚಿಗಂಜದೆ
ನಿಂದುಕೋಪಾಟೋಪ ವ್ಯಾಘ್ರನ
ಮುಂದೆ ಕ್ಷಮೆ ಕವಚವನು ಧರಿಸುತ ಜ್ಞಾನ ಖಡ್ಗದಲಿ ॥ ೨೦ ॥

ಕಾಮ ಸೀಮೆಯುದಾಂಟಿ ಧರ್ಮದ
ದಾಮುಖಕ್ಕೌಷಧಿಯ ನೀವುತ
ಪ್ರೇಮ ಬಲೆಯಂತರಿದು ಬಿಸುಡುತ ಲೋಭಮಂ ತುಳಿದು
ಸ್ವಾಮಿ ಪೂಜಾಸನವಗ್ರೈಯ್ಯುತ
ಲಾ ಮಹಾಮತ್ಸರವ ವಧಿಸುತ
ಧಾಮದೊಳು ಸುಖಿಮಿರ್ದ ತನ್ನಯ ಕಾಮುಕಂಗೈದು ॥ ೨೧ ॥

ಗುರುಚರರೆ ತನಗಂಗವೆಂದುಂ
ಗುರುಚರರೆ ಶಿವಲಿಂಗವೆಂದುಂ
ಗುರುಚರರೆ ಪಿತೃಮಾತ್ರ ದೈವಾಳಿಗಳ ಸಮವೆಂದು
ಗುರುಚರರೆ ಕರಣಂಗಳೆಂದು
ಗುರುಚರರೆ ನಿಜಲಿಂಗ ಕಲೆಯೆಂ
ದಂದು ಸೇವಿಸುತಿರ್ದನವರಂ ದಾಸಭಾವದೊಳು ॥ ೨೨ ॥

ಲೋಕದವರೀಕ್ಷಿಸಿದೊಡೀತಂ
ಮೂಕನೆಂದವರಿ ಕಂಡೊಡು ಶಿವ
ಸೌಖ್ಯ ಪದಭಕ್ತಿಯಲಿ ಮುನ್ನಿನ ಶರಣರಂತಿರ್ದಂ
ಲೌಕಿಕರುಮಿವನೆತ್ತ ಬಲ್ಲರು
ಕೋಗಿಲೆಗೆ ಕಾಕೆನುವ ಪರಿ ಪರ
ಮಾಖ್ಯರೊಳು ಪಂಡಿತನು ತಾನೆನಿಸುತಲಿ ಮರೆಯುವನು ॥ ೨೩ ॥

ಭ್ರಮರಗಳು ಕುಸುಮವನು ಪಣ್ಣನು
ವಿಮಲ ಶುಕ ಪಿಕ ಪಕ್ಕಿನಿಕರವು
ಶ್ರಮಹಗೊಂಡಿಹ ಪಥಕ ವೃಕ್ಷದ ತಂಪು ನೆಳಲವನು
ಕುಮುದ ಚಂದ್ರನ ದೀನದಾತರ
ಮುಮುಕ್ಷ ಮೋಕ್ಷವ ಬಯಸುವೋಲ್ ಶಿವೆ
ರಮಣ ಶರಣನಪೇಕ್ಷಿಸುತ್ತಿರ್ದಂ ಗಣಾರ್ಚನೆಯ ॥ ೨೪ ॥

ಠಂಕನಡವಿಯೊಳ್ಪುಗಿದ ಪೊನ್ಗೊಡ
ಭೇಂಕನೆ ಕಂಡಂತೆ ಕೃಷಿಕಾ
ತಂಕಮಾಗಿಹ ಮೇಘ ಸುರಿಯಲ್ಕುಬ್ಬುವಂದದಲಿ
ಸಂಕಟದಲಿರುವತ್ತೆಮನೆ ಸೊಸೆ
ಯಂಕತವರೂರ್ಕಂಡ ತೆರನಾ
ಲೆಂಕ ಶರಣಂ ಪ್ರಮಥರಂ ಕಂಡುಬ್ಬುವಂ ಮುದದಿ ॥ ೨೫ ॥

ತನ್ನ ನೇಮವ ಬಿಡವೆ ಶರಣನು
ಚೆನ್ನ ಕಾಯಕಗೈದು ನಿತ್ಯದಿ
ಸನ್ನುತಾಮಳ ಪ್ರಮಥರಂ ತೃಪ್ತಿಸದೆ ತಾನೆಂದು
ಅನ್ನವಂ ಸ್ವೀಕರಿಸಿ ಕಾಯುದ
ಬನ್ನದಿಚ್ಛೆಗೆ ಮರೆದು ಸದ್ಗುಣ
ಮುನ್ನವೇ ತನುಮನ ಧನಂಗಳನರ್ಪಿಸಿದವನುತೆ ॥ ೨೬ ॥

ಅಸಿತ ಕಲಿ ಶಿವಲಿಂಗ ಶರಣನ
ಜನನಿ ಸುವರ್ಣಾಂಬೆ ಸೊಸೆಯನು
ಮನೆಗೆ ಕರೆತಂದಾಗ ತಮ್ಮಯ ಕೆಲಸ ಕಲಿಪುದಕೆ
ಸುನಯಳಿವಳತಿಗುಣೆಯು ಪವಳೆಯು
ಇನಯ ನಂತರ ತಿಳಿದು ಸೇವೆಯ
ನನುವಿನಂತಾಗೈಯ್ಯತೊಡಗಿದಳಿನ್ನು ಚಿಕ್ಕವಳು ॥ ೨೭ ॥

ಕುಂದರದನೆಯು ಕುಮುದನೇತ್ರೆಯು
ಮಂದ ಗಮನೆಯಳಿಂದುಮುಖಿಯಳು
ಕಂದುಗೊರಲನ ಭಕ್ತ ಶಿವಲಿಂಗೇಶನರ್ಧಿಪಳು
ಹೊಂದಿಗೃಹದಲಿ ಸಂದಕಾರ್ಯಗ
ಳೊಂದು ಎರಡೆನ್ನದಲೆಗೈವಳ
ನಂದು ಸುವರ್ಣಾಂಬೆ ಸೊಸೆ ಗುಣಕಂಡು ಹರುಷಿಪಳು ॥ ೨೮ ॥

ನನ್ನ ಕುವರಗೆ ತಕ್ಕ ಕನ್ನೆಯು
ಚಿನ್ನ ಗುರುವಿವಹಂನುಸ್ಯೆಯುತ
ಧನ್ಯರಾಗಿರಿಯೆಂದು ಮನ್ನಿಸಿ ಮಾನ್ಯರ್ಧರಕೆಯನು
ಮುನ್ನವೇ ದಯಪಾಲಿಸಿರಲವ
ರುನ್ನತೋಚನಕೆ ಬನ್ನಬಪ್ಪುದೆ
ಸನ್ನುತಾಂಗಿಯ ಪವಳಿ ನಾಮವು ಸಿದ್ಧ ಬಲು ಶುದ್ಧ ॥ ೨೯ ॥

ಈ ತೆರನಂ ಕೊಂಡಾಡೆ ಸೊಸೆಯನು
ಪ್ರೀತಿಸುತ ಚಿನ್ನಾಂಬೆಯಿರುತಿರ
ಲೋತು ನೆರೆ ಹೊರೆ ವಾಸಿಪಾ ಪೆಂಗಳಿಯರದು ಕಂಡು
ರೀತಿಯೇ ಸುವರ್ಣೆ ನಿನ್ನದು
ಕೋತಿ ಸೊಸೆಯರಸ್ಥೊಗಳ್ವುದಿಲ್ಲದು
ಛೀ ತಗೀ ಮಾತಲ್ಲ ಮುಂದೆಯು ಘಾತಬರದಿರದು ॥ ೩೦ ॥

ಪೋಗಳಲಿವಳೀ ತಲೆಯ ಮೇಲ್ಕುಳಿ
ತುಗಿಯುವಳು ಮುಖದೊಳಗೆ ಮುಂದೆಯು
ಹಗರಣವು ಬರದಿರದು ಸುತಸೊಸೆ ಕೂಡಿ ಸಂಸಾರ
ನಗುತ ಗೈಯ್ಯುವ ವೇಳೆಯಲಿ ಸೊಸೆ
ಬಗೆಯ ತಿಳಿವದು ಮಾಗಲೀಗೇಂ
ಸೊಗಸದಿದು ನಮಗೆಂದು ವೋಣೆಯ ಮುದವಿಯರು ನುಡಿಯೆ ॥ ೩೧ ॥

ಸತ್ಯವಹುದೀ ಮಾತು ಸೊಸೆಯರು
ಮತ್ತೆಯಳ ಮಂದಿರಕೆ ಬರಲುಂ
ಚಿತ್ತ ಬೇರಾಗುತಲಿ ನಾಲ್ಕೆಂಟ್ಹತ್ತು ದಿನಗಳಲಿ
ತತ್‌ಕ್ಷಣಕೆ ಸೊಸೆಯಳನು ಕಂಡುರಿ
ಯುತ್ತ ವ್ಯಪ ಕಲಹವನು ಎಬ್ಬಿಸಿ
ವ್ಯರ್ಥ ಸುಖ ಸಂಸಾರದೊಳು ವಿಧಿ ಕರದುಕೊಳ್ಳುವರು ॥ ೩೨ ॥

ಸತಿಯಳಂ ಸುತನೊಪ್ಪಿ ಪ್ರೀತಿಸ
ಲತಿಶಯಂಬಿನದಿ ತಮವಳಿಂ
ಹಿತದಿಯುಣ ನೀಡಿಸಿಕೊಳ್ಳುತ್ತಲಿ ಮಾತನಾಡುತಲಿ
ಸತಿಯಳಾಸರ ಬೇಸರವನಂ
ಪತಿಯು ಕೇಳುತ ಕನಿಕರಂಬಡೆ
ಖತಿಗೊಳುತ ಮುದಿಗುಣೆಗಳತಿ ನಿಗ್ಗರವ ಗೈಯ್ಯುವರು ॥ ೩೩ ॥

ಮನೆಗೆ ಸೊಸೆಯಳು ಬಂದರಾಗಳೆ
ಮನಕೆ ಬಂದಂತ್ತೊರಗೆ ತಿರುಗುತ
ಕನಲಿ ಕಿಡಿಕಿಡಿಯಾಗಿ ತಪ್ಪಂ ಕೆಣಕಿ ತೆಗೆಯುತಲಿ
ಸನುಮತಿಲ್ಲದೆ ನೆರೆಹೊರೆಯ ದು
ರ್ವನುತೆಯರನಂ ಬರಿಸಿ ದೂರುತ
ಲುಣಿಸಿ ದುಡಿಸುವ ಸೆರೆಮನೆಯು ನರನಂತೆ ದುಡಿಸುವಳು ॥ ೩೪ ॥

ತನ್ನ ಸುತೆಯಂ ಪೊರಗೆ ಕೊಟ್ಟ
ಲಿನ್ನುಮಾಕೆಯಳತ್ತೆ ದುಡಿಸುತ
ಬನ್ನ ಕೊಡಲದ ಕೇಳೆ ತನಗಾ ದುಃಖಮೆಂತಹುದೋ
ನನ್ನಿ ತನ್ನಯ ಸೊಸೆಯು ಪಡೆದಳಿ
ಗಿನ್ನು ಮಾಗ್ವದು ನಿಜವಿದೆಂಬೀ
ಸನ್ನುತಾಮಳ ಬುದ್ಧಿಯಿವಳಿಂಗೇಕೆ ಬರದಕಟ ॥ ೩೫ ॥

ಮಗನ ಪ್ರೇಮದ ಹಣ್ಣುಮೀ ಹೆ
ಣ್ಣೊಗಸುತನಯರ ವಂಶಫಲಿಪುದು
ಜಗದೊಳಗೆ ಪಬ್ಬುವದುಮಿವಳಿಂ ಕೀರ್ತಿಸುತಗೃಹಕೆ
ಬಗೆದು ಸೊಸೆಯಂ ಪ್ರೀತಿಸಲ್ತನ
ಗಗಣಿತೋತ್ಸವಲಭಿಸಿ ತೋರ್ಪುದು
ಹಗುರಮಿದನಾಚರಿಸಲತ್ತಿಸರೇಕೆಯತ್ತೆಯರು ॥ ೩೬ ॥

ಪರರ ಮಗಳುಂ ತನಗೆ ಸೊಸೆಯಾ
ಗಿರಲು ಪ್ರೀತಿಸಿ ಪೊರೆಯುತಂ ತವ
ಹರಣಕೊಡುತಂ ನಡಿಸಿಕೊಳುತಿರುವತ್ತೆ ಮಂದಿರವು
ಗಿರಿಜೆಯುದಿಸಿದ ಹೈಮವತ ಗಿರಿ
ಸರಿಯು ಸಹಜವು ಶಾಂತಿಕೀರ್ತಿಯು
ಮಿರುವಳಲ್ಲೇ ಲಕ್ಷ್ಮಿ ಬಿಡದಾನಂದಮಂತಾಳ್ದು ॥ ೩೭ ॥

ಮಾವನತ್ತೆಯರುಮುಂ ಮಾಧವ
ದೇವರಿವರೆಂದರಿದು ಮತ್ತೆಯು
ಭೂವಲಯದಲಿ ಪಡೆದ ತಾಯ್ಪಿತರಿಂದಲಧಿಕೆಂದು
ಜೀವದಾಣ್ಮನೆ ಗುರುವರೇಣ್ಯನು
ಭಾವ ಮೈದುನ ವಿಷ್ಣುವಜನಂ
ಭಾವ್ಯ ನಾದುನಿಯುಂ ನೆಗೆಣ್ಣೆಯು ಸಿರಿಯು ಶಾರದೆಯು ॥ ೩೮ ॥

ಎನುತ ವರ್ತಿಸುವವಳೆ ಸೊಸೆಯುಳು
ಇನಯುನಂ ಕೈವಶವ ಕೈಕೊಂ
ಡನಿತು ಸರ್ವರ ಕಂಡು ಕದನಕೆ ಕಾಲು ಕೆದರುತ್ತ
ತಿನುತ ಎಲ್ಲರನುಳಿದು ಘರ್ಜಿಸಿ
ಕನಲಿ ಮಾವತ್ತೆಯರ ದಂಡಿಸಿ
ವನೆವಳವಳಲ್ಲೊಸೆಯು ಮಾರಿಯು ಮಸಣಿ ಬಲು ಪಿಸುಣಿ ॥ ೩೯ ॥

ಕಾಯು ಸುಖ ಕಮ್ಮನವನೀಯುದೆ
ತಾಯಿ ತಂದೆಗೆ ಕೀರ್ತಿತರುವ ಸೋ
ಪಾಯು ಗೈಯುವಳವಳೆ ಸದ್ಗತಿ ಸಾಧನೆಸವಳು
ಕಾಯು ಭೋಗಕೆ ಮಚಿ ಮನವ
ನ್ಯಾಯು ಕರ್ಮಕೆ ತೊಡಗಿ ತಲೆನೆಗೆ
ದಾಯಕಿಯು ಘಮ ನಾಯಕಿಯು ಬೇರಿಲ್ಲ ಯಮಸವನ ॥ ೪೦ ॥

ಚಂದನಂ ಕುಂಕುಮವು ದಂಡೆಯು
ಮಂದವಾಲಂಕಾರವಸನಗ
ಳಂದು ಪತಿ ನೈಮಿತ್ಯ ಸೌಭಾಗ್ಯಗಳು ದೊರಕಿರಲು
ಕುಂದಿ ವಿಷಯದಿ ಎಚ್ಚರಿಲ್ಲದೆ
ಹೊಂದಿಮದವಂ ಮೆರೆವ ಸೊಸೆಯಿಂ
ಮಂದಿರಕೆ ಲೇಸಹುದೆ ಗೌರವವಿಲ್ಲ ರೌರವವು ॥ ೪೧ ॥

ಉಪ್ಪುಮಿಲ್ಲಂ ತುಪ್ಪಮಿಲ್ಲಂ
ವಪ್ಪನುಳ್ಳಾಭರಣಮಿಲ್ಮನ
ವಪ್ಪುಗೊಳುವವಾ ಪತಿಯುಮಿವನಲ್ಲತ್ತೆವಳಿತಿಲ್ಲ
ಚಪ್ಪರದ ಗೃಹ ಚಂದವೇ ನ
ಮ್ಮಪ್ಪನಿಲ್ಲೇಕಿತ್ತನೋಯೆನು
ತಿಪ್ಪ ಸೊಸೆಯಿಂದಾಗದೀ ಸಂಸಾರದೊಳು ಸುಖವು ॥ ೪೨ ॥

ಕ್ರೂರ ಭಾಷಿಣಿಯಾದ ಸೊಸೆಯಿಂ
ಘೋರ ಕಷ್ಟಗಳೊದಗದಿರದಿದು
ನಾರಿಮಣಿಯರೆ ಸತ್ಯ ನಿಮ್ಮಯ ವಾಕ್ಯ ಸೊಸೆಯಳನು
ಸೇರದಿರಲಿಂತಾಗುವದು ಸುವಿ
ಚಾರಿ ಗುಣದತ್ತೆಯುಳುಮವಳನು
ಬಾರಿ ಬಾರಿಗೆ ತಿದ್ದಿ ಮನ ಹಾರೈಸುತಿರೆ ಲೇಸು ॥ ೪೩ ॥

ಬೆಳಗು ಜಾವದ ಸೊಡರಿನಂದದಿ
ಪಳಿಯ ತೋಟಕೆ ಬೇಲಿಯಂದದಿ
ಇಳಿಯೊಳೀ ಸಂಸಾರ ಸುಖ ಮಾರ್ಗವನು ತೋರಿಸುತೆ
ಮುಳಿಯುಗೊಡದೋಲೈದರಿಸುತ್ತಂ
ಸಲಹುತಿರಲವಳತ್ತೆಯುದನಂ
ತಿಳಿದು ಸೇವಿಪಳವಳೆ ಸೊಸೆ ಕೇಡಿಲ್ಲವೀರ್ವರಿಗೆ ॥ ೪೪ ॥

ಎಂದು ಓಣಿಯ ಜಾಣೆಯರಿಗಂ
ಚಂದ ಬುದ್ಧಿಯಗಲಿಸಿತಂನಯು
ನಂದನನ ಮಡದಿಯನು ಮುಂದಡೆಯಲ್ಲಿ ಕರೆಯುತಲಿ
ಮಂದಿರದ ಕಾರ್ಯಂಗಳನೆಲ್ಲ
ಹೊಂದಿಕೆಯದಿಂ ತಿಳಿಸಿ ಮಾಡಿಸು
ತೋದು ಘಳಿಗೆಯನಾದರುಂ ಅಗಲಿರಳು ಸೊಸೆಯಳನು ॥ ೪೫ ॥

ಪವಳಿ ಬಾ ಪವಳಾಂಬೆಯೇ ಬಾ
ಪವಿಯ ಬಾ ಪವಿರದನೆಯಳೆ ಬಾ
ಸವಿ ನುಡಿಯ ಶಿವಲಿಂಗ ಮಡದಿಯೆ ಜವದಿ ನೀ ಬಾಬಾ
ಸುವಿಮಲೆಯ ಶಾರದೆಯೆ ಶಿರಿ ಬಾ
ಭೂವಿ ಕುವರೆ ಜಾನಕಿಯೆ ಬಾ ಮುನಿ
ಯುವತಿಯನು ಸೂಯಾತ್ಮಜೆಯ ನೀನೆನುತ ಕರೆಯುವಳು ॥ ೪೬ ॥

ಪವಳಿಯಾದರು ಪತಿಯ ಸೇವೆಯ
ಲವಲವಕೆಯನು ಮಾಳ್ಪಳಲ್ಲದೆ
ಹವಣಿಕೆಲ್ಲವು ಪೊರಗೆ ನೆರಮನೆಯುವರ ಕಡೆಗೆಂದು
ಅವಿರತಂ ಅತ್ತೆಯಳ ಪೋಷಿಸಿ
ಭವನ ಶಿವಪೂಜಾದಿ ಕ್ರಿಯೆಗಳ
ಸವಸಿಸಿರುವಳು ಸಣ್ಣವಳು ಬಲು ಚನ್ನಗುಣದವಳು ॥ ೪೭ ॥

ಸೋದರತ್ತೆಯು ವೀರಮಾಂಬೆಯು
ಸಾದರದಿ ಶಿವಲಿಂಗನಿಗೆ ಸುಖ
ಸಾಧನದ ಗೃಹಕೃತ್ಯ ತಿಳಿಸುತ ತಾನೆ ದುಡಿಯುವಳು
ಸಾಧು ಶಿವಲಿಂಗೇಶ ಸಂಸಾ
ರಾದರಾಯಿತು ಹೋದರ್ಹೋಯಿತು
ಬಾಧೆ ತನಗಿಲ್ಲದಲೆ ಓದುವನೋಚನ ಶಾಸ್ತ್ರವನು ॥ ೪೮ ॥

ಕಂಡು ತಾಯಿಯು ಸುತನ ರೀತಿಯ
ಗೊಂಡು ಮನದಲಿ ಚಿಂತೆ ಇವ ಬಲು
ಪಂಡಿತರ ತೆರನಂತೆ ಹೊತ್ತಿಗೆಗಳನು ಓದುತಲಿ
ಕಂಡ ಶರಣರ ಕೂಡಿ ಭಜನೆಯ
ಮಂಡಿಸುತ ಚಿರ ಲಿಂಗಪೂಜೆಯ
ನಂಡಲೆದುಗೈದುಂಡು ಕೂಡುವ ನಿರುತ ಗೃಹಕೃತ್ಯ ॥ ೪೯ ॥

ಮಾಡದಿರುವದು ಒಳಿತೆ ಗೃಹಕಂ
ನಾಡೆ ಸತಿ ಬಂದಿಹಳುಮೀರ್ವರು
ಮಾಡುತಿರಲುದ್ಯೋಗ ಬಾಳ್ವೆಯು ಸುಖದಿ ಜರಗುವದು
ಹಾಡಿ ಹರಿಸಿದರಿಂಥ ಸತಿಯಳು
ನಾಡಿನೊಳು ಸಿಗಳೆಂದಿಗಾದರು
ಗಾಢದಿಂ ಕರೆದೆಂದಳಾ ಶಿವಲಿಂಗ ಕುವರನಿಗೆ ॥ ೫೦ ॥

ಅಪ್ಪ ಶಿವಲಿಂಗಪ್ಪ ವಿರತರ
ವಪ್ಪ ಸುವರದಪ್ಪ ನೀನ
ಮ್ಮಪ್ಪ ಸದ್ಗುಣದಿಪ್ಪ ಶಿವಲಿಂಗಪ್ಪ ಕೇಳಪ್ಪ
ಮುಪ್ಪಿನವಳಾನೊಪ್ಪಿ ದುಡಿಯಲು
ಒಪ್ಪಿತವೆ ವೀರಮ್ಮನೊಬ್ಬಳೆ
ತಪ್ಪದಲೆ ದುಡಿಯುತ್ತಲಿಪ್ಪಳು ನೀನು ನೆರವಾಗು ॥ ೫೧ ॥

ಮಾಡು ಭಜನೆಯ ಲಿಂಗಪೂಜೆಯ
ಮಾಡು ಬಸವನ ಪೂಜೆ ಸಂತತ
ಮಾಡು ಹೊತ್ತಿಗೆ ವಚನ ಶಾಸ್ತ್ರವನೋದುವದು ಮಾಡು
ಮಾಡು ನೀನ್ನಗಲಿರುಳು ದುಡತಿಯ
ಮಾಡು ವರಭೋಜನವ ಬಾಳುವೆ
ಮಾಡು ಜಂಗಮ ಶರಣ ಸೇವೆಯನನುದಿನಂ ಮಾಡು ॥ ೫೨ ॥

ಎಂದು ಪೇಳುವ ಜನನಿಗಾಗಳೆ
ವಂದಿಸುತ ಶಿವಲಿಂಗ ಮಾತೆಯೆ
ಕುಂದುತರಲಾಂ ಸುತನೆ ನಿನ್ನಯ ವಾಕ್ಯ ಮೀರಿರಲು
ಬಂಧನಕ್ಕೊಳಗಾಗ್ವೆನಲ್ಲದೆ
ಹೊಂದಲಾರೆ ಸುಸತ್ಯ ಸುಖವಂ
ಸಂದೆಗವಬಿಡು ನೀತೆ ಸದ್ಗುಣಯೂಥೆ ಮಂನಾಥೆ ॥ ೫೩ ॥

ಮಾತೆಯಾಜ್ಞದಿ ನಡೆದ ಧ್ರುವನು ನಿ
ವಾತ ತಾಣದಿ ಕೂತ ಮಾತೆಯ
ಮಾತನಾಲಿಸಿ ಮುನಿಗಳಲಿ ಘನನಾದನುಪಮನ್ಯು
ನೀತೆ ಕುಂತಿಯು ಸುತನು ಧರ್ಮಜ
ನೋತು ಪಾಲಿಸಿ ಜನನಿ ವಾಕ್ಯವ
ಖ್ಯಾತಿಯಿಂದಾಳಿದನು ಶಿಂಧೂರ ಪುರಕೆ ದೊರೆಯಾಗಿ ॥ ೫೪ ॥

ಮಾತೆಯಾಜ್ಞೆಯ ಮೀರಿದ ಶಶಿರ
ಪಾತಕಕ್ಕೊಳಗಾದ ಜನನಿಯ
ಮಾತು ಮೀರಿದ ಬಭ್ರುವಾಹನ ಪಿತನ ದ್ರೋಹಾಂತ
ಮಾತು ಮನ್ನಿಸದಾದ ಕುಲಕ್ಷಯ
ಪೂತೆ ದ್ರುಪದೆಯ ಶಾಲ್ಯಶಳೆಯುತ
ಮಾತನಾಲಿಸದಾತನಲ್ಸುತನ್ಮಾತಕವ ಬಾರಾ ॥ ೫೫ ॥

ಈ ತೆರನಂ ಶಿವಲಿಂಗ ಕುವರನ
ನೀತಿ ನುಡಿಯಂ ಕೇಳಿ ಮಾತೆಯು
ಪ್ರೀತಿಯಿಂದಿಂತೆಂದಳೆಲೆ ಸದ್ಗುಣನೆ ಸುಖಶಾಲಿ
ನೀತಿವಂತನೆ ನಿನ್ನ ಮಡದಿಯು
ನೀತಿಯಲಿ ರೀತಿಯಲಿ ಗುಣದಲಿ
ಯಾತರಲಿ ಕೊರತಿಲ್ಲ ನಿನ್ನನು ಸೇವಿಪಳು ಬಿಡದೆ ॥ ೫೬ ॥

ಚೆಲುವ ರೂಪಿಣಿ ಚೆಲುವೆ ಗುಣಮಣಿ
ಚೆಲುವೆ ಪವಳೆಯು ನಿನಗೆ ಸಲುವಳು
ಚೆಲುವೆಗೈದರು ನಿನಗೆ ತಾ ಗುರುರಾಯ ಜಿತಮಾಯ
ಚೆಲುವೆ ಗೈದಿಹರಂತೆಯಾಕೆಯು
ಹೊಲಸು ಸಂಸಾರೆನಗೆ ಹಚ್ಚದೆ
ನಿಲವೆ ಪೋಗ್ವಳು ನಾಲ್ಕು ದಿನದಲಿಯೆನಲು ಕನಕಾಂಬೆ ॥ ೫೭ ॥

ಸಿಟ್ಟಿನಿಂ ಸನ್ಯಾಸಿಯಾಗಿ ನೀ
ನ್ನುಟ್ಟು ಕಡಚಿಯ ಪಿಡಿಯುತಂ ನವ
ನಟ್ಟು ಹೊಟ್ಟೆಯನ್ಹೊರದುಕೊಳುವದನಿಷ್ಟ ಗುಣವೇಕೋ
ಕೆಟ್ಟ ನಿನಗೇನ್ನೆದಳಾಕೆಯು
ಶಿಷ್ಟಳಂತೆ ಪೋಗ್ವಳೆನ್ನಲು
ಖೊಟ್ಟಿ ನುಡಿಯಲು ಬಾರದ್ಯೆ ಶಿವಲಿಂಗ ನೀಸ್ಥೀಂಗ ॥ ೫೮ ॥

ನಡಿಯು ನುಡಿಯಲಿ ಭೇದವಾದರೆ
ಬಡಿದು ಎನ್ನನು ಬುದ್ಧಿಗಲಿಸೈ
ಛಿಡೆಯ ಮಾತಾಡಿದರೆ ಒಡೆಯರು ದಂಡಿಸದೆ ಬಿಡರೆ
ನಡೆ ನುಡಿಯು ಏಕಾಗಿ ಶರಣರ
ಜಡಪದವಂ ಸೇರಲತಿಹಿತ
ಪೊಡವಿ ಜನ ನಡಿ ನುಡಿಯ ಭಿನ್ನಿಸಿ ಕೆಡುವರೌ ಎನುತೆ ॥ ೫೯ ॥

ನಕ್ಕು ತಾಯಗೆ ನಮಿಸಿ ಮರುದಿನ
ಚಿಕ್ಕ ಪವಳಾಂಬೆಯನು ಕರೆಯುತ
ಲಕ್ಕರದಿ ಶಿವಪೂಜೆ ಕ್ರಿಯಕರ್ಮಗಳ ನಂತರದಿ
ತಕ್ಕ ಶಿವಮಂತ್ರವನು ಬೋಧಿಸು
ತೊಕ್ಕುದಂ ಕೊಡುತಾಕೆಗಾಗಲೆ
ಚೊಕ್ಕ ಶಿವಪದ ಸೇರು ನೀನೆನುತಾಶಿರ್ವದಿಸಿದನು ॥ ೬೦ ॥

ಲಿಂಗಪತಿ ನುಡಿಕೇಳಿ ಸತಿಪವ
ಳಾಂಗನೆಯು ತಾನಮಿಸಲಾಮಯ
ಪಿಂಗದಲೆ ಬರೆ ಮಾರನೆಯ ದಿನ ಪತಿಯನಂ ಕರದು
ತುಂಗ ರೂಪಿಣಿ ಮತ್ತೆ ನಮಿಸುತ
ಪುಂಗ ಪತಿಪದವಿಡಿದು ಮನವಲಿ
ಮಂಗಲವ ತಾಳುತ್ತ ನುಡಿದಳು ಶರಣರೊಡನಾಗ ॥ ೬೧ ॥

ಈಕೆಗೀಶ್ವರನಾಜ್ಞೆಯಾಗಿದೆ
ಈಕೆ ಚಿಕ್ಕವಳಿರ್ದು ತಮ್ಮಯ
ಸೌಖ್ಯಪಾದದ ಸೇವೆಯಾಗಿಲ್ಲೀಕೆಯಿಂ ಸ್ವಲ್ಪ
ಕಾಕಳಿವಳೆಂದರಿದು ಕೋಪವ
ಸಾಕದಲೆ ಸೈರಿಸುತ ಶಾಂತಿಯು
ದ್ರೇಕ ಮಾನಸರಾಗಿಯಪ್ಪಣೆಯೀಯುದೆನಲಾಗ ॥ ೬೨ ॥

ಶಿವ ನಿಯಮದಳತೆಯನು ಮೀರ್ವದು
ಭುವಿಯೊಳಾರಿಂದಾಗಲಾರದು
ಸುವಿಮಲೆಯೆ ನೀನಾವ ವಿಷಯಂಗಳಲಿ ನೆನಹವನಂ
ಸವನಿಸದೆ ಶಿವಲಿಂಗದೊಳು ಮನ
ತವಿಸಿ ಪೋಗ್ವದು ಪ್ರಮದೆ ನಿನಗಾ
ಶಿವಶರಣ ಪ್ರಮಥಾಳಿ ಚರಗುರುಲಿಂಗದಪ್ಪಣೆಯು ॥ ೬೩ ॥

ಎನಲು ಪವಳಾಂಬೆಯುಳು ಸಂತಸ
ವನಧಿಯೊಳಗೋಲಾಡಿ ಮುಖದಲಿ
ಸನುತ ಶಿವಪಂಚಾಕ್ಷರಿಯು ಮಂತ್ರವನು ನುಡಿಯುತಲಿ
ಜನನಿ ಜನಕರಿಗತ್ತೆ ವೀರ
ಮ್ಮನಿಗೆ ಸನುಮತ ಪೇಳಿ ಶರಣರ
ವನಜ ಪದಕೆರಗುತಲಿ ಸಂತಸವಾಂತು ಕರಮುಗಿದು ॥ ೬೪ ॥

ಅಕ್ಷಯಾನಂದಾತ್ಮಲಿಂಗದೊ
ಳಾಕ್ಷಣಕೆ ಬೆರೆಯುತಲಿ ಮೆರೆವಳು
ತ್ರ್ಯಕ್ಷ ಶರಣನ ಮಾತೆ ಬಳಗವು ತಾಯಿತಂದೆಗಳು
ಪಕ್ಷ ಧರ್ಮದ ಭಕ್ತ ಸಮುಹವು
ಅಕ್ಷಿಯಿಂದುದರಿಸುತ ಜಲಬಸ
ವಾಕ್ಷರೋಚ್ಚಾರದೆ ಮಿನಿಸಿ ಮಡಿಯುಡುಸಿ ಕುಳ್ಳಿರಿಸಿ ॥ ೬೫ ॥

ಆಗಳಾ ಪುರ ಭಕ್ತ ಮಂಡಳಿ
ಶ್ರೀಗಣಾಧಿಪರೆಲ್ಲರುಂ ಘನ
ವಾಗಿ ಶಿವ ಘೋಷಣೆಯ ಗೈಯುತ ಗೋಪ್ಯದುತ್ಸವವ
ಸಾಗಿ ಮುಗಿಸುತ ಬಳಿಕ ಶರಣನ
ಮೋಘನಂ ಮಾತಾಡಿಸಲು ಬಲು
ಬೇಗ ಪುರ ಸ್ತ್ರೀ ಭಕ್ತರತಿ ಲೌಕಿಕ ರೀತಿಯಲಿ ॥ ೬೬ ॥

ಬಂದು ಶರಣಗೆ ನಮಿಸುತೇನೈ
ಕಂದು ಗೊರಳನ ಶರಣರೇ ಸತಿ
ಮುಂದೆ ತಾನೇ ಪೋಗೆ ಸೂವರ್ಣಾಂಬೆ ಗತಿಯೇನು
ತಂದೆ ನಿಮ್ಮಯ ಸರ್ವಕ್ರಿಯೆಯುವ
ಚಂದಗೈಯ್ಯುವರಾರು ಮಾತೆಯ
ಳಿಂದ ತೀರ್ವದೆ ಸೋದರತ್ತೆಯಳೇನು ಬಲ್ಲವಳು ॥ ೬೭ ॥

ಚಿಕ್ಕ ತಂಗಿಯನೊಯ್ಯುವದುಮಿದು
ಲೆಕ್ಕ ಸಿನಗಲ್ಲಲ್ಲ ಶಿವ ಶಿವ
ಹಕ್ಕಿಯಾಗುತ ಹಲಬುವರು ತಾಯ್ತಂದೆ ಗತಿಯೇನು
ಅಕ್ಕಗಳೆ ಅವ್ವಪ್ಪಗಳಿರಾ
ದುಃಖವಿದು ಡಾಂಭಿಕವು ಸುಮ್ಮನೆ
ಕಕ್ಕುಲತೆಗೀಡಾಗಿ ಬೋಧಿಪಿರೇಕೆ ವೈರಾಗ್ಯ ॥ ೬೮ ॥

ಮೂರುದಿನವೀ ಧಾರುಣಿಯ ಸುಖ
ಸಾರಿಸುತ ಪಿತಮಾತೆ ಬಾಂಧವ
ರಾರು ಯಲ್ಲಿಯದೇನುಮಿದುಮಿದುದೃಷ್ಟ ತತ್ನಷ್ಟ
ಸಾರ ಪಕ್ಷಿಯು ಸಂಜೆಯಲಿ ಮರ
ಪೂರ ಕುಳಿತಾ ಮೇಲೆ ಬೆಳಗಿಗೆ
ಹಾರುವವು ಮನಬಂದ ಪರಿಯಂತೀ ಕುಟುಂಬಿಗರು ॥ ೬೯ ॥

ಇರುವ ತನಕಂ ನಾನು ನನ್ನವ
ರರುವು ಮುನಿಯಲು ಮಡಗಿ ಪೋಗ್ವರು
ಬರಿಯ ಭ್ರಮೆ ಸಂಸಾರ ಸಂತೆಯು ಹರಿದು ಪೋಗುವದು
ಹರಿದು ಪೋಗದು ಪರಮಸುಖವಾ
ತ್ತರುವುಮದನಂ ಪುಡಿಕಿಕೊಳ್ಳಿರಿ
ಮರಣವಾದರೆ ಗೋರಲಿಯುತ್ತರೆ ಬರುವದೇನಲ್ಲವು ॥ ೭೦ ॥

ಜಗದ ಡೊಂಕನು ಹೇಗೆ ತಿದ್ವಿರಿ
ನಿಗಮ ದೂರನ ಪುಡುಕಿಕೊಳ್ಳಿರಿ
ಅಗಲಿದವರಿಗೆ ಅತ್ತು ಕಂಬನಿ ಸುರಿಸಿ ಮರುಗದಿರಿ
ಬಗೆಯ ತಿಳಿಯಲು ತಮ್ಮ ಸುಖಕೌ
ಗಗಿದುಮಳುವರೆಯಲ್ಲವಳಿದವ
ರ ಗತಿಯೇನೆಂದಳರು ಪಾಮರರೇನು ಪಾಪಿಗಳೋ ॥ ೭೧ ॥

ಸುಳ್ಳು ಮಾಯಾ ಮೋಹವಿದು ಬಲು
ಸುಳ್ಳು ಬಾಂಧವ ಜನನಿ ಪಿತ ಸುತ
ಸುಳ್ಳು ಸತಿ ಸಂಪತ್ತುಯಳ್ಳಿನಿತಿಲ್ಲ ಸುಖಲೇಸು
ಜೊಳ್ಳು ಕುಟ್ಟುತ ದಣಿದ ಪರಿಕ
ಪ್ಪುಳ್ಳ ಸಂಸೃತಿ ನಂಬದಲೆ ಗುಣ
ಮುಳ್ಳವರು ನೀವಾಗಿ ಶಿವಕಳೆಯರಿತು ಸುಖಿಸುವದು ॥ ೭೨ ॥

ಎನುತ ಸರ್ವರ ಮನದ ಕಲ್ಮಷ
ಮಿನಿದು ಸ್ವಚ್ಛತಗೈದುಮವರನು
ಮನೆಗೆ ಕಳಪುತಲಿರುತ ತನ್ನಯ ಗೇಹದೊಳು ಸುಖದಿ
ಮನುಮಥಾರಿಯ ನೆನೆಯುತಂ ನಿಶಿ
ದಿನವು ತಪಕ್ರಿಯೆಗಳನು ನಡಿಸುತ
ಘನಮಹಿಮ ಶಿವಶರಣ ಶಿವಲಿಂಗೇಶನಿರುತಿರ್ದ ॥ ೭೩ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯುಮಷ್ಟ ಸಂಧಿಯಿದು ॥ ೭೪ ॥

ಅಂತು ಸಂಧಿ ೮ಕ್ಕಂ ಪದನು ೭೦೫ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೯

ಸತ್ಯ ಶಿವಲಿಂಗೇಶ ಭಜನಾ
ಸಕ್ತನಾಗುತ ಲಿಂಗಪೂಜೆಯ
ನರ್ಥಿಯಿಂಗೈಯ್ಯುತಿರಲತ್ತಿಗೆ ತೋರ್ದತವ ಮಹಿಮ ॥ ಪಲ್ಲ ॥

ಮರಣ ಮಾರಣ ದುರಿತವಾರಣ
ಶರಣ ರಕ್ಷಣ ಕರಣ ಪೂರಣ
ಗಿರಿಜ ರಮಣ ಸುತರಣಿ ಶಶಿಪಾವಕ ನಯನ ತ್ರಿತಯ
ಪುರದ ಸುರಮರ್ದನ ಮಹೇಶ್ವರ
ನುರುಗ ಭೂಷಣ ಸತ್ಯ ಶಾಶ್ವತ
ಸುರಚಿರಾಂಗನೆ ಪಾಹಿ ಶಿವಲಿಂಗೇಶ ಸುವಿಲಾಸಾ ॥ ೧ ॥

ನಿತ್ಯ ಶಿವಪೂಜೆಯನುಮೆಸಗುತ
ತತ್ವಶಾಸ್ತ್ರವನೋದುತಂ ಶಿವ
ಭಕ್ತಿಗುಣ ದಾಸೋಹಿ ಜಂಗಮಪ್ರೇಮಿ ಸುಖಧಾಮಿ
ಸತ್ಯ ಶರಣರ ಸೇವೆಗೈಯ್ಯುತ
ಚಿತ್ತಜಾರಿಯ ಭಜಕ ಸಂತಸ
ಪೃಥ್ವಿಜನಕತ್ಯಧಿಕ ಮಾರ್ಗವ ಬೋಧಿಸುತ್ತಿರುವ ॥ ೨ ॥

ಮಾತೆಯಾಜ್ಞೆಯ ಮೀರದಿರುವನ
ನಾಥ ಜನರಂ ಪೊರೆಯುತಿರುವಂ
ಸಾತಿಯ ಸನ್ಮುಕ್ತಿ ಪಥವಂನಾತುಕೊಂಡಿರುವ
ದಾತ ಗುರು ಸೂನೀತ ಬೋಧೆಯ
ನೀತೆರಂ ತಿಳಿದೊರ್ತಿಸುತ ಘನ
ಘಾತ ಸಂಸ್ಕೃತಿಯಳಲದಿಂದಲತೀತನಾಗಿರುವ ॥ ೩ ॥

ಮಡದಿಯಳಿದುದು ಚಿಂತೆಯಿಲ್ಲೆ
ಣ್ಬಡುಕಿ ಮತ್ತೋರ್ವಳನು ವರಿಸುವ
ಕೆಡಕ ಮನ ಮೊದಲಿಲ್ಲ ಪರವನುತೆಯರ ಬಯಕಿಲ್ಲ
ಹಿಡಿದ ವ್ರತವಂ ಬಿಡನು ಬಿಟ್ಟುದ
ಹಿಡಿವನೆಂದುಂಗೆಡನು ಧೃತಿ ನಡೆ
ನುಡಿಗಳೇ ತತ್ವದಲಿ ಮಿರಲಿದೆ ಜನ್ಮ ಕಡೆಯುಸುವಂ ॥ ೪ ॥

ಗೌರಿರಮಣನು ಕೋಪ ತಾಳಿದ
ವೈರಿ ಮನ್ಮಥಪುರವ ಸುಡುವಲಿ
ಶೌರಿ ಮದದ ಸುರರತರಿವಲೀ ಕೋಪಮಂಗೊಂಡ
ಸ್ವೈರಣಿಯನುಳಿವ ಕುಂಭಜ
ಕೌರರವರಂ ಕೋಪಿಸಿದ ಧರ್ಮಜ
ಪೌರಹರ ಶರಣೆಂದಿಗುಂ ಕೋಪಾಂತನಿಲ್ಲಿಲ್ಲ ॥ ೫ ॥

ಮನೆಯ ಕೃತ್ಯವನೆಸಗುವಲಿ ಪರ
ಜನರು ತನ್ನನು ನಿಂದಿಪಡೆಯಲಿ
ಜನನಿ ಸೂವರ್ಣಾಂಬೆ ವೀರಾಂಬತ್ತೆ ಮೊದಲಾ
ಮನುಮಥಾರಿಯ ಭಕ್ತವೃಂದವು
ಸನುತ ಶಿವಶರಣಾದಿ ಚರವರ
ಅನಿತರಾರಿಂ ಕಷ್ಟ ಸಂಧಿಸೆ ಶಾಂತಿಯಿಂ ಮೆರೆವ ॥ ೬ ॥

ಶಾಂತಿಯಿದಿರಿಲಿ ಚಂದ್ರ ಬೆಚ್ಚಗೆ
ಶಾಂತಿಯಿದಿರಲಿಂಮೃತ ಸಪ್ಪಗೆ
ಶಾಂತಿಯಿದಿರಿಲಿ ಮೃದು ರಸಾಯನ ಕೊಳೆತ ಹಳೆಗೂಳು
ಶಾಂತಿಯೇ ಸರ್ವಕ್ಕೆ ಸಾಧನ
ಶಾಂತಿಯೇ ನಿತ್ಯಾತ್ಮ ಶೋಧನ
ಶಾಂತಿಗೆಣೆಯನು ಕಾಣೆ ಸರ್ವಸುಖಕ್ಕೆ ಮಿಗಿಲೆನುವ ॥ ೭ ॥

ಶಾಂತಿಯುಳ್ಳವ ರಾಜವಾಳ್ದರು
ಶಾಂತಿಯುಳ್ಳವ ಭೋಗವುಂಡರು
ಶಾಂತಿಯುಳ್ಳವ ಲೌಕಿಕದಿಯೋಲಾಡುತಿರ್ದರೆಯು
ಶಾಂತಿಯುಳ್ಳವನೇನು ನಡೆದರು
ಭ್ರಾಂತನಾಗನು ಸಕಲದೊಳಗವ
ಶಾಂತಿ ಸೇರಿದವಂಗೆ ಮುಕ್ತಿಯ ಕಾಂತಿ ವಶವರ್ತಿ ॥ ೮ ॥

ಮರಣದಲಿ ಮದುವೆಯಲಿ ಭೋಗದಿ
ಬರುವ ಹಾನಿಯಲಾಂತ ಲಾಭದಿ
ಸಿರಿದರಿದ್ರತೆ ಜಯಪರಾಜಯ ನಿಂದೆ ಸ್ತುತಿಗಳಲಿ
ಸರಿಯೆನಿಸಿ ಹರುಷಿಸದೆ ದುಃಖಿಸ
ದೆರಡು ಸಮಗಂಡವನೆ ಶಾಂತನು
ಮರವ ಮನದಲಿ ಡಿಂಭಮಾತ್ರದಲಾಡುತಿಹನವನು ॥ ೯ ॥

ಧರಣಿ ಪಾಲಕರಲ್ಲಿ ತಪವು
ಳ್ಳರಲ್ಲಿ ಯಾಜ್ಞಿಕರಲ್ಲಿ ಶಾಸ್ತ್ರದ
ಪರುಠವಣೆ ಬಹುಜಾಣರಲಿ ಗುಣಿಗಳಲಿ ಧನಿಕರಲಿ
ಹಿರಿದು ಸತ್ವವಿಶಿಷ್ಟರಲಿ ತಾ
ನಿರುತದೀನಾಢ್ಯರಲ್ಲಿ ಪೂಜ್ಯನು
ನರಸುರೋಗರಲ್ಲಿ ಸಾಜ್ಯನು ಶಾಂತಿಯಾಂತವನು ॥ ೧೦ ॥

ಬಂದುದನು ಭೋಗಿಸುತ ಬಾರದು
ದೊಂದ ನೆನೆಯದೆ ಹಿಂದು ಮುಂದಣ
ಸಂದುಗವಸರಿಗಂಡು ಸುಖದುಃಖಗಳ ತಾಳದಿಹ
ನಿಂದ ನೆಲೆಯುಳ್ಳವನೆ ತುಷ್ಟನು
ಸಂದೇಹವ ಸಮನಿಲ್ಲವಾತಗೆ
ಮಂದಭಾಗ್ಯರು ಹರಿಹರಾದಿಗಳಾತನಿದಿರಿನಲಿ ॥ ೧೧ ॥

ಇಂತು ಶಾಂತಿಯಲಿರುವನಲ್ಲದೆ
ಭ್ರಾಂತನಾಗುತ ಮರುಗನೆಂದುಂ
ಸಂತ ಶರಣರ ಬರವನಂ ಹಾರೈಸಿ ಹರುಷಿಪನು
ಚಿಂತೆ ನೀಗಿರುವವನ ಬಾಳ್ವಿವು
ಚಿಂತೆ ಚಿನುಮಯ ದೇವಗೆನುತಿಹ
ಪಂಥ ಸಾಧಿಸಿ ಶಾಂತಿಯಿಂ ನಿಶ್ಚಿಂತನಾಗಿರುವ ॥ ೧೨ ॥

ಹಣವ ಕೂಡಿಸುವಾಸೆಯಿಲ್ಲರ
ಗಣಕೆಯಾರ್ಚಿಪಪೇಕ್ಷೆಯಿಲ್ಲಂ
ತೃಣಯ ಭಕ್ತಿಯ ಮಾಡಿ ಶಿವನಿಂ ಪಡೆವ ಬಯಕೆಲ್ಲ
ಎಣಿಕೆಯಿಂ ತವಜನ್ಮ ಕಾಯಕ
ವನು ದಿನಂಗೈವಲ್ಲಿ ದ್ರವ್ಯವ
ಕನಸಿನೊಳು ಕಂಡಂತೆ ತಿಳಿವನು ಮಾಸಿಸನುಮೆಂದು ॥ ೧೩ ॥

ಶರಣ ಪ್ರಮಥರೆ ಮನೆಯ ಕೃತ್ಯವ
ಜರುಗಿಸುತ್ತಿರಲೇಕೆ ಚಿಂತೆಯು
ಕಿರಿಯನಾಗಿರುತಿರುವವೇ ಲೇಸೆಂದು ಮನದೊಳಗೆ
ಸ್ಮರಿಸಿ ನಿತ್ಯವು ತನ್ನ ಕ್ರಿಯಾ
ಚರಣೆಗೈಯುತ್ತಿರ್ದ ಲೋಕದ
ನರರ ಪರಿಸಂಸಾರವಲ್ಲಿದು ಶರಣ ಸಂಸಾರ ॥ ೧೪ ॥

ಹೇಗೆ ವಚನಾರ್ಥಾವಲೋಕನ
ಮಾಗೆಯದರಿಂ ಮೋಹ ಸಂಸ್ಕೃತಿ
ರಾಗ ಮನ ಮಾಯಾದಿ ದುರ್ಗುಣ ಹಿಂದಕಟ್ಟಿದವು
ಬೇಗ ಶ್ರದ್ಧೆಯು ನೈಷ್ಠೆಸಾವಧ
ವಾಗಳುಂ ಘನಶಾಂತಿ ನಿಚ್ಚಲ
ಯೋಗ ಮಾನ ಸವಿನಯ ವಿರತಿಗಳ್ಬೆಳದವೀತನೊಳು ॥ ೧೫ ॥

ಕಂಡು ವೀರಂ ಮತ್ತೆ ಮನ ಖತಿ
ಗೊಂಡುಮಿವನನ್ನೇನು ಮಾಡಲಿ
ಯುಂಡು ಭಜನೆಯ ಮಾಡುತಲಿ ಹುದಿಗೊಂಡು ಕೂಡುವನು
ಕಂಡ ಜಂಗಮ ಸಾಧು ಶರಣರ
ಹಿಂಡುಗೂಡುತ ನಗುತ ಮೆರೆಯುವ
ಕಂಡ ತಾಯಿಯು ಸುತಗೆ ಬುದ್ಧಿಯ ಪೇಳಬಾರದೆ ತಾ ॥ ೧೬ ॥

ಆರುಮಿವರಿಗೆ ಪಾಕಗೈವರು
ಆರುಮಿವರಿಗೆ ಜೋಕೆಗೈವರು
ಸಾರುವೆನು ಮತ್ತೆಲ್ಲಿಗಾದರು ಸೇರೆನಿವರಲ್ಲಿ
ನೀರು ನಾನೇ ನೂಲು ನಾನೇ
ಬಾರಲಿಕ್ಕಲಿ ಬೆನ್ನುಹತ್ತಿಹ
ರಾರು ಕೇಳ್ವರು ನನ್ನ ಗೋಳಿಟ್ಟಿರಲಿ ಮುಂದಿವಗೆ ॥ ೧೭ ॥

ಎನಲು ಶಿವಲಿಂಗೇಶ ಕೇಳುತ
ಮುನಿಸುಗೈದಿರತ್ತೆ ನಿಮ್ಮಯ
ಮನದ ಪರಿ ನಾನೊರ್ತಿಪೆನು ನೀ ಮಮತೆ ತಾಳುವದು
ಜನನಿ ಕೇಳ್ದರೆ ಬೈವಳಾಕೆಯು
ನಿನಗೆ ನಾ ಮೀರಿರುವನೇ ಜವ
ಸನುಮತವಕೊಳ್ಳೆಂಮ ಕಿಡೆನುಡಿ ಬೇಡ ಗುಣದಮ್ಮ ॥ ೧೮ ॥

ತಾಳು ಶಾಂತಿಯ ಮನದಿ ಸಂತತ
ತಾಳು ತಾಳ್ಮೆಯೆ ಸರ್ವ ಸಾಧನ
ಹಾಳು ಸಂಸಾರದಲಿ ಮನವಂ ನಿಲಿಸಿ ಮರುಗದಿರು
ತಾಳಿಕೆಯು ಬಾಳುವೆಗೆ ಕಾರಣ
ಜಾಳು ನುಡಿನುಡಿಯಲ್ಲ ಶರಣರ
ಆಳು ಅರಸನ ಮೇಲು ತಿಳಿ ನೀನತ್ತೆ ಅರ್ಥಿಯಲಿ ॥ ೧೯ ॥

ಅಳಿಯ ಶಿವಲಿಂಗಪ್ಪ ನಮ್ಮದು
ಎಳಿಯ ಕೆಲಸವು ಬಹಳ ಕಷ್ಟವು
ತಿಳಿಯಲೊಲ್ಲದು ನಿನಗೆ ಸುಮ್ಮನೆ ಕಳೆಯದಿರು ಕಾಲ
ಇಳೆಯೊಳ್ಪುರುಷರ ಲಕ್ಷಣಲ್ಲಿದು
ಗಳಿಸು ಧನ ಸಂಸಾರಗೈಯುತ
ಚುಳಕ ಲಿಂಗದ ಪೂಜೆಗೈದರೆ ಗಳಿಕಿ ಬರಬಹುದೆ ॥ ೨೦ ॥

ಎರೆದರೇನದು ನೆನೆಯುಲಾರದು
ಮರೆವರೇನದು ಬಾಡಲಾರದು
ಕರಿಯ ಕೇರಿನ ಕಂತೆ ಹೊತ್ತಿಹುದೇನು ಕೊಡುತಿಹುದು
ಇರದೆ ಹಿತ್ತಲದಿರುವ ಬಾಳೆಯ
ಮರಕೆ ನೀರ್ದಣಿಸೊಂದು ಕೊಡವಂ
ವರುಷದೊಳು ಫಲಕಾಣ್ವ ಸಂತಸದುಂಬ್ವೆ ಪಣ್ಬಾಳೆ ॥ ೨೧ ॥

ನೋಡು ನೀ ಮುಂದಿನ್ನು ಪೂಜೆಯು
ಮಾಡುತಂ ಕುಳಿತೆಂದರೇ ನಿ
ನ್ನಾಡು ಚೆನ್ನಾಗಿರದು ಜನರಲಿ ಬಾಳ್ವೆ ಬಲು ಜೋಕೆ
ಕೇಡು ಬಯಸಲಿಬೇಡ ದುಡತಿಯ
ಮಾಡಿ ಸುಖಭೋಗದಲಿ ನೀನಿರ
ಲ್ಹಾಡಿ ಹರಸುವಳ್ಹಡದ ತಾಯಿಯದಾಯ್ತುಮುಪಕಾರ ॥ ೨೨ ॥

ಆಕೆ ಕುಂಟಳು ನೀನು ಪಂಟನು
ಜೋಕೆಗೈಯ್ಯುವರಾರು ನಿಮ್ಮನು
ಸಾಕು ಸಾಕಾಗಿದೆಯು ದುಡಿದುಡಿದೆನಗೆ ಸಂಕಟವು
ಮೂಕನಂದದಿ ಮಾಡ್ವಿ ಪೂಜೆಯ
ತೇಕುವವರಿಲ್ಲಾರನಿಟ್ಟಿದಿ
ಏಕೆ ತಿಳಿಯದು ಪರರ ಕಷ್ಟವು ಸುಡಲಿ ತಾಯ್ಮಗನ ॥ ೨೩ ॥

ಪರರ ಪೀಡಿಸಲದುವೆ ಪಾಪಂ
ಪರರ ರಕ್ಷಿಸಲದುವೆ ಪುಣ್ಯಂ
ದೊರೆವ ಶಾಸ್ತ್ರವ ಕೇಳದೇ ಬರಿದೇಕೆ ಶಾಸ್ತ್ರವನಂ
ಮರುಳನಂದದಿ ಓದೆ ಓಣೆಯ
ದೊರೆಯದಿರುವದು ಸಹಜ ನಿನಗಿದು
ಹರಿದು ಹಾಕುವೆ ನೋಡು ನಿನ್ನಯ ಶಾಸ್ತ್ರ ಹೊತ್ತಿಗೆಯಂ ॥ ೨೪ ॥

ಒಂದು ಮೊಲಕೊಂಬತ್ತು ಶುನಕಗ
ಳ್ನೊಂದಿ ಬೆಂಬತ್ತಿದರೆ ಬಾಳ್ವುದೆ
ಕುಂದಿ ನನ್ನವರೆಂದು ಮಡಿಯುತ ನಿಂದೆ ನಾನಕಟ
ಮಂದ ಮಾತೆಗೆ ಸುತಗೆ ಬುದ್ಧಿಯ
ಹೊಂದಲಾರದು ವಚನ ಹೊತ್ತಿಗೆ
ಚಿಂದಿಗೈಯ್ಯುವೆನೇನು ಮಾಡುವಿ ಎಂದು ಹರಿಯಲ್ಕೆ ॥ ೨೫ ॥

ನೋಡಿ ಶಿವಲಿಂಗೇಶನತ್ತೆಯೆ
ಬೇಡ ಹರಿಯಲು ಬೇಡವೆಂದರೆ
ನಾಡ ಶರಣರು ಹಾಡಿದೊಚನವನ್ನರಿದೆ ಹಡದವ್ವ
ಕೇಡು ನೀಕರಕೊಳ್ಳಬೇಡೌ
ನೋಡು ಎಂದರೆ ಕೇಳಲಿಲ್ಲವು
ಗಾಥಿ ಕಾರ್ತಿಯೆ ತಿಳಿಯುವದು ಮುಂದೆಸುತ ನಗುತಿರಲು ॥ ೨೬ ॥

ನಗುವಿಯಿನ್ನೇನೋಡುತಲಿ ನೀ
ನಗುತ ಕೂಡ್ರುವಿ ಕೂಡ್ರು ನೋಡುವೆ
ನಗಿವೆ ನಿನ್ನಂ ನೋಡು ಲಿಂಗದ ಪೂಜೆ ಮಾಡುವಲಿ
ಸೊಗಸು ಮನೆ ಕೆಲವಸನು ಮಾಡುತ
ನಗುತಲಿರ್ದರೆ ನಿನ್ನ ಕಾಲಿಗೆ
ಹಗಲಿರುಳು ನಮಿಸುತ್ತಲಿರುವೆನು ಎಂದು ನುಡಿಯಲ್ಕೆ ॥ ೨೭ ॥

ಕೇಳಿ ಶಿವಲಿಂಗೇಶನತ್ತೆಯು
ಹಾಳು ಹೇಳಿಕೆಯಲ್ಲವಂ ತಾ
ತಾಳಿ ಸಂತಸ ನಗುತಲೆಂದನು ತಿಳಿಯದಿದು ನಿನಗೆ
ನಾಳೆ ಮುಂದೆಯು ತಿಳಿಯದಿರದಾ
ಮೇಲೆ ನಿನಗೀ ಕೇಳು ನುಡಿಗಳೆ
ಕಾಲಪಾಶದಿ ತೊಡರಿಸುವಲ್ಲಿಂದ ನೆರಳುವಿಯಾ ॥ ೨೮ ॥

ಸತ್ತಮೇಲೇನಾದರೇಯು ಕ
ಣ್ಣೆತ್ತಿ ಮತ್ತೇಂ ನೋಡ ಬರುವೆನೆ
ಮರ್ತ್ಯ ಜನರಂತಲ್ಲದಲೆಯನಗೊಬ್ಬಳಿಗೆ ಬೇರೆ
ಚಿತ್ತಜಾಂತಕಗೈಯ್ವನೇ ನೀ
ನುತ್ತಮನು ನಿನಗಾಗಲೀ ಸುಖ
ಹೊತ್ತುಹೋಯಿತು ಕೆಲಸ ನಿಂತಿತು ಎಂದು ಪೋಗಲ್ಕೆ ॥ ೨೯ ॥

ವಚನ ಶಾಸ್ತ್ರವನರಿದಳಲ್ಲವೆ
ಖಚಿತವ ಭವಹರಿಯಲರಿಯಳು
ಸುಚಿತ ಶರಣರ ನಡೆಯ ಅರಿದಿಹಳೇನು ಗುಣವಿಸ್ನು
ಕುಚಿತನಾಗದೆ ಕೋಪ ಗೈಯ್ಯದೆ
ಸುಚಿರ ಭೂತಾಂತಃಕರುಣ ಮನ
ನಚಲ ಶಿವಲಿಂಗೇಶ ತನ್ನಯ ಕ್ರಿಯವ ನಡೆಸಿರ್ದ ॥ ೩೦ ॥

ಚರಿಪ ಪಕ್ಷಿಯ ಸಿಕರಕಡವಿಯ
ಮರವವೊಂದುಂ ಬರದಮಾಗಲು
ತರುಗಳಿಲ್ಲವೆ ಫಲಮ ತೀವಿದ ಪೂವು ಮುದರಿರಲು
ಪರಿಮಳಿಪ ಪೂವಿಲ್ಲೆ ಭ್ರಮರಕೆ
ಬರಸು ತಾಂ ಲೋಭ್ಯಾದರಾ ಕವಿ
ವರೆಗೆ ಪಾತರುಮಿಲ್ಲೆನಿಳೆಯೊಳುಮೀಕೆ ತೆರನಾಯ್ತು ॥ ೩೧ ॥

ಭೂಮಿಯಾಣ್ಮಂತಾಮಸಂಗೊಳ
ಲಾ ಮಹಾ ಪುಲಿ ತನುವನಡರ
ಲ್ಭೀಮ ಶಿಖಿಸುಡಲೈದಲುಂ ಘನ ಸಿಡಿಲುಬುರಗಲ್ಕೆ
ಆ ಮರುಳ ಪಗೆಯುಸಿಯನೆತ್ತಲು
ಸೌಮ್ಯ ಗುಣದಿಂದಿರುವರಲ್ಲದೆ
ಪಾಮರರ ತೆರನಂತೆ ಧೃತಿಗೆಡರೇಕ ಮಾನಸರು ॥ ೩೨ ॥

ಬಿಡದೆ ಜಂಗಮ ತೀರ್ಥ ನಿತ್ಯದಿ
ಪಡೆದು ಪ್ರಾಸಾದಿತ್ತುವಕ್ಕುದ
ನೊಡನೆ ಸೇವಿಸಿ ಶರಣ ಶಿವಲಿಂಗೇಶನಿರುತಿರಲು
ಗಡನೆ ವೀರಂ ಮತ್ತೆ ಕಾಣುತ
ಬಿಡನು ತನ್ನಯ ಗುಣವನೆನುತಡ
ಬಡಿಸಿ ಲಿಂಗವ ಪೂಜಿಸುತ್ತಿರಲೆಳದು ತರಹುದನು ॥ ೩೩ ॥

ಮನದಿ ಯೋಚಿಸಿ ಕಿಸಿಸಿನಿಂದಾ
ವನುತೆಯಿರಲವನರಿದು ಶರಣನು
ಬಿನದಿಸುತ ಮಾತಾಡ್ವನಾಕೆಯು ಕೋಪವಂಕುರಿಸಿ
ಘನತೆ ಅರಿಯದೆ ಬೈವಳವನನು
ಸನುತ ಗುಣಿ ಕೋಪಿಸದಲತ್ತೆಯೆ
ನಿನಗೆ ಪ್ರಾಣಾಂತ್ಯದಲಿ ತಿಳಿವದುಮೆಂದು ನಗುತಿಹನು ॥ ೩೪ ॥

ವಾರಕ್ಕೊಮ್ಮೆಯು ಸ್ನಾನ ಗೈವಳು
ವಾರದರ್ಧದಲೊಮ್ಮೆ ತಿಳಿದರೆ
ನೀರೆ ಮುಖವನು ತೊಳೆಯುತಿರುವಳು ಸೇರಿಕೆಯುಬಹುದೆ
ಮಾರಹರನಾಚಾರ ಕ್ರಿಯ ಘನ
ಪೂರದಲಿ ಮುಳಗಿರುವನಿವನಂ
ಮಾರಿಯಂದದಿ ಕ್ರೂರ ದೃಷ್ಟಿಯಲೀಕ್ಷಿಪಳು ಸತತ ॥ ೩೫ ॥

ಹೀಗೆ ಇರುತಿರಲೊಂದು ದಿನವಾ
ನಾಗ ಕಂಕಣ ಶರಣ ಶಿವಲಿಂ
ಗಾಗ್ರ ಗಣ್ಯನು ಮುದಯದಲಿ ಶಿವಲಿಂಗ ಪೂಜೆಯನು
ಸಾಗಿಸುತಲಿರಲಂದು ತಿಳಿಯುತ
ರಾಗದಿಂದೆಳೆತರುವ ಸಮಯವ
ದೀಗ ಸಾಧಿಸಿತೆಂದು ಸೆರಗಂ ಬೇಗ ನಡುಸುತ್ತಿ ॥ ೩೬ ॥

ಮೆರೆದು ಹುರಿಯಾಳೆನಿಸಿ ಕೋಪದ
ಹುರವಣಿಸಿ ಬರ ಬರಲು ಶರಣನ
ಶರೀರ್ ಸುತ್ತಲುಮವಳ ಕೋಪ ಜ್ವಾಲೆ ಧಗಧಗಿಸಿ
ಉರಿಯುತಿರಲದು ಕಂಡು ಮರುಳೆಯು
ಹರಣ ಹಲ್ಲಣಿಸುತ್ತ ತ್ವರ ಹಿಂ
ದಿರುಗಿ ಚೀರುತಲೆದೆಯ ಬಾಯ್ಬಡಕೊಳುತಲಬರಿಸಿ ॥ ೩೭ ॥

ಬನ್ನಿರೆನ್ನವ್ವಪ್ಪಗಳಿರಾ
ಚನ್ನ ಶಿವಲಿಂಗಪ್ಪ ತಾನುಂ
ಸನ್ನುತಾಮಳಲಿಂಗ ಪೂಜೆಯೊಳಿರುವ ಸುತ್ತೆಲ್ಲ
ವನ್ಹಿಯುರಿಯುತ ಸುಡುತಲಿದೆಯವ
ನನ್ನು ಕಾಣೆನು ಸುಟ್ಟನೋ ಜವ
ಬನ್ನ ಬಟ್ಟನೊ ಕೆಟ್ಟನೇನಸು ಬಿಟ್ಟನೋ ಶಿವನೆ ॥ ೩೮ ॥

ಅಳುತ ನೆರೆಹೊರವಳಯದವರಂ
ತಳುವದಲೆ ಕಳವಳಿಸಿ ಕರೆ ಗೃಹ
ಬಳಿಯ ಜನಗಳ ಗಳನೆ ಬರುತಂ ಕಂಡರಾರ್ಚಕನ
ಬಳಿಯೊಳಿಲ್ಲುರಿಯುಗ್ನಿ ಪೊಗೆಯೊಂ
ದಳಕನಿಲ್ಲದೆ ಸುಳಹು ಮರದಾ
ನಳಿನ ಸಖಧರನೊಳಗೆ ಚಿತ್ತವು ನಿಲಿಸಿ ಮೆರೆದಿರ್ದ ॥ ೩೯ ॥

ಶರಣ ಶಿವಲಿಂಗನುಪಮಾರ್ಯನ
ಪರಮಪಾವನ ಲಿಂಗಪೂಜೆಯು
ದುರುತರೋನ್ನತ ಮಹಿಮೆ ಪ್ರಜ್ವಲಿಸಲ್ಕೆ ವೀರಾಂಬೆ
ಬೆರಗುವಡುತಲಿ ಮೂಢಮತಿಯಿಂ
ಕರೆದಳಲ್ಲದೆ ನಿಜವಿದಲ್ಲವು
ಮರರೆಯುರಿ ಪತ್ತಿರಲುನುಳಿವನೆ ಕರಕಮಾಗದಲೆ ॥ ೪೦ ॥

ಸುಡಲು ಸುಮ್ಮನೆ ಕೂಡ್ವನೇ ಸಿಡಿ
ಮಿಡಿಯುಗೊಳುತಾ ಲಿಂಗಪೂಜೆಯ
ಸುಡಲಿಯಂದವನೊಡನೆಯೋಡುತಲಿರ್ದ ಗೃಹದ್ವಾರಗೆ
ಒಡೆಯ ಶಿವಲಿಂಗನಿಗೆ ಈಕೆಗೆ
ನಡುವೆ ಬೆಂಕಿಯು ಬರದು ಸುಮ್ಮನೆ
ನುಡಿದು ನಮ್ಮೆಲ್ಲರನು ಗಾಬರಿಸಿದಳು ವೀರಾಂಬೆ ॥ ೪೧ ॥

ಎನುತ ಪೋಗುವ ಜನಸಮೂಹವ
ಜನನಿ ಸೂವರ್ಣಾಂಬೆ ನಿಲ್ಲಿಸಿ
ಸನುಮತಿಸಿ ಸುಳ್ಳಾಕೆ ನುಡಿಯಳು ಸತ್ಯವಿರಬಹದು
ತನುಜ ನಿಶಿದಿನವೊದ್ವ ಪೊತ್ತಿಗೆ
ಯನಲ ಸ್ತಂಭನ ಕುಟಿಲ ವಿದ್ಯವ
ನೆನದು ಕಲಿವನೊ ತಿಳಿಯದಿದು ಚಿನುಮನೆ ತಾ ಬಲ್ಲ ॥ ೪೨ ॥

ಕೆಲರುಮಿವನರೆ ಮರುಳನೆಂದ
ಕೆಲರುಮೀತರು ಕುಟಿಲನೆಂದ
ಕೆಲರು ಡಂಭಾಚಾರಪರನಿವನೆಂದು ವಚಿಸಿದರು
ಕೆಲರುಮಿವನತಿ ಮುಗುಧನೆಂದ
ಕೆಲರುಮೀಕೆಯ ಚೇಷ್ಟೆಯೆಂದ
ಕೆಲರುಮೀತನ ಬಗೆಯ ತಿಳಿಯಲಸಾಧ್ಯವೆನೆ ಮತ್ತೆ ॥ ೪೩ ॥

ಬಹಳ ಭಸಿತವ ಫಣೆಗೆ ಧರಿಸುವ
ಬಹಳ ಶಿವಪೂಜೆಗಳನೆಸಗುವ
ಬಹಳ ತರದಿಂ ವಚನ ಶಾಸ್ತ್ರವ ಪೇಳ್ವುದಾಲಿಸುವ
ಬಹಳ ಶೀಲವ ಮಾಡಿ ತೋರುವ
ಬಹಳ ಜನರುಂ ಬಲ್ಲೆವಗ್ನೀ
... ... ... ... ... ॥ ೪೪ ॥

ಎಂದು ಜನ ಮನಬಂದ ಪರಿಯಲಿ
ಯಂಧಕರು ಗಜಗುರ್ತಿಸುತಲಾ
ನಂದದಲಿ ನುಡಿವಂತೆ ನುಡಿಯುತ ಚರಿಸಿ ಪೋಗಲ್ಕೆ
ಮುಂದೆ ವೀರಾಂಬೆಯಳು ಮನದೊಳು
ಕುಂದಿ ಶಿವಲಿಂಗನಿಗೆ ನಾನಿ
ನ್ನೇದು ನಿಂದೆಯ ನುಡಿಯನಾಡೆನುಮೆಂದು ಗಲ್ಲವನು ॥ ೪೫ ॥

ಬಡಿದುಕೊಳುತಲಿ ಒಡೆಯ ಶರಣನ
ನಡೆಯೊಳಂ ತಾನಿಡದೆ ಕುಂದನು
ಕಡುವಿನಯ ಬುದ್ಧಿಯಲಿಯವರಡಿ ಪೊಂದಿಯಾಚರಿಸೆ
ಸೊಡರಿನಿದಿರಲಿ ಕಾವಳಂ ತಾ
ಕೆಡುವ ಪರಿಯಲಿಯೀಕೆ ದುರ್ಗುಣ
ನಡೆದು ಪೋದವು ಕುಮತಿ ಮಿತ್ರದಿ ಸುಮತಿ ಕದನಧಿಕಂ ॥ ೪೬ ॥

ಎಂಬ ಲೋಕದ ನುಡಿಯ ತೆರ ಮನ
ದಿಂಬುಗೊಂಡಿಹ ಕಾಕುತನವಾ
ಶುಂಭ ಗುಣವಂ ಕಳೆದು ಶಿವಲಿಂಗನಿಗೆ ಶರಣೆಂದು
ನಂಬುಗೆಯ ನಿತ್ತತುಲ ಸದ್ಗುಣ
ಸಂಭ್ರಮವ ಕೈಕೊಳುತಲಾಚಾ
ರಂ ಬಗೆದು ವರ್ತಿಸುತಲಿರ್ದಳು ಸೋದರತ್ತೆಯಳು ॥ ೪೭ ॥

ಹತ್ತು ದಿನದಲಿ ಸ್ನಾನಗೈವಳು
ಸತ್ಯ ಶಿವರಾತ್ರಿಯಲಿ ಲಿಂಗವ
ಚಿತ್ತ ಬಂದರೆ ಪೂಜಿಸುತ ಚರ ತೀರ್ಥಕೊಳ್ಳುವಳು
ನಿತ್ಯ ಸ್ನಾನವ ಲಿಂಗಪೂಜೆಯ
ಚಿತ್ತಜಾರಿಯ ರೂಪ ತೀರ್ಥವ
ನರ್ಥಿಮಿಗೆ ಗೈಯ್ಯುತ್ತ ಕೊಳ್ಳುತ್ತಿರ್ದಳಾಮುಕಿಯು ॥ ೪೮ ॥

ಅರಿದು ಜನನಿಯು ತರಳ ನಿನ್ನಯ
ನೆರೆಯ ಸೇರುತಲಿರ್ದ್ದ ವೀರ
ಮ್ಮರಿತು ನಿಸ್ಸಾಚಾರವದರನುಸರಿಸಿ ನಡೆದವಳು
ಸರಿಯಿತಿಲ್ಲಿಗೆಯಾಯುವನ್ನವ
ನಿರರು ಪೋಗ್ಸರು ಗೃಹಕೆಯುರಿಯಾ
ವರಿಸೆ ಕೂಪವ ಖನನ ಗೈದರೆ ಶಾಂತವಹುದೇನು ॥ ೪೯ ॥

ತಾಯಿ ಕೋಪಿಸಿ ಸುತನೆ ನಿನಗಿದು
ಧೇಯವಲ್ಲವು ನುಡಿವದಿದು ಮೇ
ಣ್ತೇಯ ಮಡದಿಯನ್ನೀಗೆ ನುಡಿಯುತ ದಾಟಿಸಿದಿ ಮತ್ತೆ
ಆಯುವಿರುವನಕನ್ನ ನಿನಗಾ
ಗೈಯ್ಯವರೆಲ್ಲರ ಕಳಿಸಿ ನೀ ಗೋ
ಸಾಯಿಯಾಗುತ ಕುಳಿತೆನೆನ್ನುವಿ ಬಾವ ಸಂನ್ಯಾಸಿ ॥ ೫೦ ॥

ಕರುಣವಿರಬಹುದೆಲ್ಲ ಜೀವರ
ಮರಣವಾರ್ತೆಗೆ ಮರುಗದಿಹುದೇ
ನಿರವು ನಿನ್ನದು ಮಲ್ಲ ಶರಣರ ನಡೆಯಿದು ಮಲ್ಲ
ಕರುಣವೇ ಮೋಕ್ಷಕ್ಕೆ ಸಾಧನ
ಕರುಣವಿಲ್ಲದ ಧರ್ಮವಾವುದು
ಕರುಣೆ ಎನಿಸುತ ಪರರ ಸಂಕಟದಿರವನರಿ ಕರುಣೆ ॥ ೫೧ ॥

ಇರುವೆ ಮೊದಲಾದೆಲ್ಲ ಜೀವರು
ನೆರೆ ತನಗೆ ಸರಿಯೆಂದು ಕಾಣುವ
ನರನೆ ಪುರುಷೋತ್ತಮನೆನಿಸುವಂ ಪರಹಿತಕ್ಕಾಗಿ
ವರ ಸುಕೃತ ಕೀರ್ತಿಗಳನೆಳಸದೆ
ಹರಣಮಂ ಹಂಗಿಲ್ಲದರ್ಪಿಪ
ಶರಣ ಜನ ಮನ ಕರವೆ ಭುವನದಿಯಧಿಕಮಾಗಿಹುದು ॥ ೫೨ ॥

ಮರಣ ಬಂದರೆ ಯುಳಿಪರಾರೌ
ಪುರಹರನು ತಾನಲ್ಲದನ್ಯರು
ಬರಿಯ ಬಂಧುಗಳ ಹರುಮವರಿಂದೇನುಮುಪಕಾರ
ದೊರೆಯದಿದು ಧರೆ ಸುಖವು ಮಿಥ್ಯವು
ಮರೆಯಲಾರಿಗೆಯೂರುಮಿಲ್ಲವು
ಪೊರಟು ಪೋಗ್ಪರು ತಮ್ಮ ದಿನದವಧಿಗಳು ತೀರಲ್ಕೆ ॥ ೫೩ ॥

ಜನನಿ ಗರ್ಭದಲಿರುವ ಶಿಶುವಿನ
ಕನಿಕರದಿ ಸಲಹುವನೆ ಬಾಹ್ಯದಿ
ದಿನದಿನಕೆ ಹೆಚ್ಚಾಗಿ ಬೆಳಸುವ ತನ್ನ ಲೀಲೆಯಲಿ
ತನುವಿನೊಳಗಿರು ಪ್ರಾಣ ತೊಲಗಿಪ
ಮನುಜರಿಂದೇನಾಗ್ವದೌ ಮಹ
ಕನಕ ಪರ್ವತ ವಾಸಿಗಲ್ಲದೆಮನಿಮಗೆ ವಶವೆ ॥ ೫೪ ॥

ಶಶಿಯ ಬರವಿಗೆ ಶರಧಿ ಹೆಚ್ಚುಗು
ಶಶಿಯು ಕುಂದಲು ಜಲಧಿ ಕುಂದ್ವದು
ಶಶಿಗೆ ರಾಹುಂ ತುಡಕಿದಲಿಯಂಬುಧಿಯು ರಕ್ಷಿಸಿತೆ
ಋಷಿಯಗಸ್ತ್ಯನು ಹೀರುವಲಿಯಾ
ಶಶಿಯು ಶರಧಿಯ ಪೊರೆಯ ಜಗದಲಿ
ಕುಶಲ ಗೈಯ್ಯುವರಾರುವಿಲ್ಲವು ದೇವ ತಾನೋರ್ವ ॥ ೫೫ ॥

ಜೀವಿಗಳನಂ ಕಾಯ್ವ ಕೊಲ್ಲುವ
ಪಾವನಾತ್ಮನು ಪಾರ್ವತೀಶನು
ಸಾವು ಹುಟ್ಟುವುದವನಿಗಿಲ್ಲವು ನಿತ್ಯ ನವ್ಯವನು
ಭಾವಿಸಲ್ಕೀ ಜಗದ ಜಾಣ್ಮನು
ಮಾವಕಾಲದಲೇನು ಗೈಯ್ವನೋ
ಜೀವಿಗಳು ನಾವೆಂತು ರಕ್ಷಿಸಲಹುದುಮಾತಿಪರನಾ ॥ ೫೬ ॥

ಸುತ ಶಿರೋಮಣಿ ನಿನ್ನ ವಾಕ್ಯಾ
ಲತೆಯ ನಾನೇಂ ಬಲ್ಲೆ ಶ್ರೀಯುತ
ರತುಲ ವೈರಾಗಿಗಳ ಬಲ್ಲಿದ ವೀರ ವಿರತೇಂದ್ರ
ಯತಿಯು ಶಿವಲಿಂಗಾಖ್ಯ ದೇವರ
ಚತುರ ನುಡಿ ನಿರ್ಮಿತನು ನಿನ್ನಿ
ಹಿತವತಿಳಿದೆನು ಸುತನೆ ಸದ್ಗತಿದಾತ ನಿಶ್ಚಯವು ॥ ೫೭ ॥

ಎಂದು ಸೂವರ್ಣಾಂಬೆ ಮನಮುದ
ದಿಂದ ತನ್ನಯ ವೃತ್ತಿಯಲಿರುತಾ
ನಂದ ವಹಿಸುತ ವೀರಮಾಂಬೆಯಲಿಂದ ಸೇವೆಯನು
ಹೊಂದಿ ಇರುತಿರೆ ಸುಂದರಾಂಗಿಗೆ
ಬಂದಿತಾ ಮಯಕಂದಿ ಮನದಲಿ
ತಂದೆ ಶಿವಲಿಂಗೇಶ ಬಾರ್ರೆಯೆಂದು ಕರಮುಗಿದು ॥ ೫೮ ॥

ನೀನು ಮಹಿಮಾಪುರುಷ ಜ್ಞಾನಿಯು
ಮಾನುಮಾನಿನಿ ಜ್ಞಾನ ಶೂನ್ಯಳು
ಜಾಣ ನಿನ್ನಯ ಘನತೆ ಅರಿಯದೆ ಕೇಣುಗೊಂಡೆನು ನಾಂ
ಸಾನುಭೂತಿಯೆ ಶಾಂತಶರಣನೆ
ಭಾನುಸುತ ಪುರಕೆನ್ನನಟ್ಟದೆ
ದೀನಳಾದೆನ್ನುವನು ಪೊರೆ ಶಿವಲಿಂಗ ಭವಭಂಗ ॥ ೫೯ ॥

ಮೂರು ಲೋಕವು ವಿಷಯ ಸುಖದಿಂ
ನೂರುಸಾವಿರ ಜನ್ಮ ಚರಿಪರು
ಚಾರುಲಿಂಗಾನಂದದೊಳು ಪರಿಣಮಿಪ ಶರಣರನು
ಘೋರಭವ ಶರಧಿಯಲಿ ಮುಳುಗುತ
ಪಾರಗಾಣದೆ ಬನ್ನಬಡು ಸಂ
ಸಾರಿಗಳು ನಾವೆತ್ತಬಲ್ಲೆವು ವಿಷಯಲಂಪಟರು ॥ ೬೦ ॥

ಹಮ್ಮಿನಿಂ ಮುರವೈರಿ ಕೆಟ್ಟನು
ಬೊಮ್ಮ ಕೆಟ್ಟನು ಕೌಶಿಕನು ಮೇಣ್
ಹಮ್ಮಿನಿಂದ ಮರಾಸುರರ್ನಕ ಪಶುಗಳೆನಿಸುವರು
ಹಮ್ಮು ಪರತತ್ವಾನುಭೂತಿಯೊ
ಳುಮ್ಮಳಂಗೊಡುತಿಹುದು ಜೀವಿಗೆ
ಹಮ್ಮು ಕೆಟ್ಟದು ಹಮ್ಮು ಸಂಸ್ಕೃತಿ ಬೀಜ ತಿಳಿಯೌ ನೀ ॥ ೬೧ ॥

ಕೋಳಿ ಕೂಗ್ವದು ಬೆಳಕನರಿಯುತ
ವೇಳ್ಯೆವರಿತೊದರುವದು ಗಾರ್ದಪ
ಕೊಳುಪಾಕುತ ಸಲಹಿದೊಡೆನನತನು ಗೃಹಂಗಳನು
ಪಾಲನವಶುನಿಗೈವುದಾ ಮಳೆ
ಬೀಳ್ವದರಿದೊದರುವದು ಭೇಕಂ
ತಾಳಿ ನರಜನ್ಮವನು ತಿಳಿಯದುಮವುಗಳಿಂ ಕಡೆಯು ॥ ೬೨ ॥

ಪ್ರಭೆಯನರಿವುದೆ ಕಾಳುಗತ್ತಲೆ
ಸಭೆಯನರಿವನೆ ಮೂರ್ಖ ದಿನಪನ
ಸೊಬಗನರಿವುದೆ ಗೂಗೆ ಪರುಷವನ್ಹಂಚುವರಿದಪುದೆ
ಇಭನ ಬಲ್ಲುದೆ ಶ್ವಾನ ಮಕರಂ
ದ್ವಿಭವ ಬಲ್ಲುದೆ ವರಹ ಮುತ್ತಿನ
ಪ್ರಭಲ ಕ್ರಯತಾನ್ಹೊತ್ತ ಕತ್ತೆಯು ಬಲ್ಲುದೇಂ ಶರಣ ॥ ೬೩ ॥

ಕಾಕ ಬಲ್ಲುದೆ ಹಂಸ ಗತಿಯಂ
ಭೇಕ ಬಲ್ಲುದೆ ಕಮಳ ಧೂಳಿಯ
ನಾಕ ಬಲ್ಲುದೆ ಕೋಕ ವೀಣೆಯ ಸೌಖ್ಯನಾದವನು
ಮೂಕ ಬಲ್ಲನೆ ರೋಗಿ ಸವಿಯಹ
ಪಾಕ ಬಲ್ಲನೆ ಶರಣ ಸದ್ಗುಣಿ
ಕಾಕುಗುಣಿಯೀ ಕರುಣಿ ನಿಮ್ಮನು ಬಲ್ಲೆನೆಂತಕಟ ॥ ೬೪ ॥

ನೀನೆ ಶರಣಗಣಾಳಿಗಾರ್ಯಂ
ನೀನೆ ಮಹಿಯೊಳುಮಾಗ್ರಗಣ್ಯಂ
ನೀನೆ ಧರೆ ಜನನಿಕರ ಮಾನ್ಯಂ ಶೈವ ಸುಖಪೂರ್ಣಂ
ನೀನೆ ಲಿಂಗಾಂಗ್ಸಮರ ಸಾಖ್ಯಂ
ನೀನೆ ಕೋಪಾಂಬೋಧಿ ಕಲಶಜ
ನೀನೆ ಗತಿ ಮತಿ ಮುಕ್ತಿ ಗುರುವರನೆನ್ನ ಸಲಹುವದೈ ॥ ೬೫ ॥

ಹಿಂದೆ ಬಹುಜನ್ಮಗಳ ಪುಣ್ಯದಿ
ಬಂದು ನಿನ್ನಯ ಗೃಹದಿ ತೊಡಕಿದೆ
ಮಂದ ಭಾಗ್ಯಳ ಗುಣವನೆಣಿಸದೆ ತಾವು ಕೈವಲ್ಯ
ಹೊಂದುವಾಗೆನ್ನುವನು ಕರದೊ
ಯ್ದಂದು ನಿರ್ಗುಣ ಸುಖದಿಯಿನ್ನಿರಿ
ಸೆಂದು ಬೇಡುವೆ ಶರಣ ಭವಭಯಹರಣ ಶಿವಲಿಂಗ ॥ ೬೬ ॥

ದುರಿತ ಕರ್ಮವ ಮಾಡಗೊಡದೀ
ಪರಮ ಹಿತಕಾರ್ಯದೊಳು ಮನವಂ
ತಿರಿಗಿಸಿತು ಸತ್ಸಂಗ ನಿನ್ನಯ ಮಾಳ್ಪ ಸಹಾಯವನು
ತೊರೆಯೆನೆಂದು ನಂಬುಗೆಯನುರು
ತರಗುಣಂಗಳ ಪ್ರಕಟವಂ ಜನ
ನೆರೆದರಿವರೆದುರಿನಲಿ ಎನ್ನಯ ಕರವಪಿಡಿ ದೇವಾ ॥ ೬೭ ॥

ಸುಶೀಲ ಸಜ್ಜನ ಶರಣ ಸಂಗದಿ
ವಸುಧೆಯೊಳು ಮಾನವರು ಬಿಡವಲೆ
ಕುಶಲರಪ್ಪುವರೆಂಬುದದು ಬಲು ಸಿದ್ಧಪ್ರಸಿದ್ಧ
ಕುಸುಮ ಸಂಗದಿಯಾಪಿಪೀಲಿಕ
ಶಶಿಧರನ ಪದ ಸೇರುವದು ನಿಜ
ಸಸಿನ ಶರಣರ ವಚನ ರಚನಾಳಿಗಳು ಪೊಗಳುವವು ॥ ೬೮ ॥

ಎಂದು ಪಶ್ಚಾತಾಪ ಜ್ವಾಲೆಯ
ನ್ನೊಂದಿ ದುರ್ಗುಣ ತೃಣವ ದಹಿಸುತ
ಲಿಂದುಧರ ಶರಣನಿಗೆ ಮೊರೆಯಿಡೆ ಕೇಳಿ ನಸುನಗುತ
ಮುಂದೆ ನಾಂ ಪೋಗುವದು ದೂರಿದೆ
ಯಿಂದೆ ನೀ ಪೋಗುವದು ನಿಶ್ಚಯ
ಪೊಂದಲಾರೆಯು ಮುಕ್ತಿ ನೀನ್ಹಂಬಲಿಸದಿರು ಬರಿದೆ ॥ ೯ ॥

ನೆರೆದ ಶಿವ ಭಕ್ತ ಜನ ಸಮೂಹವ
ವರರೆ ಶಿವಲಿಂಗಾಖ್ಯ ಸರಿಯೇಂ
ಕಿರಿಯುತನದಿಂ ನಿಮ್ಮ ಗೃಹದಲಿ ಸುಖವನರಿಯದಲೆ
ಸೆರೆಮನಿಯ ನರನಂತೆ ಬಲು ಪರಿ
ಪರಿಯದುಡಿದಿರುವವಳ ಪ್ರೇಮದಿ
ಪೊರೆಯದಿರುವದುಮುಚಿತವೇ ಹರ ಶರಣ ಸನ್ಮತವೆ ॥ ೨೦ ॥

ಶಿಷ್ಟ ಭಕ್ತರೆ ನಿಮ್ಮ ನುಡಿ ದಿಟ
ಬಿಟ್ಟ ಬಾಣಂ ತಿರುಗಿಸಲ್ಬರ
ದಿಷ್ಟ ತಾಣಕೆ ಬೀಳ್ವುದಲ್ಲದೆ ಕಟ್ಟಳೆಯುಮಿಲ್ಲ
ಹುಟ್ಟಲೀಕೆಯು ಮೂರು ಜನ್ಮಂ
ಸೃಷ್ಟಿಯೊಳು ನಿಜ ನಿಜವುಮಲ್ಲಿಂ
ಕಟ್ಟಕಡೆಯುಲಿಮಿವರ ಸನ್ನಿಧಿ ಮುಕ್ತಳಹುದಲ್ತೆ ॥ ೨೧ ॥

ಮೂರು ಜನ್ಮಗಳಾವುಮಾರಲಿ
ಸಾರಿರೆಂದಾಗವರು ಪ್ರಶ್ನಿಸೆ
ಚಾರು ಹರಣೆಯದೊಂದು ಜನ್ಮೆರಡನೆದು ಮಂಗಲಗಿ
ಊರು ವಡ್ಡರ ಗರ್ಭದಿಂದಿದೆ
ಮೂರು ಸಿಂಗಿನ ಶೆಟ್ಟಿ ಮಹಂತನ
ನಾರಿ ನಾಗಾಂಬಾಖ್ಯೆಯುದರದಿ ಪುಟ್ಟಿದಾ ಮೇಲೆ ॥ ೨೨ ॥

ಮುಕ್ತಳೀಕೆಯುಮಿದಕೆಗುರ್ತೇಂ
ಹಸ್ತ ಪದಕಾರಾರು ಬೆರಳುಂ
ಯುಕ್ತ ಮಾಗಿರಲೊಂದು ಹೆಬ್ಬೆರಳದಕೆ ಕಚ್ಚಿರ್ದು
ವ್ಯಕ್ತಮಾಗುತತೋರ್ವದದು ಮೃಗ
ದುಕ್ತ ಖುರಕೀ ಗುರ್ತು ಸಿದ್ಧವು
ಭಕ್ತರೇಕ್ಷಿಸಿರೆಂದುಮಾಕೆಯ ಬೆರಳು ತೋರಲ್ಕೆ ॥ ೨೩ ॥

ಹರಣವೊರೆದಳು ವೀರಮಾಂಬೆಯು
ನೆರೆದ ಭಕ್ತರು ಚಕಿತರಾಗುತೆ
ಶರಣ ಶಿವಲಿಂಗೇಶನನು ಕೊಂಡಾಡಲನಿತಕ್ಕೆ
ಹರನ ವಸ್ತುವು ಹರಗೆ ಸಲ್ಲಿತು
ಬರಿಯ ಚೀಲ್ಧರುಣಿಯೊಳು ಮುರುಳಿತು
ದುರಿತ ಭ್ರಮೆಯಿಂ ಜಗವು ಮರುಗ್ವದು ದೇಹವಾಸೆಂದು ॥ ೭೪ ॥

ಬೇಡನೋರ್ವನು ಕಾಡಮೊಲನಂ
ಗಾಢದಿಂ ಕೊಂದದನು ಮಾರಲು
ನಾಪೆ ಮಾಂಸಾರಿಗಳು ಕೊಳ್ವರು ಹಾಗವೊಂದಕ್ಕೆ
ಸಾಡನಾಳ್ವನ ಹೆಣವನೆಂದರೆ
ಬೇಡರಾಗೊಡ್ಡ ಕೆಯೊಂದಕೆ
ಖೋಡಿ ನರಜನ್ಮಿದುವೆ ಮೊಲನಿಂ ಕೀಳು ಬಲುಕೀಳು ॥ ೭೫ ॥

ಪಡೆದವರಿಗೊರೆದೊಗಿಯಲಿಲ್ಲಂ
ಕಡೆಗವರ ಬೆಸನವನು ಪಡೆಯುತ
ಮಡಿಯಲಿಲ್ಲಂ ಪೊಡವಿಯೊಳು ಬರಿದೇಕೆ ಜನ್ಮಿಸಿತೋ
ಕಪು<sup></sup>ಖಿವನುರೆ ಪೊಂದಲಿಲ್ಲಂ
ಬಿಡದೆ ಕರ್ಮಾಧೀನವೆ.ಸುತ
ದುಡಿದುದುಮಕರದಿಂದೆ ಮರಗುತ ಮೃತಿಪದಾಯ್ತುಕಟ ॥ ೭೬ ॥

ಎನುತ ಭಕ್ತರ ಕೂಡಿ ಜನನಿಯ
ಮನಕೆ ಶಾಂತಿಯನಿತ್ತು ಶರಣನು
ನೆಸೆದು ವೀರಾಂಬೆಯಳ ಸಂಸ್ಕರಿಸುತಲಿ ಸರ್ವರನು
ಮನೆಗೆ ಕಳಿಸುತಾ ತನ್ನ ಗೃಹಕಾ
ಸನುತ ಬರುತಂ ಲಿಂಗಪೂಜೆಯು
ಘನತರಾನಂದದಲಿ ಮೆರೆದನು ಭಾಪು ಶಿವಶರಣ ॥ ೭೭ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರೆದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳ.ಇಮಿಷ್ಟಾರ್ಥಸಿದ್ಧಿಯು ನವಮ ಸಂಧಿಯಿದು ॥ ೭೮ ॥

ಅಂತು ಸಂಧಿ ೯ಕ್ಕಂ ಪದನು ೭೮೩ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೧೦

ಶರಣ ಶಿವಲಿಂಗೇಶ ಜನನಿಯ
ಪರಮ ವಾಕ್ಯವು ಕೇಳಿತಾ ಶ್ರೀ
ಗಿರಿಯ ಮಲ್ಲನ ಕಂಡ ಮಹಿಮೆಯನು ಜನರಾಲಿಪುದು ॥ ಪಲ್ಲ ॥

ಪಾರ್ವತಿಯ ಮುಖಕಮಲ ಸಖಜಯ
ಪಾರ್ವತಿಯ ಕರಕಮಲಧರ ಜಯ
ಪಾರ್ವತಿಯ ಸರ್ವಾಂಗ ಗಾಢಾಲಿಂಗನರ್ಘ ಜಯ
ಪಾರ್ವತಿಯ ಕುಚ ಕುಂಕುಮಾಂಕಿತ
ಪಾರ್ವತಿಯ ಬಿಂಬಾಧರಾಮೃತ
ಸೇವ್ಯ ಪಾರ್ವತಿ ಪತಿಯೆ ಜಯ ಶಿವಲಿಂಗ ಭವಭಂಗ ॥ ೧ ॥

ಸತ್ವಶಾಲಿಯು ಜಗಕೆ ತನ್ನಯ
ಸತ್ವ ವಂಶತಗೊಳಿಸದಲೆ ನಿ
ತ್ಯತ್ವಚಿಂತನೆಯಲ್ಲಿ ಮನ ಮಡಗಿಸುತೆ ಕಿಂಕರದಿ
ಪೃಥ್ವಿಗಧಿಕರು ಶರಣ ಜಂಗಮ
ರಾಪ್ತರೆನ್ನಯ ಮಾತೆ ಪಿತ ದೈ
ವತ್ವ ಶಿವನಗಜಾತೆಯಿವರೆಂದೆಂದು ಸಂತಸದಿ ॥ ೨ ॥

ಇರಲು ಸೂವರ್ಣಾಂಬೆಯಳು ತಾ
ನರಿದು ಶ್ರೀಗಿರಿ ಯಾತ್ರೆ ಬಂದುದು
ತರಳ ಶಿವಲಿಂಗನಿಗೆ ನುಡಿದಳು ಮನದ ವಾಂಛೆಯನು
ಕಿರಿಯ ನೀನಿರುವಾಗ ತಮ್ಮಾ
ಕಿರಿ ಕಿರಿಯು ಬಲು ಗೈಯ್ಯುತಿರಲಾ
ಗಿರಿಯಮಲ್ಲನ ಕಾಣ್ವ ಚರತೃಪ್ತಿಯನು ವಿರಚಿಸುವೆ ॥ ೩ ॥

ಎಂದು ಪರಕೆಯು ಪೊತ್ತು ಕೆಲದಿನ
ಸಂದುಪೋದವುಮಿಂದು ನೆನವಿಗೆ
ತಂದೆ ನಾಳಿನ್ಮುಂದೆ ಕಾವಡಿಪೊತ್ತು ಜಂಗಮರು
ಚಂದದಾ ಶ್ರೀಗಿರಿಗೆ ಪೋಗ್ವರು
ನಿಂದಿರದೆಯವರೊಡನೆ ಪೋಗುತ
ತಂದೆ ಮಲ್ಲನ ಪರಕೆ ಮುಟ್ಟಿಸಿ ಮರಳಿ ಬಾಯೆನಲು ॥ ೪ ॥

ಮಾತೆ ನಿನ್ನಯ ಪರಕೆಯನು ನೀ
ನೋತು ಮುಟ್ಟಿಸಿ ಬರುವದದು ಹಿತ
ನೀತೆ ಎನ್ನನ್ನೆತಕಟ್ಟುವಿ ನಾನು ಸದ್ಭಡಳಿ
ಸೋತ ಶರೀರದಿ ಸಾಗಿ ಪೋಗುವ
ರೀತಿಯೇ ಶಿವಲಿಂಗ ನಿನಗಿದು
ಕಾತಳಂ ಬೇಡಮ್ಮ ಬಂಗಾರೆಮ್ಮ ನಾಂ ಪೋಗ್ವೆ ॥ ೫ ॥

ಎನುತ ಜನನಿಯ ಮನಕೆ ಶಾಂತಿಯ
ನನುಗೊಳಿಸಿ ಭಕ್ತಾದಿ ಸಮೂಹವ
ಘನಪರಶಿವನು ಕೂಡಿ ಸಾಹಿತ್ಯಂನಸಂಭ್ರಮದಿ
ಮನುಮಥಾರಿಯ ನಾಮ ಘೋಷದಿ
ಬಿನದಿಸುತ ಪುರಜನದ ಸಂದಣಿ
ಯನು ತ್ಯಜಿಸಿ ಬೆಂಬಲದ ಭಕ್ತರ ಕೂಡಿ ಸಾಗಿದನು ॥ ೬ ॥

ಮಾರ್ಗ ಕ್ರಮಣವ ಗೈಯ್ಯುತನುದಿನ
ಮಾರ್ಗದಲಿ ಶಿವಭಜನೆಯೀಶ ಚ
ರಾಗ್ರಗಣ್ಯರ ತೃಪ್ತಿ ಪ್ರಮಥರ ವಚನದನುಸದರಣೆ
ವ್ಯಾಘ್ರಚರ್ಮಾಸನ ಶರಣನುಂ
ಶೀಘ್ರದಲಿ ಬರುತಿರಲು ಗಿರಿ ಮೂ
ಲಾಗ್ರ ಕಥನವ ಕೇಳೆ ಭಕ್ತರು ತಿಳಿಸುಪೆ ಳಿವನು ॥ ೭ ॥

ಕೇಳಿರೆಲೆ ಭಕ್ತಾದಿಗಳೆ ಶ್ರೀ
ಶೈಲ ಮಹಿಮೆಯು ನಮ್ಮ ಹಿರಿಯರ
ಕಾಲದಲಿ ಲಿಖಿಸಿಟ್ಟ ಚರಿತೆಯನುಸುರುವೆನು ನಿಮಗೆ
ಬಾಳ ಬಲ್ಲಿದರವರಪ್ರತಿಮರು
ಪಾ ಲಲಿತ ಗಿರಿಯಾತ್ರೆ ಗೈವರು
ಮೂಲ ನಂದೀಕೋಲನೊಂಶಜರೆಂಬನಾಮಾಯ್ತು ॥ ೮ ॥

ಕೃತಯುಗದಿ ಕೇದಾರ ಕ್ಷೇತ್ರವು
ಪತಿಯು ಪರತರ ರಾಮಲಿಂಗನು
ತ್ರೃತಯುದಲಿ ಶ್ರೀಕಾಶಿ ವಿಶ್ವೇಶ್ವರನು ದ್ವಾಪರದಿ
ವಿತತ ಹಂಪಿಯು ವಿರುಪಾಕ್ಷನು
ಘತಿತ ಕಲಿಯುಗ ಕ್ಷೇತ್ರ ಶ್ರೀಗಿರಿ
ಯುತ ಸದಾಶಿವ ಮಲ್ಲಿಕಾರ್ಜುನನಾಗಿ ಮೆರೆಯುವನು ॥ ೯ ॥

ಶ್ರೀಗಿರಿಯ ಮಹಿಮೆಯನು ಬಣ್ಣಿಸೆ
ನಾಗಪತಿಗಸದಳವು ಹರಿಸುರ
ಪೂಗಕಗಣಿತ ಮನುಮುನೀಂದ್ರರ ಮತಿಗಗೋಚರವು
ಮೀಗಳಾನೆನಿತರವ ನೀ ವರ
ಯೋಗಿ ನಿರ್ಮಿತವೆನಿಪ ಮಂಗಲ
ಶ್ರೀಗಿರಿಯ ಚಾರಿತ್ರಮಂ ತಿಳಿದನಿತು ಪೇಳುವೆನು ॥ ೧೦ ॥

ನಂದಿಮಂಡಲದಲ್ಲಿ ಮುನಿಗಳ
ವೃಂದದೊಡನೆ ಶಿಲಾದಋಷಿಯಾ
ನಂದದಿಂ ತಪಗೈವನುಜ್ವಲ ಪುತ್ರನನಂ ಬಯಸಿ
ಒಂದು ತಿಂಗಳಿನಿತು ಶಿಲೆಯಂ
ತಿಂದು ಭೀಕರ ತಪವ ಮಾಳ್ಪುದ
ರಿಂದಲಾತ ಶಿಲಾದನೆಂಬುವ ನಾಮಯುತನಾದ ॥ ೧೧ ॥

ಆತನುರುತರ ತಪಕೆ ಗೌರೀ
ನಾಥ ಮೆಚ್ಚುತ ಬಂದು ವರಗಳ
ಪ್ರೀತಿಯಿಂ ಬೇಡೆನಲು ಯತಿಪನು ಮುದದಿ ವಂದಿಸುತೆ
ಸಾತಿಶಯದಿಂದೆನ್ನ ಜಠರದಿ
ನೀ ತಳುವದುದಿಸೆನ್ನಲಭವನು
ನೀತಿಯಲ್ಲೆನುತೆನ್ನ ತನು ಮೂರಾಗಿ ರಂಜಿಸುವ ॥ ೧೨ ॥

ಪರಮ ಭಕ್ತಿಜ್ಞಾನ ವಿರತಿಯೆ
ಶರೀರವಂ ತಳೆದುದಿಸುವಂದದಿ
ವಿರಚಿಸುವೆನೆನೆ ಮುನಿವರಂ ಮತ್ತೆರಗುತಿಂತೆಂದ
ಪುರಹರನೆ ಯೆನ್ನಾತ್ಮಜಾತರು
ದುರುಳರಾದರೆ ತರಿದು ಹಾಕುವೆ
ನಿರುತ ನಿನ್ನನು ಭಜಿಪ ಮಕ್ಕಳ ಕೊಡುವುದೆನೆ ಶಿವನು ॥ ೧೩ ॥

ನಕ್ಕು ಮುನಿಪನೆ ನಿನ್ನ ಬಯಕೆಯು
ಮಕ್ಕಳೀ ತ್ರೈಜಗದ ಪಾಪವ
ನೊಕ್ಕಲಿಕ್ಕುವ ಪಾವನಾತ್ಮಕರಾಗಿ ರಂಜಿಪರು
ಕಕ್ಕುಲತೆವಾತಿದುವೆ ನಿಶ್ಚಯ
ಚಿಕ್ಕವರ ನಡೆಗಂಡು ನಂಬೆನೆ
ಮುಕಣ್ಣುಳವನಾಜ್ಞೆಯಿಂದಲಿ ವರಗಳಂ ಪಡೆದು ॥ ೧೪ ॥

ಹರುಷದಿಂದಿರುತಿರಲು ಮುನಿಪಗೆ
ತರಳರಾದರು ನಂದಿ ಪರ್ವತ
ಪರಮ ಭೃಂಗಿಗಳಿವರೆ ಭಕ್ತಿ ಜ್ಞಾನ ವಿರತಿಗಳು
ಅರುವಿನವತಾರೆನಿಪ ಪರ್ವತ
ವರ ಮುನಿಯ ಚಾರಿತ್ರವೆಂತೆನೆ
ಪರಿಪರಿಯ ತಪವೆಸಗುತಿರ್ದನು ಪೂರ್ಣ ಭಕ್ತಿಯೊಳು ॥ ೧೫ ॥

ಪರ್ವತೇಂದ್ರನ ತಪಕೆ ಮೆಚ್ಚುತ
ಶರ್ವನಾನೆಲೆಗೈದು ಬಯಕೆಯು
ಸುರ್ವದೆನೆ ಮುನಿನಾಥನೆದ್ದಾ ಶಿವಗೆ ನಮಿಸುತ್ತೆ
ಉರ್ವಿಯೊಳಗೀ ದೇಹಮಿಲ್ಲಿಯೆ
ಪರ್ವತಾಕೃತಿಯಿಂದ ನೆಲೆಸಲಿ
ಸರ್ವ ತೀರ್ಥಕ್ಷೇತ್ರನಿವಹಗಳಿಕ್ಕೆ ಸಂತಸದಿ ॥ ೧೬ ॥

ಪರಿಪರಿಯ ರೋಗಗಳ ಕಳೆಯುವ
ತರತರದ ಕುಜಗುಲ್ಮಲತೆಗಳು
ಇರಲಿ ಎನ್ನಯ ಶರೀರದೊಳು ನೀಂ ಗೌರಿಯೊಡಗೂಡಿ
ಶಿರದೊಳಗೆ ಮನೆಮಾಡಿಕೊಂಡಿರು
ಹರಿವಿಧಿಯು ಬೃಂದಾರಕೇಂದರು
ನಿರುತವಿಲ್ಲಿಯೆ ವಾಸವಾಗಿರಲೆಂದು ಬೆಸಗೊಂಡ ॥ ೧೭ ॥

ಭಕ್ತ . ಚ್ಛೆಯ ಪೂರ್ಣಮಾಡ್ವಾ
ಸಕ್ತನಾ ಶಂಕರನು ಪರ್ವತ
ನುಕ್ತಿಗತ್ಯಾನಂದದಿಂ ಮೆಚ್ಚುತ್ತಲಂತೆಸಗೆ
ಭಕ್ತನಹ ಶ್ರೀಪರ್ವತೇಂದನು
ಮುಕ್ತಿಕ್ಷೇತ್ರಮಿದೆನಿಸಿ ಮೆರೆದನು
ಯುಕ್ತಮಾಗಿಹವಲ್ಲಿ ಪರತರ ಪುಣ್ಯ ತೀರ್ಥಗಳು ॥ ೧೮ ॥

ತಿರುಪತಿಯ ತಿಮ್ಮಪ್ಪನಿರುತಿಪ
ಗಿರಿಯುದುವೆಮೀಕ್ಷೇತ್ರ ಮಧ್ಯದಿ
ಪರಮವೋಂಕಾರೇಶ್ವರಂ ನವನಂದಿಮಂಡಲವು
ಹರುಷದಿಂ ನವನಂದಿಕ್ಷೇತ್ರವು
ಮೆರೆವುದಾ ರಾಚೋಟಿಯಾಲಯ
ಹರಿಯಜಾದ್ಯರ ಬಗೆಗಗೋಚರಮೆನಿಪ ಶೈಲದೊಳು ॥ ೧೯ ॥

ಇದುವೆ ಅಷ್ಟಾದಶ ಸುಪೀಠದಿ
ಮೊದಲೆನಿಪ ಭ್ರಮರಾಂಬೆ ಶಕ್ತಿಯು
ಪದುಳದಿಂದಿರಲಾ ನಗೋದ್ಭವೆವೆರೆಸಿ ಶಂಕರನು
ಮುದದಿ ದ್ವಾದಶ ಜೋತಿಲಿಂಗದೊ
ಳಿದುವೆ ಘನಮೆನೆ ಮಲ್ಲಿಕಾರ್ಜುನ
ಸದಯ ನಾಮದಿ ಮೆರೆವನಾ ಶ್ರೀಗಿರಿಯ ಮಧ್ಯದೊಳು ॥ ೨೦ ॥

ಶ್ರೀಗಿರಿಯ ಪರಿಪೂರ್ಣವೆಂತೆನ
ಲಾಗ ನಾಲ್ವತ್ತೆಂಟು ಯೋಜನ
ಮಾಗಿ ರಂಜಿಪುದದರೊಳಿಹ ಸರ್ವಾರ್ಥ ಸಂಪದವ
ರಾಗದಿಂ ಕಾಯ್ದಿರ್ಪ ಭೈರವ
ಪೂಗವಂಬಲಗೊಂಡು ಪೇಳುವೆ
ನಾಗಲೋಕವ ವೀರಭದ್ರನು ಮೊದಲೊಳೊಪ್ಪಿಹನು ॥ ೨೧ ॥

ನಂದಿಮುಖದೊಳು ತೀರ್ಥ ಬರುತಿದೆ
ಮುಂದೆ ಹೊಸಕೆರೆಯೆಂಬುದಿದೆಯುದ
ರಿಂದ ಭೀಮನಕೊಳ್ಳವೊಪ್ಪುಗುಮಾ ಸರೋವರಕೆ
ಬಂದುದೀ ಪೆಸರೇತಕೆನೆ ಮೊದ
ಲಿಂದುಧರನೋಳ್ ಸೆಣಸಿ ಪಾರ್ಥನು
ಮಂದ ಪಾಶುಪತಾಸ್ತ್ರಮಂ ಪಡೆದೈದುದಂ ನೋಡಿ ॥ ೨೨ ॥

ಜನರು ಬಣ್ಣಿಸುತಿರಲು ಭೀಮನು
ಕ್ಷಣದೊಳಾ ಶಂಕರನನೊಲಿಸುವೆ
ನೆನುತಲೀ ನೆಲೆಗೈದೆ ವೀರಾವೇಷ ಭಕ್ತಿಯೊಳು
ಘನ ಗದೆಯ ನಭಕೊಗೆದು ಎದೆಯಂ
ನನುವಿನಿಂದೊಡ್ಡಿರಲು ಮೆಚ್ಚುತ
ಮನಸಿಜಾಂತಕನೊಲಿದು ಗದೆಯಂ ಪಿಡಿದು ಮಧ್ಯದೊಳು ॥ ೨೩ ॥

ಎಲೆ ಭೀಮ ನಿನ್ನಿಷ್ಟವೇ ನೆನೆ
ನಲಿದು ಭೀಮನು ನಮಿಸಿ ಭರ್ಗನೆ
ಯುಲಘುರೌದ್ರದ ಪೂರ್ಣ ರೂಪವ ಕೊಡುವದೆನಗೆನಲು
ಮಲಹರಂ ಕೃಪೆ ಮಾಡಿದನು ಮೀ
ನೆಲೆಯೊಳದರಿಂದಿದಕೆ ಭೀಮನ
ಕೊಳವೆನಿಸಿಪ ಪೆಸರಾದುದಲ್ಲಿಂ ಮುಂದೆ ಕೈಲಾಸ ॥ ೨೪ ॥

ಬಾಗಿಲಿದೆಯಲ್ಲಿರುವ ನಂದಿಯು
ಭೋಗ ಮಗ್ನರ ಮಾರ್ಗನೋಡುವ ನೀ
ಗಿರಿಗೆ ಬರಲೆಂದು ಮರುಪತಬ್ದವನ್ನೆಗವು
ನಾಗಪತಿಗನದಳವು ಸೈಪಿನ
ಪೂಗಮಂ ಬಣ್ಣಿಸುವರಾರನು
ರಾಗದಿಂ ಬಟ್ಟೆಯನು ಕಾಯ್ದಿಹ ಬಸವನೆನ್ನುವರು ॥ ೨೫ ॥

ಮುಂದೆ ಪೋಗಲು ವಿಘ್ನರಾಜನ
ಮಂದಿರವು ವೀರೇಶನಾಲಯ
ದಿಂದಮಲ್ಲಿಯೆ ಮಲ್ಲಿಕಾರ್ಜುನನರಮನೆಯು ತೋರ್ಕು
ಬಂಧುರದ ಪ್ರಾಕಾರ ನಾಲ್ದೆಸೆ
ಗ್ಹೊಂದಿ ಕಾಣುವ ದ್ವಾರ ಗೋಪುರ
ನಂದಿಕೇಶ್ವರನೊಳಗೆ ರಾರಾಜಿಪನು ಸೊಗಸಿಂದೆ ॥ ೨೬ ॥

ನಡುವೆ ಶ್ರೀಗಿರಿ ಮಲ್ಲಿಕಾರ್ಜುನ
ಪಡುವಣಲಿ ಭ್ರಮರಾಂಬೆ ಶಕ್ತಿಯು
ಸಡಗರದ ಭಾರ್ಗವಿಯ ಶಾರದೆ ತೀರ್ಥಗಳು ಮತ್ತೆ
ಮೃಡನ ಮಂದಿರದಲ್ಲಿ ಲಿಂಗದ
ಗಡಮೇ ರಂಜಿಸುಗುಮಲ್ಲಿಯು
ಜಡಜನಾಭನು ಬಿದಿಯು ಸುರಪಾದಿಗಳು ಪೂಜಿಸಿದ ॥ ೨೭ ॥

ಗುರುಗಳೈವರ ಮಠಗಳಿರುವವು
ಪರತರಾ ಸಾರಂಗ ಘಂಟಾ
ಪರಮ ಭಸಿತದ ಮಠಗಳೆಂಬೀ ನಾಮಗಳನಾಂತು
ಇರುವ ಘಂಟಾ ಮಠದ ಸಿದ್ಧೇ
ಶ್ವರನು ಬಾಲಾ ತ್ರಿಪುರ ಸುಂದರಿ
ಮೆರೆವ ನೆಲೆಯೊಂ ರವಿ ಶಶಿಯ ತಾಣಂಗಳೊಪ್ಪುವವು ॥ ೨೮ ॥

ಅಲ್ಲಿಯೇ ಶಿವ ಸಿದ್ಧರಾಮಗೆ
ಮಲ್ಲಿಕಾರ್ಜುನನೊಲಿದು ಸಲಹಿದ
ಸಲ್ಲಲಿತ ಶ್ರೀ ರುದ್ರಗಂಮರಿನಯನ ಗುಂಡವಿದೆ
ಎಲ್ಲಿ ನೋಡಿದವಲ್ಲಿ ಲಿಂಗಗ
ಳಲ್ಲದೇ ಪೆರತಾವುದಿಲ್ಲವು
ಸೊಲ್ಲಿಸಲು ಶ್ರೀಗಿರಿಯ ಮಹಿಮೆಯುದಾರ್ಗೆಯಸದಳವು ॥ ೨೯ ॥

ಮೂಲದೊಳು ಶ್ರೀಕೃಷ್ಣವೇಣಿಯು
ಮೇಲೆ ಘಟಪ್ರಭೆಯುಂ ಮಲಾಪ್ರಭೆ
ಯಾ ಲಲಿತ ನರ್ಮದೆಯು ಭೀಮೆಯು ತುಂಗಭದ್ರೆಗಳು
ಮೇಳವಿಸಿದೀಯೇಳು ನದಿ ಪಾ
ತಾಳ ಗಂಗೆಯದೆನಿಸಿ ರಾಜಿಪ
ಶೈಲದೊಳು ಮೆರೆಯುವವಳು ಪಾಪಿಗಳ ಪಾಪ ಕಳೆಯುತ್ತೆ ॥ ೩೦ ॥

ಅಲ್ಲಿಯೇ ಅತಿ ಪಾಪನಾಶಿನಿ
ಸಲ್ಲಲಿತ ತೀರ್ಥಮದು ಕೂಡುತ
ಲೆಲ್ಲ ಸೈಪಿನ ತಾಣವಹ ಪಾತಾಳ ಗಂಗೆಯೊಳು
ಖಿಲ್ಲರುಂ ಪಾಪಿಗಳು ಮತ್ತೆಯು
ಬಲ್ಲವರು ತಾವಿರಲಿ ಮುದದಿಂ
ದಲ್ಲಿಯೋರ್ಮೆಯು ಸ್ನಾನಗೈದಡೆ ಮುಕ್ತರಾಗುವರು ॥ ೩೧ ॥

ಶರಭ ನಾನರಹರಿಯನೊದೆಯಲು
ಭರದಿ ಬಂದಾನದಿಯ ತೀರದೊ
ಳಿರುವ ಗುಹೆಯೊಳು ಪೊಗಲದುಂ ನರಸಿಂಹ ಗವಿಯೆಂದು
ಕರೆವರಲ್ಲಿಂ ಮುಂದೆ ನೋಡಲು
ಮೆರೆವುದಾ ಶ್ರೀಲಿಂಗ ನದಿಯದು
ಪರಮ ಪಾವನಲಿಂಗವಗಣಿತದಿಂದ ಕಂಗೊಳಿಸೆ ॥ ೩೨ ॥

ಕದಳಿಬನಮುಂ ಬಿಲ್ವವನಮುಂ
ಮುದದಿ ಬಸವ ಸರೋವರಂ ಬಹು
ವಿಧದ ಮಹಿಮೆಯ ನೆಲೆಗಳುಂ ಮಹಾಸಿದ್ಧರಸಕೂಪ
ಪದಪಿನಿಂದಾ ಚಂದ್ರಗುಪ್ತನ
ಸದನವಿಹುದತಿ ರಮ್ಯ ಶೈಲದಿ
ಸದಯಮೂರ್ತಿಯು ಹಾಟಕೇಶ್ವರಲಿಂಗವೊಪ್ಪಿಹುದು ॥ ೩೩ ॥

ಪಾಲುದಾರೆಯು ಪಂಚಧಾರೆಯು
ಶ್ರೀಲಲಿತ ಶಿಖರೇಶನಾಲಯ
ಮೇಲೆ ಶಿಖರವ ಪಿಡಿದು ಜ್ಯೋತಿರ್ಲಿಂಗವನು ನೋಡೆ
ಏಳುಜನ್ಮದ ಪಾಪವಳಿವುದು
ಕಾಲಸಂಹರನೊಲಿದು ಸಲಹುವ
ಶೈಲದೊಳು ಪಲತೆರದ ಸಿದ್ಧಿಯ ತಾಣವಿರುತಿಹವು ॥ ೩೪ ॥

ನೆನೆಮೊಡಂ ನೋಡಿದಪೆ ಪೂಜಿಸೆ
ಘನದುರಿತ ರಾಶಿಗಳ ಕಳೆಯುವ
ವಿನುತ ಶ್ರೀಗಿರಿ ಮಲ್ಲಿಕಾರ್ಜುನ ಲಿಂಗದಿಂ ಮತ್ತೆ
ಮುನಿಗಳುಂ ಬೃಂದಾರಕೇಂದ್ರರು
ಮನುದಿನಂ ತಪಮೆಸಗ್ವುರಲ್ಲಿಯೆ
ಗಣವರೇಣ್ಯರ ಮಠಗಳರುವತ್ತಾರುವೊಪ್ಪಿಹವು ॥ ೩೫ ॥

ಇಂತು ಸೊಬಗಂನಾಂತ ಶ್ರೀಗಿರಿ
ಎಂತು ವರ್ಣಿಸೆ ತೀರಲರಿಯದು
ಮುಂತೆ ನಿಬಿಡಾಕಾರಮಾಗಿಹ ವೃಕ್ಷದಟ್ಟಣೆಯೋಳ್
ಪಂಥ ಸಿಗುವದು ಬಹಳೆ ದುರ್ಲಭ
ಶಾಂತಮಲ್ಲನು ತಾನೆ ಪಯ್ಣನು
ಚಿಂತೆ ನಮಗೇಕೆಂದು ಹರುಷದಿ ಶರಣ ಶಿವಲಿಂಗ ॥ ೩೬ ॥

ನಡೆದು ಕಡೆಬಾಗಿಲೆಂಪ ವೀರನ
ಗಢನೆ ಕಾಣುತ ನಂದಿಮುಖಜಲ
ವಡನೆ ಸೇವಿಸಿ ಪೊಸಕೆರೆಯನಂ ದಾಂಟಿ ತತ್ಪಥವ
ಪಿಡಿದು ಭೀಮನಕೊಳ್ಳನಿಳಿಯುತ
ಸಡಗರದ ಕೈಲಾಸ ಬಾಗಿಲ
ದೊಡೆಯ ನಂದಿಯಕಂಡು ಬಟ್ಟೆಯ ಕಾಯ್ವ ಬಸವನನು ॥ ೩೭ ॥

ಸ್ತುತಿಸಿ ಮುಂದಕೆ ಪೋಗಲುಂ ಗಣ
ಪತಿಯಗುಡಿ ವೀರೇಶನಾಲಯ
ವಿತತ ವೈಭವಮಾಗಿ ರಂಜಿಸಲದನು ಕಾಣುತಲಿ
ಮತಿಗೆ ಮಂಗಳವಾಗುತಲ್ಲಿಯೆ
ಹಿತದಿಯೊಂದರ ತಾ ಸುವಿಶ್ರಮ
ಪತಿಕರಿಸಿಕೊಳುತ್ತ ಶಾಂತಿಯನಾಂತು ಶಿವಶರಣ ॥ ೩೮ ॥

ತನ್ನ ಗ್ರಾಮದ ಪರಸಿ ಜನರಂ
ಮನ್ನಿಸುತ ಕರೆದೊಯ್ಯುತಿರಲು
ಛಿನ್ನವಾಯಿತು ಮಾರ್ಗದಟ್ಟಣಿ ಬೆಳೆದ ಬಿದಿರಿನಲಿ
ಚನ್ನಮಲ್ಲನೆ ಬಾರೊ ಗಡ ಬಾ
ರೆನ್ನುತಂ ಕರೆಯುತ್ತ ನಿಲಲಾ
ಸನ್ನುತಾಮಳದೇವನಂ ತರದೊಳಗೆ ಹೊಳೆಯಲ್ಕೆ ॥ ೩೯ ॥

ಅಪ್ಪರಲಿ ಶಿವಲಿಂಗ ಶರಣಸು
ಬಿಟ್ಟು ಜನರಂ ಬೇರೆಯಾಗುತ
ಶ್ರೇಷ್ಠಮನವಾಜಿಯನು ಹತ್ತುತ ನಡೆದ ನಿರ್ಭಯದಿ
ಕೆಟ್ಟೆವೆನುತಿವರವರ ಕಾಣದೆ
ಬಿಟ್ಟು ಬಾಯ್ಕರೆಯುತಲಿಯಳಕುತ
ಲಿಟ್ಟು ಹೆಜ್ಜೆಯ ನಡೆದು ಕಾವಡಿ ಚರರ ಬೆಂಬಲದಿ ॥ ೪೦ ॥

ಬರುತ ಮುಂದಕೆ ಮಲ್ಲಿಕಾರ್ಜುನ
ನಿರುವ ಗೋಪುರಸೇರಿ ಸರ್ವರು
ಬೆರಗುವಡುತಲಿ ಮರಗುತಿರ್ದರು ಶರಣ ಶಿವಲಿಂಗ
ಮರಣವಾದನೊ ಮರಳಿ ಬರನವ
ಪರಸಿ ಪರ್ವತಕೇಕೆ ಬಂದನೊ
ಹರ ಹರಾ ಮಲ್ಲಯ್ಯ ಶರಣರ ತಂದು ತೋರಯ್ಯ ॥ ೪೧ ॥

ಎಂದು ಒರಲುತ ಮಲ್ಲಿಕಾರ್ಜುನ
ಮಂದಿರದಿ ಕಂಗೆಟ್ಟು ಕುಳಿತರು
ನಂದಿವಾಹನ ಶರಣ ಶಿವಲಿಂಗೇಶ ಪರ್ವತದಿ
ಬಂಧನದ ಬಲುವೃಕ್ಷ ಗುಂಪಿನ
ಸಂದಿಗೊಂದಿಯೊಳ್ಸಲಿದು ಮೃಗಗಳ
ಬಂಧನಕ್ಕೊಳಗಾಗದಲೆ ಮೂದಿನದ ಪರಿಯಲ್ಲಿ ॥ ೪೨ ॥

ಅನ್ನ ನೀರಾದಿಗಳ ತೊರೆಯುತ
ಚೆನ್ನ ಮಲ್ಲನ ಗಿರಿಯ ಚರಿಸುತ
ಸನ್ನುತಾಮಳ ಬರಲು ಮುಂದೆಸೆಯೊಂದು ಪಲ್ವಲವ
ಪನ್ನತಿಕೆಯಿಂ ಪರಿಯೆ ಶರಣಸು
ತನ್ನ ಕ್ರೀಯಾದಿಗಳ ತೀರ್ಚಿಪು
ದೆನ್ನುತಲಿ ಸ್ನಾನವನು ಗೈಯ್ಯುತ ಲಿಂಗಪೂಜೆಯನಂ ॥ ೪೩ ॥

ಮಾಡಿ ಮೇಲಕೆ ನೋಡೆ ವೃಕ್ಷದ
ಕೋಡು ತುದಿಗಂ ಕಾಣಿ ವಸ್ತ್ರದ
ಗಾಡ ಬುತ್ತಿಯು ಕಟ್ಟಿರುತ ತೂಗಾಡ್ವದಂ ಕಂಡು
ಮೂಡಿ ಸಂತಸಕೊಳ್ಳಲನುಮಾ
ನ್ಮಾಡೆ ಕೊಳ್ಳಿರಿಯೆಂದು ಧ್ವನಿಯಂ
ಮಾಡಿದಂತಾಗಲ್ಕೆ ಕೇಳುತ ಕೊಂಡ ಬುತ್ತಿಯನಂ ॥ ೪೪ ॥

ಅನಿತರಲಿ ಶಿವ ಶಬರಾಕೃತಿ
ಯನು ಧರಿಸಿ ಮಾರ್ಗವನು ತೋರುತ
ಸನುತ ಶಿವಲಿಂಗನಿಗೆ ತಮ್ಮಯ ಪರಸಿಯಿದ್ದೆಡೆಯ
ಬಿನದಿಸುತ ಕರತರುತಲಾಗಳೆ
ಚಿನುಮಯನು ಗುಪ್ತಾಗಿ ಚರಿಸಿದ
ನನಿಬರೆಲ್ಲರು ಕಂಡು ಶರಣನ ಹಾಡಿ ಹರಸಿದರು ॥ ೪೫ ॥

ದೇವ ಶಿವಲಿಂಗಪ್ಪ ನೀ ನಿಜ
ದೇವನಲ್ಲದೆ ಮನುಜನಲ್ಲವು
ಜೀವ ಮೋಹಿಗಳೆಂತು ದುರ್ಘಟ ಪರ್ವತಂ ಚರಿಸಿ
ಜೀವದಿಂದುಳಿಯುತಲಿ ಬರ್ಪರೆ
ಮೀಪಿವರ ಮನಕತಿಯಗಾಧವು
ನೀವು ಧನ್ಯರು ಮಲ್ಲಿಕಾರ್ಜುನ ಸುತನೆ ಸಹಜವಲಾ ॥ ೪೬ ॥

ಹರುಷಮಿಗೆ ಹರಶರಣರಡಿಗಂ
ಶಿರವ ಬಾಗುತ ಸರ್ವ ಭಕ್ತರು
ಕರಮನದಿ ಕೊಂಡಾಡೆ ಬರಿದೇಕೆನ್ನ ಪೊಗಳುವಿರಿ
ಹರನ ಲೀಲೆಯುಗಾಧವಿಹುದೆಂ
ದೊರೆದನಾಗಳೆ ತನಗೆ ಘಟಿಸಿದ
ಚಿರವೃತ್ತಾಂತವನೆಲ್ಲ ಭಕ್ತರಿಗಾಗ ಶಿವಲಿಂಗ ॥ ೪೭ ॥

ಇನ್ನು ಸಾಗಿರಿ ಸ್ನಾನಗೈಯ್ಯುತ
ಚನ್ನಮಲ್ಲನ ದರುಶನವ ಕೊಂ
ಡುನ್ನತಾ ಚರತೃಪ್ತಿಯನು ಜರುಗಿಸಲುಬೇಕೆಂದು
ತನ್ನ ಪುರ ಭಕ್ತರನು ಕೂಡುತೆ
ಧನ್ಯಳಹ ಪಾತಾಳ ಗಂಗೆಯು
ಸನ್ನಿಧಿಗೆ ಶ್ರೀ ಶರಣ ಶಿವಲಿಂಗೇಶ ಬರಮಾಡಿ ॥ ೪೮ ॥

ಮಣಿಯುತಂ ಗಂಗೆಯನು ಪೂಜಿಸಿ
ಸನುತ ಚರರಿಗೆ ಇತ್ತು ದಕ್ಷಿಣೆ
ಬಿನದಿ ಬಿಸ್ಣವಿತ್ತು ತೀರ್ಥವಗೊಂಡು ಹರುಷದಲಿ
ಕನಕ ಪರ್ವತವಾಸಿ ಮಲ್ಲನ
ನೆನೆದು ದರ್ಶನಗೈಯುತಷ್ಟಾ
ರ್ಚನೆಯು ಷೋಡಶ ತೆರದಿಯುಪಚರಿಸುತಲಿ ಪೂಜಿಸುತೆ ॥ ೪೯ ॥

ನಮಿಸಿ ಮಲ್ಲನೆ ನಿನ್ನ ಮಾಯಾ
ಕ್ರಮವ ದಾಂಟಲುಮಾರಿಗಳವೈ
ಅಮಿತ ಭಕ್ತರನಗಲಿಸೆನ್ನನು ಗಿರಿಯೊಳ್ತಿರುಗಿಸುತ
ಶ್ರಮವ ನೀಯದೆ ಸ್ನಾನಗೈಸುತ ವಿಪ
ವಿಮಲ ಬುತ್ತಿಯು ತೋರಿ ಶಬರೋ
ತ್ತಮನು ಪಾಗುತ ಭಕ್ತರಲಿ ನೀ ತಂದು ಕೂಡಿಸಿದಿ ॥ ೫೦ ॥

ದೇವ ನೀ ಘನದೇವ ನಿನ್ನನು
ಮಾಪ ಬಲ್ಲನುಮವನೆ ಧನ್ಯನು
ಜೀವ ಭಾವವ ವಿರಹಿತನಿಗಂ ನೀನೆ ಕರುಣಾಳು
ಸಾವು ಹುಟ್ಟುವದವನಿಗಿಲ್ಲವು
ಪಾವನಾಂಗನು ನಿನ್ನ ಪದನೊಳು
ಪಾವಿಚಾರವನೇನು ಪೇಳಲಿ ನಿನ್ನ ಕಿಂಕರನು ॥ ೫೧ ॥

ಎಂದು ಘನ ಮನ ಸ್ತುತಿಯಗೈದಾ
ಕಂದುಗೊರಳನ ತಬ್ಬಿ ಮುಂಡಾ
ಡೊಂದನೆಯು ಗೈದಂದು ದೇವಾಗಾರದಿಂ ಪೊರಟು
ಸಂದ ತವಪುರ ಭಕ್ತರನು ಕರ
ತಂದು ತಮ್ಮಯ ಪರಸಿ ತಾಣಕೆ
ಬಂದು ಗಣ ತೃಪ್ತಿಸಲು ಪಾಕವ ಸಿದ್ಧಿಪುದುಮೆನಲು ॥ ೫೨ ॥

ಕೇಳಿ ಸಂಗಡವಿರ್ದ ಭಕ್ತರು
ತಾಳಿ ಸಂತಸವಾಕ್ಷಣಕೆ ಗಣ
ಮೇಳ ಸಂತೃಪ್ತಿಸುವ ಕಾರಣ ಪಾಕ ಪರಿಕರವ
ಮೇಳವಿಸುತಂ ಬರಿಸಿ ಚರತತಿ
ಮೂಲ ಮಲ್ಲಯ್ಯೆಂದು ಶರಣನು
ಲೀಲೆಯಿಂ ತವಕರದಿ ನೀಡುತಲಿರ್ದ ಪ್ರಸಾದ ॥ ೫೩ ॥

ಪಾಲು ಕ್ಷೀರವು ಪಾಯಸವು ಬಿಸಿ
ಹೋಳಿಗೆಯು ಕರಿಗಡಬು ಸಕ್ಕರೆ
ಮೇಲು ಸುರಳಿಯು ಭಕ್ಷಕಾರ್ಚಿಕಾಯಿ ಸರಳಿಗೆಯು
ಗೌಲಿ ಗಾರಿಗೆ ದೋಸೆ ಮಂಡಿಗೆ
ಶೀಲ ಗುರುಚರಮೂರ್ತಿಗಳಿಗತಿ
ಲೀಲೆಯಿಂ ನೀಡುಣಿಸಿ ದಣಿಸಿದ ಪೇಳಲರಿಯದೆನಿಸಿ ॥ ೫೪ ॥

ಗಣರು ತಣಿಸಿದ ಶೇಷಮನದಂ
ಅಣುವಿಗಣು ಕೂಡಿ ಸೊಕ್ಕುದ
ದಣಿಯು ಶಿವಲಿಂಗಾಖ್ಯ ಶರಣನು ತನ್ನ ಭಕುತರನಂ
ನೆನೆದು ಕರದಾ ಘನಪ್ರಸಾದವ
ಮನದಿ ಹಾರೈಸುತಲಿ ಸೇವಿಸಿ
ಕುಣಿಯುತಿರ್ದನು ಮಲ್ಲಿಕಾರ್ಜುನ ಧ್ಯಾನ ಪರನಾಗಿ ॥ ೫೫ ॥

ಮತ್ತೆಯೋರ್ವನು ಧನಿಕ ಶರಣನ
ಹತ್ತರದಿಯಿಳಿದಿರಲು ಪರಸಿಯು
ಮತ್ತ್ಯಧಿಕ ಪ್ರಸ್ತವನು ಮಾಡುತ ಬಂದ ಜಂಗಮಕೆ
ಅರ್ಥಿಯಿಂದುಣ ನೀಡಿ ದಣಿಸಿದ
ಸ್ತೊತ್ತು ಮುಳುಗುವ ಪರಿಯೊಳಂತಂ
ನಾಪ್ತ ಜನರಂ ಕೂಡುತಲ್ಲಿಂ ಭೋಜನಂಗೈದು ॥ ೫೬ ॥

ರಾತ್ರಿಯಾದುದು ಕಂಡು ಪಾಕದ
ಪಾತ್ರೆಗಳನಂ ಬೆಳಗಿ ಕೂಡಿಸಿ
ಪುತ್ರ ಪೌತ್ರಾದಿಗಳ ಸಮೂಹದಿ ಮಲಗಿ ನಿದ್ರಿಸಲು
ನೇತ್ರತ್ರಯನಾ ಮಲ್ಲಿಕಾರ್ಜುನ
ಧಾತ್ರಿ ತಳದಲಿ ತನ್ನ ಶರಣನ
ಕೀರ್ತಿಪಬ್ಬಿಸಲೋಸುಗದಿ ಘನಯಾತ್ರೆ ಜಂಗಮರಂ ॥ ೫೭ ॥

ಕಳುಹಿಕೊಟ್ಟನೊ ಎಂಬ ತೆರದಿಂ
ಸುಳಿಯುತ್ತೊರಟರು ಮಧ್ಯ ರಾತ್ರಿಯು
ತಡವು ಮಾಡದೆ ಧನಿಕನನುಚ್ಚರಿಸಿ ಚರವರರು
ಉಳಿದೆವೈ ನಾವ್ದಶಗಣಂಗಳು
ಬಳಲಿ ಬಂದೆವು ಹಸುವಿನಿಂದಲಿ
ಉಳಿದ ಭೋಜನ ಪಡಿಪದಾರ್ಥಗಳನಿತು ನೀಡುಣಿಸು ॥ ೫೮ ॥

ಹಗಲು ಜರುಗಿದೆ ಗಣಾರಾಧನೆ
ಸಿಗುವದೀಗೆಲ್ಲಿಂದ ಭೋಜನ
ಹಗಲಿನಲಿ ಉಂಡುಳಿದ ಪಾಕವ ನೀಡುತೀರಿಹುದು
ಬಗೆದು ಭಾಂಡವನೋಡೆ ದೊರೆವುದು
ಸಿಗದು ಹುಸಿ ನಾನಾಡೆನೆನುತಲಿ
ಮುಗಿದ ಪಾತ್ರೆಗಳೆಲ್ಲ ಶೋಧಿಸೆ ತಂಡುಲಂನವದು ॥ ೫೯ ॥

ದೊರಕಿತಿನಿತುಣವಿರೋ ಜಂಗಮ
ವರರೆಯೆಂದಾ ಪಾತ್ರೆ ಮುಂದಿಡೆ
ಸರಿಸಿ ಹಿಂದಕೆ ವಲ್ಲೆವಿದನೇನೆನಲು ಹೋಳಿಗೆಯು
ತರಲಿಯಲ್ಲಿಂತೆರಳಿ ಪೋಗಿರಿ
ಸರಿಯೆ ಶಿವಭಕುತರಿಗೆ ಸಲ್ಲದು
ಮಿರುವುದಂ ನೀಡಿದರೆ ವಲ್ಲೆನಲೇನು ಗತಿ ಎನಲು ॥ ೬೦ ॥

ಅನಿತಿದೆಲ್ಲವ ಕೇಳಿ ಶರಣನು
ಧನಿಕರೇ ಚರತತಿಗೆ ಇಲ್ಲೆನ
ಲ್ಮನಸಿಜಾರಿಯು ಭಕ್ತರಿಗೆ ಸನುಮತವೆಯಿಲ್ಲಲ್ಲ
ಘನ ದಯಾನಿಧಿ ನೀವು ಪೇಳ್ವುದು
ಜನಮನಕೆ ಸಮ್ಮತವು ಜಂಗಮ
ಕುಣಿಸೆ ಪಾಪವೆ ಪಾಕವಿಲ್ಲದಕಿಲ್ಲವೆಂದೆನುವೆ ॥ ೬೧ ॥

ಇರಲಿ ವಂದಿನಿತನ್ನವಿಲ್ಲವೆ
ಶರಣರೇಯಿಹುದೊಲ್ಲೆವೆನ್ವರು
ಮರರೆ ಸ್ವಾಮಿಗಳೇಕೆ ಭಕ್ಷವ ನೀಡಲುಣ್ಣುವೆವು
ಬರುದು ಚರರೇ ಕುಳಿತುಕೊಳ್ಳಿರಿ
ಹಿರಿಯ ಶೆಟ್ಟರೆ ಭಯುವ ಬಿಡಿರೀ
ಗಿರಿಯಮಲ್ಲನು ಭಕ್ತಬಾಂಧವನಿರಲು ಮರಿದೇನು ॥ ೬೨ ॥

ಆಡಿ ವಚನವನಾಡೆ ಶರಣನು
ಗಾಢದಿಂ ಗುಡಿಯೊಳಗೆ ಪೋಗುತಲಿ
ಮಾಡಿದೀಗಳೆಯೆನುವ ಬಿಸಿ ಹೋಳಿಗೆಯ ಪುಟ್ಟಿಯನು
ಓಡಿ ತರುತಲಿ ಚರರ ಪಂಕ್ತಿಗೆ
ನೀಡಿ ಮೆರೆದನು ಮಹಿಮಶಿವ ಬಲು
ಕೂಡಿದಾ ಜನರೆಲ್ಲ ಪೊಗಳಲು ಧನ್ಯಧನ್ಯೆನುತಾ ॥ ೬೩ ॥

ಬೆಳಗು ಜಾವದಿ ಶರಣ ಮುಖವಂ
ತೊಳೆದು ಗಡ್ಡದ ಸಿದ್ಧರಾಮನ
ಬಳಿಯಗೂಡುತ ಬಹಿಪ್ರದೇಶಕೆ ಪೋಗೆ ಶಿವಲಿಂಗ
ಎಳಸಿ ಮುಂದಕೆ ಗಮಿಸಲುಂ ಹಿಂ
ದುಳಿದ ಸಿದ್ರಾಮಪ್ಪನಲ್ಲಿಯೇ
ಮಲವಿಸರ್ಜಿಸಲ್ಕೊಡೆ ವ್ಯಾಘ್ರವು ಬಂದು ಎದುರಾಂತು ॥ ೬೪ ॥

ಸಿಲಲು ಹಲಬುತ ಮಲಲ ಶರಣರೆ
ಹುಲಿಯು ಬಂತೈ ಕೊಲುವವೆನ್ನ
ನ್ನುಳಿಸು ಬಂದೀಗಲಸದಲೆ ಮಲಮಲನೆ ಮರಗುವೆನ್ನೈ
ಕಲುಷರಹಿತನೆ ಕಾಯೊ ಕಾಯೆ
ದ್ಬೊಲಬುತಪ್ಪುತ ಬಲವಗುಂದುತ
ಬಲ ಎಡದ ಕರಬೊಬ್ಬಿ ಬಾರಿಸೆ ಮರುಳಿ ಶಿವಶರಣ ॥ ೬೫ ॥

ನೋಡಿ ಹಿಂದಕೆಯೋಡಿ ಬರೆ ಘನ
ಕಾಡ ಪುಲಿಯಂ ಕಂಡು ಮುಗುಳ್ನಗೆ
ಗೂಡಿ ಮೈಯ್ಯಂ ತೀಡಿ ಥಪ್ಪರಿಸುತಲಿ ಮೃಗದೊಡೆಯ
ನೋಡಲಿವನಮ್ಮವನು ಎಂದಂ
ದಾಡಿ ಗಹಗಹಿಸಲ್ಕೆ ವ್ಯಾಘ್ರವು
ಮಾಡಿ ಮುಖಂ ಕೆಳಗೆ ಸಾಗಿತು ಗಿರಿಯೊಳಸಿತಕ್ಕೆ ॥ ೬೬ ॥

ಅಂಜಿದೇನ್ನೈ ಸಿದ್ಧರಾಮಾ
ಕೆಂಜೆಡೆಯ ಮಲ್ಲ.ಯ್ಯನೇ ತಾ
ನುಜಿಸುವ ಡಿಂಭವನು ಧರಿಸುತ ರಂಜಿಸುವನಲ್ತೆ
ಕಂಜ ಜಾಂಡದಿ ಚರಿಪ ವಿಶ್ವವು
ನಂಜುಗೊರಳನ ರೂಪವೆಂದೇ
ಸಂಜೆನಿಸಬೇಕಲ್ಲದಲೆ ಹಿಂಜರಿಯಲಾಗದಲಾ ॥ ೬೭ ॥

ನಿನ್ನ ಶಾಂತಿಯೆ ಸೌಮ್ಯ ರೂಪವು
ನಿನ್ನ ಭ್ರಾಂತಿಯೆ ತಾನೆ ವೈರಿಯು
ನಿನ್ನ ಭಾವವು ಭ್ರಾಂತಿ ಮುಕುರದಿ ಮೂಡಿ ಎದುರಾಯ್ತು
ತನ್ನೊಳಿರುಹಿರಿ ಭ್ರಾಂತಿ ಪುಲಿಯಂ
ಮನ್ನಿಸುತ ತಾ ತಡೆದನಾದರೆ
ಭಿನ್ನ ವ್ಯಾಘ್ರನ ಮತ್ತೆ ಬಹಿರದಿ ಕಾಣ್ವನವನೆಲ್ಲಿ ॥ ೬೮ ॥

ಎಂದು ಬೋಧಿಸಿ ಸಿದ್ಧರಾಮನ
ಹೊಂದಿ ಶ್ರೀ ಗಿರಿ ಮಲ್ಲಿನಾಥನ
ಮಂದಿರಕೆ ಬಂದಂದು ತಮ್ಮಯ ಕ್ರೀಯ ಕರ್ಮಗಳ
ಚೆಂದದಿಂ ಗೈಯ್ಯುತ್ತಲಂದಿನ
ಸಂದ ಗಣತೃಪ್ತಿಯನು ಜರುಗಿಸಿ
ಬಂದ ಪುಲಿ ಕಥನವನು ಪೇಳುತ ಗಿರಿಯ ಸ್ಥಲ ಮಹಿಮೆ ॥ ೭೯ ॥

ನೋಡಬನ್ನಿರಿ ಎಂದು ಪಡುವಣ
ನಾಡೆ ಭ್ರಮರಾಂಬೆಯನು ದರ್ಶಿಸಿ
ಕಾಡಿ ಮಲ್ಲನು ಸಿದ್ಧರಾಮನ ಪೊರೆದ ಕಮ್ಮರಿಯ
ಮೂಡಿದ್ದೆಜ್ಜೆಯನೆಯುನ ಗುಂಡವ
ನೋಡಿ ಲಿಂಗದ ನದಿಯದಂ ಸುಖ
ದೀಡು ಪಾತಾಳ್ಗಂಗೆ ಕೂಡಿದ ಪಾಪನಾಶಿನಿಯ ॥ ೭೦ ॥

ಮುಂದೆ ಕದಳಿಯ ಬನ್ನ ಬಿಲ್ವದ
ಚಂದವನಮಂ ಬಸವ ಸರೋವರ
ದಿಂದ ಮಹಿಮೆಯ ನೆಲೆಗಳಂ ಮಹಸಿದ್ಧರ ಸಕೂಪ
ಚಂದ್ರಗುಪ್ತನ ಸದನ ಪರಮಾ
ನಂದ ಮೂರ್ತಿಯು ಹಾಟಕೇಶ್ವರ
ನಿಂದ ಪರತರ ಪಾಲು ಧಾರೆಯು ಪಂಚಧಾರೆಗಳು ॥ ೭೧ ॥

ಶುಭದ ಶಿಖರೇಶ್ವರನ ಶಿಖರದ
ಸೊಬಗನೀಕ್ಷಿಸಿ ಜ್ಯೋತಿರ್ಲಿಂಗದ
ಪ್ರಭೆಯ ಕೂಡಲು ಸಪ್ತಜನ್ಮದ ಪಾಪವಡಗುವುದು
ಪ್ರಭುಚರಾರ್ಯರುಮಕ್ಕಗಳು ಮೀ
ವಿಭವ ತಾಣದಿ ಗೌಪ್ಯವಾದರು
ಮಭವ ಶ್ರೀಗುರುಮಲ್ಲಿನಾಥನ ಮಹಿಮೆಯುಸದಳವು ॥ ೭೨ ॥

ಹಾಡಿಹರಸುತ ನೋಡಿ ಶ್ರೀಗಿರಿ
ಗಾಡ ಪರಸಿಯ ತಾಣಕವರಂ
ಗೂಡಿಸುತ ವಿಭೂತಿ ಮಠಕಂ ಬಂದು ಶಿವಲಿಂಗ
ಪಾಡುತೊಚನವ ಕುಳಿತನಲ್ಲಿಯೆ
ನಾಡೆ ಭಕ್ತರು ಕರೆಯಲವ ಬರ
ಮಾಡದಿರೆ ಘುತ್ತರಿಗಿ ಹಿರಿಯನು ಶರಣರಡಿಗೆರಗಿ ॥ ೭೩ ॥

ಶರಣಸ್ಥಲದಾಚರಣೆ ನಿಮ್ಮದು
ಮರೆತು ವಿಭೂತಿ ಮಠದಿ ಕುಳಿತರೆ
ಚರರಗತಿಯೇನ್ದಿಂದೆ ಹಿಪ್ಪರಗಿಯೊಳು ಸ್ಥಲವಿಲ್ಲೆ
ಹರನು ಜಗ ಸರ್ವದಲಿ ವ್ಯಾಪಕ
ನಿರುವನೆನಲಲ್ಲಿಲ್ಲವೇ ಶಿವ
ಶರಣ ಶಿವಲಿಂಗಾರ್ಯನೆನುತಂ ಕರವ ಮುಗಿಯಲ್ಕೆ ॥ ೭೪ ॥

ಭರದಿ ಹಿರೆ ಶಿವಲಿಂಗನೊಚನವ
ನರಿದು ಬೆನ್ನಟ್ಟುತಲಿ ಶರಣರು
ಪರಸಿಯನು ಕೂಡುತಲಿ ಸರ್ವರಿಗೊಂಡು ಪೊರಗೊದ್ದರಟು
ಬರುತ ಮಾರ್ಗದಿ ಸರ್ವಗಿರಿ ವಿ
ಸ್ತರವ ಪೇಳ್ದನಿತೆಲ್ಲ ತೋರಿಸು
ತಿರುವ ಪ್ರಾಣಿಂಗಳನು ದಾಟುತ ತಮ್ಮ ಪುರಕಾಗ ॥ ೭೫ ॥

ಬಂದುತಲ್ಪಲು ಗ್ರಾಮಭಕ್ತರು
ನಂದಿವಾಹನ ಶರಣ ಶ್ರೀಗಿರಿ
ಯಂದ ಯಾತ್ರೆಗೈದು ಬಂದನೆನುತ್ತ ಸಂಭ್ರಮದಿ
ಚೆಂದ ವಾದ್ಯಗಳಬ್ಬರದಿಯೆದು
ರ್ಬಂದು ದರ್ಶಿಸಿ ನಮಿಸಿ ಮೆರವಣಿ
ಯಿಂದ ಕರೆತಂದುದನು ಪೇಳಲು ಮನಕೆಯರಿದಾಯ್ತು ॥ ೭೬ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ದಶಮ ಸಂಧಿಯಿದು ॥ ೭೭ ॥

ಅಂತು ಸಂಧಿ ೧೦ಕ್ಕಂ ಪದನು ೮೬೦ಕ್ಕಂ ಮಂಗಲಮಹಾ ಶ್ರೀ ಶ್ರೀ

## ಸಂಧಿ ೧೧

ಮಲ್ಲಿನಾಥನ ಕಳುಹಿಕೆಯು ಗೈ
ವಲ್ಲಿ ಪ್ರಸ್ಥವ ಮಾಡಲುದಿನ
ವಲ್ಲಮಾಪುರ ಸಾಧುವಿನ ಮಹತ್ವವನು ತೋರಿಸಿದ ॥ ಪಲ್ಲ ॥

ಹರಿಗೆ ಗರುಡನುಮಜಗೆ ಹಂಸೆಯು
ಸುರಪಗೈರಾವತವು ಚಂದ್ರಂ
ಗೆರಳೆಯನು ಸೂರ್ಯಗೆ ರಥವನು ಧನಪಗಶ್ವವನು
ಕರುಣದಿಂದಿತ್ತಾರುವಲ್ಲದ
ಜರಠ ಬಲು ಮುದಿಯೆತ್ತು ತನಗೆಂ
ದಿರಿಸಿ ಕೊಂಡಿಹ ಶಿವಪುರಾಧೀಶ್ವರನೆ ಶಿವಲಿಂಗ ॥ ೧ ॥

ಪರ್ವತೇಶನ ಯಾತ್ರೆ ಮುಗಿಸುತ
ಶರ್ವ ಶರಣನು ಮರಳಿ ತನ್ನಯ
ಪೂರ್ವ ಸ್ಥಳಕಂ ಬಂದು ಮಾತೆಗೆ ನಮಿಸಿ ಶ್ರೀಗಿರಿಯ
ಸರ್ವ ಸವಿಸ್ತಾರೆಲ್ಲ ಸೂಚಿಸಿ
ಸರ್ವತೋಮುಖ ಮಲ್ಲಿಕಾರ್ಜುನ
ಸರ್ವ ಮಂಗಲೆ ದೇವಿ ಭ್ರಮರಾಂಬೆಯಳ ಕಳುಹಿಕೆಯ ॥ ೨ ॥

ಪಾಕ ಪರಿ ಕರವರ ಪದಾರ್ಥಗ
ಳೇಕಗೂಡಿಸುತೇಕ ಮನದಿಂ
ಸೌಖ್ಯ ಚರಗಣ ತೃಪ್ತಿಯನು ಜರುಗಿಸಲು ಬಾಣಸವ
ಆ ಕ್ಷಣದಿ ಗೈಯಲ್ಕೆ ಭಾಂಡವ
ನೇಕ ನೆರಹುತ ಭಕ್ತ ಮಂಡಳಿ
ಶಾಕ ರುಚಿಕರ ಪಾಯಸನ್ನವ ಬೇಳೆ ಸಾರುಗಳ ॥ ೩ ॥

ಸಿದ್ಧಿಸಲು ಬಲು ನಿಪುಣನಿಹ ನಾ
ಬುದ್ಧಿವಂತನು ಜವಳಕೋಟೆಯು
ಮುದ್ದು ಮಲ್ಕಣ್ಣೆಂಬುವನ ನೇಮಿಸಲು ಪಾಕವನು
ಸಿದ್ಧಗೈಯ್ಯುತ ಪಾಯಸಕೆ ಸ
ಮೃದ್ಧಿ ಗುಡವನು ಪಾಕುತಿರಲಾ
ಸಿದ್ಧನಲ್ಲಾಪುರದ ಸಾಧು ಶಿವಪ್ಪನೆಂಬವನು ॥ ೪ ॥

ಬರಲು ಬಾಣಸಗೈವ ಮಲ್ಕನು
ಕರದಿ ಸಟ್ಟುಗೆ ಪಿಡಿದು ನಿಂತಿರೆ
ಕರಕರನೆ ಪಲ್ಕಟಿದು ಎಲೆ ನೀ ಸಾಧುವಿಲ್ಲೇಕೆ
ಕರೆದರಾರಿಲ್ಲಿನ್ನಗೆ ಬರಲಿಕೆ
ದೊರೆಯಲಿಲ್ಲೇನೆಲ್ಲಿ ಅನ್ನವ
ಮರುಳ ನಪೆ ಜವಕರದೊಳಿಹ ಸಟ್ಟುಗೆಯ ನೋಡಿದೆಯಾ ॥ ೫ ॥

ಎನಲು ಸಾಧುವು ನಕ್ಕು ಶರಣರ
ಮನೆಯ ಬಾಣಸ ಭಾಗಿಗಳು ನಾ
ವಣಕವಾಡಲಿಬೇಡ ನಮ್ಮನು ಕೆಣಕಿ ಮಲ್ಕಣ್ಣ
ತಿನಲು ಸಾಧುಗಳಲ್ಲದೇ ಮೇ
ಣ್ಮಣೆಯು ದುಡಿಯುವರಲ್ಲವೈ ನಿಜ
ಹಣದಕಿಂತಲು ಕಡಿಮೆ ಜನ್ಮವು ಬಾಳ್ವೆಯೇತರದು ॥ ೬ ॥

ಹೊಲಸು ಕೇರಿಯೊಳ್ಮಡಿವ ದನಗಳ
ಪಲವಂ ಕಂಡ್ಪದ್ದುಯೆರಗಿದ
ವೊಲು ನಮ್ಮ ಶಿವಶರಣರರಮನೆ ಪ್ರಸ್ತವಂ ಕಂಡು
ಗಳಗಳನೆ ಬಂದೀಗ ನೆರವಿಲಿ
ಕೆಲಸವೇನಿ. ದುಡಿಯಬಹ ದು
ರ್ಬಲರು ಹೇಡಿಗಳ್ನೀವು ಸುಮ್ಮನೆ ಕೂಳು ತಿನ್ನುವಿರಿ ॥ ೭ ॥

ಸತ್ವವೇನಿದೆ ನಿಮ್ಮೊಳ್ಮುಸುರಿಗೆ
ಮುತ್ತುವದೊಂದೆ ಕಲಿತುಮಿಲ್ಲಿಗೆ
ಸತ್ವರಂ ಬಂದಾಗ ನೀನಿಂತಿರುವಿ ಯಲ ಸಾಧು
ಸತ್ಯ ಮಹತಿಕನಾದರೀ ಕುದಿ
ಯುತ್ತಲಿಹ ಪಾಯಸದಿ ಗುಡಬೆರೆ
ಸುತ್ತ ಕೈಯ್ಯಿಂ ಕೂಡಿಸಲು ಘನಸತ್ವ ಶಾಲಿಯು ನೀ ॥ ೮ ॥

ಎನುವ ನುಡಿಗೇಳುತಲಿ ಸಾಧುವು
ಮನದಿ ಕಳವಳಿಸಾಗ ಮಲ್ಕನೆ
ನಿನಗೆ ತಿಳಿಯದು ಸಾಧು ಜನಗಳ ಮಹಿಮೆ ಕೆಡುಬೇಡಾ
ಚಿನುಮಯರು ಮವರಂತ ಬಹಿರವ
ತನಗೆ ತಿಳಿಯದೆ ಬಿಜ್ಜಳೇಂದ್ರನು
ಮನಲ ಪರಿ ಸುಡುಪಾಯಸವ ರೇವಣನ ಕರತಳದಿ ॥ ೯ ॥

ಸಟ್ಟುಗೆಯದಿಂ ನೀಡೆ ಮಹಿಮಿಳಿ
ಬಿಟ್ಟ ಮುಖದೊಳಗದನು ಕರತಳ
ಮುಟ್ಟಿ ಕಂಭಕೆಯೊರೆಸೆ ಛಿಣಿ ಛಿಟಿಲೆಂದು ಪೇರುರಿಯು
ಪುಟ್ಟಿ ನೃಪನರಮನೆಯು ಸರ್ವವು
ಸುಟ್ಟು ಪೋಯಿತೆ ಮರುಳೆ ಕೇಳೀ
ಸೃಷ್ಟಿಯೊಳು ಶಿವ ಸಾಧುವೇಷದಿ ಚರಿಪ ನಿನಗರಿದು ॥ ೧೦ ॥

ಇಂಥ ಕೊಳಿನ ಸಾಧು ಜನಗಳ
ನಂತರಂ ಕಂಡಿಹೆನು ಬಿಡು ಬಿಡು
ಮೆಂತೆನಲು ಕಡುಗಾಯ್ದು ಕೋಪ ಜ್ವಾಲೆಪೊರಚಾಚಿ
ಪಂಥ ಬೇಡ್ಮಲಕಣ್ಣ ತಿಳಿ ನಿ
ಮ್ಮಂಥ ಸಾಧುಗಳ್ಹಲವನೋಡಿಹೆ
ಮುಂತೆ ಪಾಯಸ ಪಾತ್ರೆಯೊಳು ಕರತಿರುಹ ನೋಡನು ವಾ ॥ ೧೧ ॥

ಕಣ್ಣು ಕೆಂಪಗೆ ಮಾಡಿ ಯಲೋ ಮ
ಲ್ಕಣ್ಣ ಸಾಧುಗಳನ್ನು ಕೆಣಕುತ
ಬಣ್ಣಗೆಡದಿರು ಮರುಳೆ ಮಣ್ಣನು ಮೇಲಕೊಗೆಯುತಲಿ
ಕಣ್ಣು ಕಳಚಿಸಿ ನೋಡಲಾ ಮ
ಣ್ಕಣ್ಣೊಳಗೆ ಬೀಳಲ್ಕೆ ನೋವಂ
ನುಣ್ಣುವನ ಪರಿಯಂತೆ ನಿನ್ನಯ ಪಂಥವಳಿತಲ್ಲ ॥ ೧೨ ॥

ಅಹುದು ನಿಮ್ಮಂಥವರು ಜಗದಲಿ
ಬಹುಪಾಪಿ ಸಾಧುಗಳ ನಾ ಕಂ
ಡಿಹೆನು ಕೈಲಾಗದಲೆ ನುಡಿಯುವ ಕೂಳ ಬಕ್ಕರನಾ
ವಿಹಿತವಿದು ಸರಿಯಲ್ಲವಾದರೆ
ಕುಹಕವೆನಗೇಂಗೈಯ್ವಿ ನೀನೆನೆ
ಮಹಿಮ ಸಾಧು ಶಿವಪ್ಪ ಕಡುರೋಷವಲಿ ಕುಣಿದೆದ್ದು ॥ ೧೩ ॥

ಚೀರಿ ಚಟ್ಟನೆ ಹಾರಿ ಮೇಲಕೆ
ಯೂರಿ ಮೊಣಕಾಲೇರಿಸುತ ತೋ
ಳ್ಸಾರಿ ಪಾಯಸ ಮೀರಿ ಕುದಿಯುವ ಪಾತ್ರೆ ಬಳಿ ಬಂದು
ವೀರತನವಿದೆ ವೀರಶೈವದ
ದಾರಿನಿಂದಕ ಧೂರ್ತರಿಗೆ ಛೀ
ಮಾರಿಯೆನಿಸುವ ಬಿರುದು ಸಹಜಂದೇರುತತಿ ರೌದ್ರ ॥ ೧೪ ॥

ಸುರಿದು ಕರವಂ ಬಾಂಡದಿ
ಗರಗರನೆ ತಿರುವುತಲಿ ಗುಡವಂ
ವೆರಸಿ ಬೇಳೆಯ ಕರವೆ ಸಟ್ಟುಗೆಯಾಗಿ ಮುಗುಚುತಲಿ
ಬುರುಗು ಬಂದತಿಯುಕ್ಕ ಬೋನದಿ
ಕರವ ತಿವಿಯುತ ಕಿವುಚಿಯುಗುಳವ
ಭರದಿ ಕುದಿಯುವ ಸಾರಿನೊಳು ಕರತಿರುವುತಾರ್ಭಟಿಸಿ ॥ ೧೫ ॥

ವೀರ ಕೋಳಾಹಳದಿ ಸಾಧುವು
ಚೀರಿ ಭುಜ ತೊಡೆಗಳನು ಛಪ್ಪಿಸಿ
ಬಾರಿಬಾರಿಗೆ ಎಲವೊ ಮಲ್ಯಾಕ್ಯ ಸತ್ಯಾನಾಶಾಗು
ಮೀರಿ ಕುಣಿಯುತ್ತಿರಲು ಭಕ್ತರ
ಪಾರ ನೆರೆಯುತಗಾರುಗೊಳ್ಳುತ
ಧೀರ ಸಾಧುಶಿವಪ್ಪ ಹಿಡಿಯಲು ಮಾಂಗಳವಡದು ॥ ೧೬ ॥

ಅನಿತರಲಿ ಶರಣಾಗ್ರಗಣ್ಯನು
ಮನದಿ ಕಡುನೊಂದೋಡಿ ಬರುತಲಿ
ಘನದಯಾನಿಧಿ ಸಾಧು ಪದ ಸನ್ನಿಧಿಯೊಳ್ಪೊರಳಾಡಿ
ಸನುತಿಸುತ್ತ ಸನ್ಮಾನಿಸುತಲಿರೆ
ಕನಲಿ ಮೇಣ್ಮೆದಲಂತೆ ಶಾಪಿಸೆ
ಕನಿಕರದಿ ಕರದೆಲವೊ ಕೆಡಿಸಿದಿ ಬೇಡು ನಿಃಶಾಪ ॥ ೧೭ ॥

ಎಂದು ಶರಣರು ತಮ್ಮ ಪೆಗಲಲಿ
ತಂದೆ ಸಾಧು ಶಿವಪ್ಪನನು ಹೊ
ತ್ತಂದು ತಮ್ಮಯ ಲಿಂಗಪೂಜೆಯು ಕೋಣೆಯೊಳು ಕರವ
ಅಂದವಾಗಿಯೆ ತೊಳೆದು ನೋಡಲು
ಮುಂದಿನಂತಿರೆ ಮಲಗಿಸೆವರನು
ಬಂದ ಜಂಗಮ ಕುಣಿಸುತಿರಲಾಗಿತ್ತ ಸಾಧುವನು ॥ ೧೮ ॥

ಮಲಗಿದಲೆ ಯಲಲೆಂದು ಚೀರುತ
ಎಲವೊ ಮಲ್ಕ್ಯಾ ನೋಡು ಸಾಧುಗ
ಳ್ಬಲು ಪರಾಕ್ರಮವಿದನುಮೆಂತೆಂದೊದರಿ ಕ್ಷಣಕ್ಷಣಕೆ
ಕಲಿ ಮಹಾ ಶ್ರೀ ವೀರಭದ್ರನು
ಬಲಿದ ಯಜ್ಞವನ್ನಾಳುಗೈಯ್ಯುತ
ಗೆಲಿದು ದಕ್ಷನ ಶಿರವ ತುಂಡಿಸಿ ಸುರರ ಸದೆ ಬಡಿದು ॥ ೧೯ ॥

ಬಾರಿ ಬಾರಿಗೆ ಎಲವೊ ದಕ್ಷಾ
ಮೀರಿ ಕೆಟ್ಟಿಯೊ ಮೂಢ ದಕ್ಷಾ
ತೋರು ಶೌರ್ಯವನೆನುವ ವೀರನ ತೆರದಿ ಸಾಧುವನು
ವೀರ ಕೋಳಾಹಳದಿ ಮೈಲ್ಕ್ಯಾ
ಸೇರು ನರಕವನೆಂದು ಕ್ಷಣ ಕ್ಷಣ
ಚೀರೆಯವನಂ ಶರಣರಾಗಳೆ ಸಾಧು ಸನ್ನಿಧಿಗೆ ॥ ೨೦ ॥

ತಂದು ಶರಣಾಗತವಗೈಸ
ಲ್ಕಂದು ಮಲ್ಕನ ಕಂಡು ಸಾಧುಂ
ನಿಂದಕನೆ ನಿನ್ನೀಗ ಸುಡುತಂ ಬೂದಿಗೆಯ್ಯುವೆನು
ಎಂದು ನುಡಿಯುತ್ತಿರಲು ಶರಣರು
ನೊಂದು ಪರಚಿಂತೆಯಲಿ ಕಳಿಕಳಿ
ಯಿಂದಲವರಡಿ ವಿಡಿದು ಬೇಡಲು ಶಾಂತಿಯಂ ವಹಿಸಿ ॥ ೨೧ ॥

ಶರಣ ಶಿವಲಿಂಗೇಶ ನಿನ್ನಯ
ಕರುಣ ಗುಣದಿಂದವಗೆ ಕರುಣದಿ
ಪೊರೆವುದಾದರು ಮರಣದವಸ್ತೆಯದಿ ಶರೀರದಲಿ
ಗುರುಳಿ ಏಳುತ ಸುಟ್ಟ ಪರಿಯಲಿ
ಭರದಿ ತೋರ್ಪುದು ತಪ್ಪಲರಿದೀ
ಕುರುಹುಮಿವನೊಂಶಜರಿಗೀ ಪೀಡೆಯದು ಬಿಡದೆಂದು ॥ ೨೨ ॥

ನುಡಿಯಲಾ ಶಿವಲಿಂಗ ಶರಣನು
ಬಿಡದೆ ಬಲು ಪರಿ ಬೇಡಿಕೊಳ್ಳಲು
ಬಿಡದುಮಿವನಿಗೆ ಬಿಟ್ಟ ಬಾಣವು ತಗಲದಿರದೆಂದು
ನುಡಿವೆ ನಿನ್ನೊಂದಾದರಾಗಲಿ
ಘಡನೆ ಮುಂದಿನ್ನಿವನ ವಂಶಕೆ
ಕೆಡಕು ಬಾರದ ತೆರದಿಯಾ ಶಿವ ಕರುಣಗೈಯ್ಯುವನು ॥ ೨೩ ॥

ಹೀಗೆ ನುಡಿಯಲ್ಕಾಗ ಭಕ್ತರ
ಪೂಗವತಿ ಕೊಂಡಾಡುತಾ ಶಿವ
ಯೋಗಿ ಶರಣನು ಬೇಗನೇಳುತ ಮಲ್ಲಿಕಾರ್ಜುನನ
ಸಾಗಿಸಲ್ಕಾಮೋಘ ಪಾಕಂ
ರಾಗದಿಂ ಗೈದದನು ಸರ್ವರ
ಕೂಗಿ ಬರಿಸುತ ತೃಪ್ತಿಸಲು ಕೊಂಡಾಡೆ ಸರ್ವಜನ ॥ ೨೪ ॥

ಸಾಧು ಮಹಿಮೆಯ ಶೋಧಿಸಲು ಜಗ
ದಾದಿ ಭಾರವ ಪೊತ್ತ ಶೇಷಗೆ
ವೇದ್ಯವಾಗದು ಎಂದು ಶರಣರು ನೆರೆದ ಭಕುತರಿಗೆ
ಬೋಧಿಸುತ ತನ್ನಾಪ್ತರೆನಿಪಾ
ಸಾಧು ಶರಣರ ಸಂಗದಲಿ ಸತ
ತಾ ದಯಾನಿಧಿ ವರ್ತಿಸುತ ಸುಖವಿರ್ದನನವರತಂ ॥ ೨೫ ॥

ಇಂದಿಗಾದರುಮವರ ಗೃಹದಲಿ
ಕಂದ ಮೊದಲಾವರ್ಗೆ ಗುರುಳಿಯು
ಪೊಂದುತೇಳುವ ಕುರುಹುತೋರ್ಪುದು ಸಂತ ಜನ ಶಾಪ
ಎಂದಿಗಿದು ಮಸಿಯಾಗಲಾರದು
ನಿಂದಕರಿಗಿದು ಸತ್ಯಸತ್ಯವ
ದೆಂದು ತಿಳಿಯುತ ಜಾಣನೆನಸಿದಗುಂಟು ಪರಸುಖವಾ ॥ ೨೬ ॥

ತನ್ನ ಕಾಯಕವಗೈದು ನಿತ್ಯದಿ
ಸನ್ನುತಾಮಳ ಲಿಂಗವರ್ಚಿಸು
ತುನ್ನತೋನ್ನತಮಾದ ಲಿಂಗಾಂಗೈಕ್ಯದವಿರಳದ
ಚೆನ್ನ ಷಟುಸ್ಥಲ ಜ್ಞಾನಮಾರ್ಗವು
ಸನ್ನಿಯಿಂದೆನಗೆಂದು ಕರತಳ
ವೆನ್ನಿಸುತ ಗುರುಕಾಯ್ವನೋ ಎಂಬತಿ ಕುತೂಹಲದಿ ॥ ೨೭ ॥

ಬಯಸುತಿರ್ದನು ಪೂರ್ವದೊಳು ದೀ
ಕ್ಷೆಯವನಷ್ಟಾವರಣ ನೀತೀ
ಕ್ರಿಯವ ಪಂಚಾಚಾರಗಳ ಪೇಳುತಲಿ ಚರಭಕ್ತಿ
ನಯದಿ ಜರುಗಿಸೆ ಜೀವ ಶಿವನೊಳು
ಲಯವಗೈಪುದಕಾ ಷಟುಸ್ಥಲ
ಜಯ ಸುಮಾರ್ಗವ ಮುಂದೆ ಬೋಧಿಪೆನೆಂಬ ಸದ್ಗುರುವು ॥ ೨೮ ॥

ಆವಗಂ ಬಂದಂಗಮನ ಘನ
ತ್ರೀವಿಧವ ತಾಕೊಂಡು ಪ್ರೇಮದಿ
ಜೀವ ಶಿವರೇಕತ್ವವೆನಿಪಾ ನಿಷ್ಪಲಾನಂದ
ತೀವಿ ಸಮರಸವಾಗ್ಸ ಪರಿಯನು
ಕೇವಲಂ ಲಿಂಗಾಂಗದೈಕ್ಯತೆ
ದೇವ ಸೃಜಸೆಂದನುತೆನಿಸಿ ದಿನ ಧ್ಯಾನಿಸುತ್ತಿರಲು ॥ ೨೯ ॥

ಒಂದು ದಿನ ಶಿವಲಿಂಗ ಶರಣನು
ಎಂದಿನಂತೆಯು ತನ್ನ ಕ್ರಿಯವಾ
ನಂದದಿಂ ಜರುಗಿಸುತೆ ರಾತ್ರಿಯೊಳ್ನಿನೆದು ಪವಡಿಸಲು
ಬಂದನಾ ಸ್ವಪ್ನದಲಿ ಚಾಂಗ್ಲೆರಿ
ಚಂದ ಗುರುಲಿಂಗಾಖ್ಯ ಸ್ವಾಮಿಗ
ಳೆಂದರೆಲೆ ಶಿವಲಿಂಗ ನಿನ್ನಯ ಮನದಬಿಷ್ಟವನಂ ॥ ೩೦ ॥

ಕೊಡಲು ಕಾಮನ ಹಳ್ಳಿ ಸಿದ್ದ
ಯ್ಯೊಡಿಯನಿಹ ಬೆಟ್ಟದಲಿ ಬರುತಾಂ
ಮಡುಗಿಕೊಂಡಿಹೆ ಬೇಗದಲಿ ನೀ ನಡೆದು ಬಾಯೆನುತೆ
ಬಿಡದೆ ನುಡಿಯುತಲೊಡನೆ ಎಚ್ಚರಿ
ಸಡಗಿ ಪೋಗಲು ಎದ್ದು ಕುಳಿತಾ
ಮೃಡ ಶರಣ ಶಿವಲಿಂಗ ತನ್ನೊಳು ತಿಳಿದು ಬೆಳಗಿನಲಿ ॥ ೩೧ ॥

ಶುದ್ಧ ಭಾವದ ಶರಣ ಪೋಗಲು
ಸಿದ್ಧನಾಗುತ ನಿಲಲಿಕಾಪುರ
ದಿದ್ದ ಭಕ್ತರು ಬುದ್ಧಿವಂತರು ಬರಲುಮಿವರೆಡಿಗೆ
ಹೊದ್ದಿ ನಮಿಸುತ ನೋಡಿ ಶಿವಶರ
ಣಾದ್ಯರೆಲ್ಲಿಗೆ ಪಯಣ ಸ್ವಪ್ನದ
ಸುದ್ದಿಯನುಮವರೊಡನೆಯುಸರುತ ಕುಳಿತನನಿತರಲಿ ॥ ೩೨ ॥

ಭ್ರಮರವದು ಕೀಟವನು ಪುಡುಕುತ್
ಶ್ರಮದಿ ತಾ ಸಂಚರಿಪುದಲ್ಲದೆ
ತಮದೊಳಿರುತಿಹ ಕೀಡಿಯಾ ಕುಂಡಲಿಯನರಸುವದೇ
ವಿಮಲ ಮನ ಮಾತ್ರದರೋಳ್ ಜನಿಸಲು
ಭ್ರುಮರ ಪೊತ್ತೊಯ್ಯುತಲಿ ತನ್ನಯ
ಕ್ರಮವ ಗೈಯ್ಯುವ ನ್ಯಾಯದಂದವ ಸಿದ್ಧಿಸುತ ಮತ್ತೆ ॥ ೩೩ ॥

ಧೇನು ಕಾನನದಿರ್ದುವತ್ಸಗೆ
ಪಾನಿಸಲು ಸ್ತನವೋಡಿ ಹೂಂಕರಿ
ಸಾನಿಯುಮದಲಿ ತನ್ನ ಕರುವಿದ್ದೆಡೆಗೆ ಬಹದೆಂಬ
ಸುನೀತಿಯಿರಲು ತಾಯಿ ತಾಣಕೆ
ತಾನು ಪೋಗದೆಯೆಂಬೆ ಆಂಬೆಂ
ದಾನೆನಹು ಮಾತ್ರದಕೆ ಸಹಜವು ಎಂದು ಗುರುಲಿಂಗ ॥ ೩೪ ॥

ಸ್ವಾಮಿ ತಾನೇ ಪ್ರೇಮದ್ಹೊರಡುತ
ಲಾ ಮಹಾಗಿರಿ ಸೀಮೆ ದಾಟುತ
ಯಾಮ ವಂದರ್ಧದಲಿ ನೇಮದಿ ಶರಣರ ಮನೆಗೆ
ಸೌಮ್ಯ ಭಾವದಿಯಾಗ ಮನ ಗ್ಯೆ
ದಾ ಮಹಿಮರಂ ಕಂಡು ತನ್ನಯ
ಧಾಮಕಂ ಪ್ರತಿನಿತ್ಯ ಸಂತರು ಬರುತಲಿರಲಿವರಂ ॥ ೩೫ ॥

ಸಾಧುಮೆಂದೇ ಮನದಿ ಭಾವಿಸಿ
ಮೋದದಿಂ ಕುಳಿತಲ್ಲೆ ಕರೆಯು
ಲ್ಕಾ ದಯಾಂಬುಧಿ ನಕ್ಕು ಯೇನ್ಯೆ ಶರಣ ಶಿವಲಿಂಗ
ಸಾಧಕನು ನೀನಿರ್ದು ಷಟುಸ್ಥಲ
ದ್ಹಾದಿಯನು ಸಂಸ್ಮರಿಪ ಕಾರಣ
ಪೋದ ರಾತ್ರಿಯ ಸ್ವಪ್ನದಲಿ ನಾಂ ಬಂದು ನಿನ್ನೆಡೆಗೆ ॥ ೩೬ ॥

ಭರದಿ ಬಾಯಂದೊರದುದದು ನೀ
ಮರೆದು ಕೊಡ್ವುದು ಹಿರಿತನವೆ ನಿನ
ಗರಿಕೆಯಾಯಿತೊ ಇಲ್ಲವೋ ಎಂದೆನಲು ಗಾಬರಿಸಿ
ಉರುಳಿ ನೆಲಕಂ ಹೊರಳಿ ಪುನರಪಿ
ಎರಗಿ ಚರಣಕೆ ಗುರುವರೇಣ್ಯನೆ
ಕಿರಿಯ ನಾನತಿ ಮೂಢನಜ್ಞಾನಾಂಧ ಗುಣಹೀನ ॥ ೩೭ ॥

ಕಲಕಂಠರವ ಕಪ್ಪೆಯೊಳೆ ಅಂ
ಬಿಲದಿ ನವನೀತುಂಟೆ ಶಾಲ್ಮಲಿ
ವಲಯುದೊಳು ಫಲತತಿಗಳುಂಟೇ ತಂಪು ಅಗ್ನಿಯಲಿ
ಬಲಿದ ಕಜ್ಜಳದುಂಟೆ ಶುಭ್ರತೆ
ಮಲ ಪಲಾಂಡದಿ ಪರಿರ ಸೌರುಭ
ನೆಲಸದಂದದಿಯನ್ನೊಳಿಲ್ಲಿಹುದಯ್ಯ ಸದ್ಗುಣವ ॥ ೩೮ ॥

ನೀರಿನೊಳು ನೆನೆ ಇಟ್ಟ ಶಿಲೆಗಂ
ತೋರದದು ಮೃದುತರವುಕಂಬಲ
ಮೀರಿ ತೊಳೆದರೆ ಬೆಳಪುವೆತ್ತದು ನಿಂಬ ಮಧುವೆರಸೆ
ಸಾರಸವಿ ಪೋಲ್ವುದೆ ಶಿವನವ
ತಾರ ನಿಮ್ಮಯ ಜ್ಞಾನ ಮಹಿಮೆಯ
ಸೇರಿ ಬಾಳುವದಿವನವಶವೇನಲ್ಲ ಪೊರೆ ದೇವಾ ॥ ೩೯ ॥

ಎಂದು ಶಿವಲಿಂಗ್ವಿನಯದೋಕ್ತಿಯ
ಚೆಂದ ಸುಮಪದ ದ್ವಂದಕರ್ಪಿಸೆ
ಚಂದ್ರಧಾರಿಯರೂಪ ಜಾಂಗ್ಲೆರಿ ದೇವ ಗುರುಲಿಂಗ
ಕಂದ ಶಿವಲಿಂಗಾಖ್ಯನನು ತ್ವರ
ದಿಂದಲೇಳಿಸಿ ಕರದು ತವ ಬಳಿ
ಹೊಂದಿ ಮೂರ್ತಿಸಿಕೊಳುತ ಪೂರ್ವದ ಸುಕೃತ ಫಲವೆಂದು ॥ ೪೦ ॥

ಗುರುವೆ ಶರಣಾಗತರ ಕಲ್ಪನೆ
ತರುವೆ ನಿತ್ಯಾನಂದ ಸುಖಸಾ
ಗರವೆ ಸದ್ಗುಣ ಶಾಂತಿ ಕಲೆ ಸುಜ್ಞಾನದಾಗರವೆ
ಪರಮ ಭಕ್ತಿ ಜ್ಞಾನ ವಿರತಿಯು
ಕರುಣಿಸುತ ಲಿಂಗಾಂಗದರಿವನು
ಸ್ಥಿರಗೊಳಿಸಿ ಕಿರಿ ಜೀವ ಭಾವವನೈಕ್ಯಗೊಳಿಸೆಂದ ॥ ೪೧ ॥

ಕಡುಲೋಭಿದೊರೆತ್ತ್ವಣವನೆಂದುಂ
ಕೆಡಿಸದಲೆ ಕಾಯ್ವಂತೆ ಶ್ರೀಗುರು
ಸಡಗರದ ವಚನೋಪದೇಶವನಾಂತುಮಿಹ ಪರಕೆ
ಎಡೆಯಾಡ್ವ ಜೀವನಕೆ ಮುಕ್ತಿಯ
ಕೊಡಿಸುವವನತಿ ಧನ್ಯ ಶಿಷ್ಯನು
ಪೊಡವಿಯೊಳು ಸಮಗಾಣೆನವನ ಸುಪುಣ್ಯ ಸಂಚಯಕೆ ॥ ೪೨ ॥

ಪತಿಪರಾಯಣಳಾದ ಸತಿಗಂ
ಪತಿಯು ತನ್ನಿಂಗಿತವನೀವಂ
ತತಿಶಯುಂ ವಿರತಿಯನು ತಳೆದಾ ಪ್ರೌಢ ಶಿಷ್ಯನಿಗೆ
ಅತುಲ ವೈಭವಮಾದ ಶಿವಜ್ಞಾ
ನತಿ ಹಿತದಿ ದಯಪಾಲಿಸುವ ಸ
ಮ್ಮತಿಯ ಬಲಿಯುತ ಪರಮ ಕರುಣೆಯು ಬೀರಲನುವಾದ ॥ ೪೩ ॥

ವೀರ ಷಟುಸ್ಥಲ ಮಾರ್ಗ ಜ್ಞಾನಾ
ಚಾರ್ಯರಾ ಪ್ರಭು ಬಸವ ಘನ ಸುವಿ
ಚಾರವರ ಶ್ರೀ ಚೆನ್ನಬಸವೇಶಕ್ಕ ಮಹಾದೇವಿ
ಸಾರ ಸುಖವನು ಭವಿಸಿ ತಮ್ಮೊಳ
ಪಾರ ವಾಕ್ಜ್ಞಾನುಕ್ತಿ ನುಡಿದ ಸು
ವೀರ ವಚನಂಗಳಲಿ ಕರ್ಮಜ್ಞಾನ ಭಕ್ತಿಗಳೊಳ್ ॥ ೪೪ ॥

ಬಿಟ್ಟು ಕರ್ಮಜ್ಞಾನದಿಂದಲು
ಪುಟ್ಟಿದುತ್ತರ ಭಕ್ತಿ ಕಾಂಡವೇ
ಶ್ರೇಷ್ಟವೆಂದು ನಿರೂಪಿಸಿದ ಮಹಾಭಕ್ತಿಕಾಂಡವದೇ
ಷಟ್ಸ್ಥಲದ ಸುಜ್ಞಾನ ಮಾರ್ಗು
ತ್ಕೃಷ್ಟ ಮಾರ್ಗವೆ ಲಿಂಗಲೀಲಾ
ಇಷ್ಟವಂಗವು ಮುಂದೆ ಷಟುಸ್ಥಲ ಮಾರ್ಗ ತಾನಾಗೆ ॥ ೪೫ ॥

ಮೋಕ್ಷ ಮಂದಿರಕಾಂಕ್ಷೆಯು ತನಗೆ
ಸಾಕ್ಷಿ ಷಟುಸ್ಥಲ ಜ್ಞಾನ ಮಾರ್ಗವ
ಪೇಕ್ಷೆ ವಿಷಯಂಗಳನು ತುಳಿವದೆ ಮೆಟ್ಲುಮಾಗಿಹುದು
ಸೂಕ್ಷ್ಮ ಬೊಮ್ಮವೆ ಲಿಂಗವದು ವರ
ಮೋಕ್ಷ ಬಯಕೆಯೆ ಅಂಗವಿದು ಸಾ
ಪೇಕ್ಷೆ ಸಮರಸಗೈಯ್ಯ ಲಿಂಗಾಂಗೈಕ್ಯವೆನಿಸುವದು ॥ ೪೬ ॥

ಅಂಗ ಮನ ಕರಣಾದಿಗಳೆ ಘನ
ಲಿಂಗ ರೂಪವೆಯಾಗಿ ಮೇಣ್ಬಹಿ
ರಂಗದೊಳು ಸಲೆ ಶುದ್ಧ ವಿಶಿಷ್ಟಾದ್ವೈತವಾಚರಿಸಿ
ತುಂಗ ಸದ್ಭಕ್ತಿಯಲಿ ಬೆಳಗುತ
ಪೊಂಗಿ ಪರಮಾನಂದ ಸುಖ ದುಃ
ಖಂಗಳಾಚೆಯೊಳಿರ್ಪನೇ ಲಿಂಗೈಕ್ಯನೆನಿಸುವನು ॥ ೪೭ ॥

ತತ್ಪದಾರ್ಥವು ಲಿಂಗವದು ಮೇಣ್
ತ್ವಂ ಪದಾರ್ಥವು ಅಂಗವದು ತಿಳಿ
ಯಪ್ಪ ಲಿಂಗಾಂಗೈಕ್ಯ ಮಸಿ ಪದದರ್ಥವಾಗಿಹುದು
ಸುಪ್ರಮಥ ಸಲೆ ಅಂಗಲಿಂಗಗ
ಳಪ್ರಮಿತಿಗಳನೊಂದೆಯೆಂದರಿ
ಸ್ವಪ್ರಕಾಶಕ ಜೀವಿ ಶಿವನೊಳೈಕ್ಯವಿದೆ ನೋಡು ॥ ೪೮ ॥

ಅಂಗವೆಂದರು ಲಿಂಗವೆಂದರು
ಹಿಂಗದೊಂದೇ ಸ್ಥಲವು ದ್ವಯ ರೂ
ಪಂಗಳಂ ಧರಿಸಿಹುದು ಶಕ್ತಿ ಸ್ಫುರಣದಿಂದದುವೆ
ಪೊಂಗಿ ಶಕ್ತಿಸಮೇತದಿಂ ಮಹಾ
ಲಿಂಗವಂಗಂಭಕ್ತಿಯುಕ್ತಿಯ
ದಂಗವಿಸೆ ಸೂಯೋಗಮದು ಪರಮಾ ವಿರಳ ಪದವು ॥ ೪೯ ॥

ಯೋಗವೆಂಬುದು ಸುಮ್ಮನಾಗದು
ಯೋಗದ ಮರ್ಮವದು ಬೇರೆಯು
ರಾಗ ತನುಗುಣವಳಿಯೆ ಯೋಗದ ಅಂಗ ತ್ಯಾಗಾಂಗ
ಭೋಗ ಸಕಲ ಸುಖಂಗಳಂ ಘನ
ವಾಗಿರುವ ಸೂಲಿಂಗದೊಡನೆಯು
ಭೋಗಿಪುದೆ ಭೋಗಾಂಗ ನಿಜದಲಿ ಬೆರಿಯೆ ಯೋಗಾಂಗ ॥ ೫೦ ॥

ಇಂತು ತ್ರಿವಿಧದಲ್ಲಿ ಬೆರೆಯುವ
ಪಂಥವೇ ಯೋಗಾಂಗ ನೀ ನಿ
ಶ್ಚಿಂತ ಲಿಂಗದ ಬೆಳಗಿನೊಳುಮವಿರಳವ ಸಾಧಿಪುದು
ಸಂತಕಾಲವು ಘನದ ಸುಖವಂ
ನೆಂತು ಪೇಳಲಿ ಶರಣನುಳಿದ ಕು
ಭ್ರಾಂತ ಕೊಂತವನಂತ ವಿಹಯೋಗಂಗಳು ವಿಯೋಗ ॥ ೫೧ ॥

ಅರಿಯೆ ಭಕ್ತ ಮಹೇಶ ಮೇಣಾ
ವರಪ್ರಸಾದಿಯು ಪ್ರಾಣಲಿಂಗಿಯು
ಶರಣನೈಕ್ಯಂಬಾರಂಗಮಿವು ಸಿದ್ಧಮಾಗಿಹವು
ನಿರುತ ವರ ಆಚಾರ ಗುರು ಶಿವ
ಚರಪ್ರಸಾದ ಮಹಾನಾಮಂ
ಬಿರುತರೋನ್ನತ ಲಿಂಗಂಗಳಾರಾಗಿ ಮೆರೆಯುವವು ॥ ೫೨ ॥

ಭಕ್ತ ಮಾಹೇಶರಡು ಗುರುಸ್ಥಲ
ಮತ್ಪ್ರಸಾದಿಯು ಪ್ರಾಣಲಿಂಗಿಯು
ಸೌತ್ರ್ಯಲಿಂಗಸ್ಥಲಮಿವೆರಡುಂ ತಿಳಿಯೆ ಶರಣೈಕ್ಯ
ಮೂರ್ತಿ ಎರಡುಂ ಜಂಗಮಸ್ಥಲ
ವಿಸ್ತರಿಪೆನವಕಂಗಗಳನುಂ
ಚಿತ್ತಶುದ್ಧದಿ ಕೇಳು ನೀ ಶಿವಲಿಂಗ ಸೂಸಂಗ ॥ ೫೩ ॥

ಭೂಮಿ ಭಕ್ತಂಗಂಗವಾಗಿಯು
ಆ ಮಹೇಶ್ವರಗಪ್ಪು ಅಂಗವು
ನೇಮ ಲಗ್ನಿ ಪ್ರಸಾದಿಗಂಗವು ಪ್ರಾಣಲಿಂಗಿಯಗೆ
ಆ ಮರುತವೆ ಅಂಗ ಶರಣಗೆ
ವ್ಯೋಮ ವಂಗವು ಐಕ್ಯನಿಗೆ ನಿಃ
ಸೀಮವಾತ್ಮವೆ ಅಂಗವೀ ಅಂಗಂಗಳಿಗೆ ಭಕ್ತಿ ॥ ೫೪ ॥

ಶ್ರದ್ಧೆ ಭಕ್ತಿಯೆ ಭಕ್ತನಾಗತಿ
ಶುದ್ಧನೈಷ್ಠೆ ಮಹೇಶ್ವರಂ ಪ್ರ
ಸಿದ್ಧಮಾದವ ದಾನ ಭಕ್ತಿ ಪ್ರಸಾದಿ ತಾನಾಗಿ
ಸಿದ್ಧ ಸ್ವ ಅನುಭಾವ ಭಕ್ತಿಯೆ
ವೇದ್ಯ ಪ್ರಾಣ ಸುಲಿಂಗಿಯಾನಂ
ದಾಬ್ಧಿ ಭಕ್ತಿಯೆ ಶರಣನಾಗಿಯು ಮರಿಯು ನಿಜದಲ್ಲಿ ॥ ೫೫ ॥

ಸಮರ ಸತ್ವದ ಭಾವನೈದಿದ
ಕ್ರಮವ ನಿರ್ಭಾವ ಸುಪದದೊಳಂ
ರಮಿಪ ಭೇದವೆ ತಿಳಿಯೆ ಲಿಂಗಾಂಗೈಕ್ಯ ಸಾಮ್ರಹಸ್ಯ
ವಿಮಲವಿದೆ ವೇದಾಂತ ಮೂಲವು
ಅಮಿತ ಜೀವೇಶೈಕ್ಯವಿದೆ ಶುಭ
ದಮಲ ಷಟುಸ್ಥಲ ಜ್ಞಾನಸಿಧಿ ಸಂಪೂರ್ಣ ಶಿವಶರಣ ॥ ೫೬ ॥

ತಾನು ಶಿವನೆಂತೆಂಬ ನಿಜದಾ
ಜ್ಞಾನಮಂ ಮರದಿಪ್ಪ ಜೀವನ
ಜ್ಞಾನಮಂ ಪರಿಹರಿಸಿ ಸಮ್ಯಜ್ಞಾನಮಂ ಕೊಟ್ಟು
ತಾನೆ ಮೋಕ್ಷಾಪೇಕ್ಷೆಯಂ ಸಂ
ಧ್ಯಾನಿಸಿದ ಆತ್ಮಂಗೆ ಶ್ರೀಗುರು
ತಾನೆಯಾಗುತ ಬಂದು ಘನ ಪರಂಜ್ಯೋತಿರ್ಲಿಂಗವನು ॥ ೫೭ ॥

ಕರಕೆ ಕೊಡುತಾ ಜ್ಯೋತಿರ್ಲಿಂಗದ
ಲಿರುವ ಕಳೆಯೆಲ್ಲವನು ನೀನೆಂ
ದರುಹಿ ಜ್ಯೋತಿರ್ಲಿಂಗದ ಸುಚೈತನ್ಯ ಜ್ಞಾನವದು
ಪರಮ ಜಂಗಮವೆಂದು ಷಡ್ವಿಧ
ಚರ ಮುಖದಿ ಷಡುಲಿಂಗ ಷಡ್ವಿಧ
ದಿರುವ ಲಿಂಗದ ಮುಖದಿ ಷಡ್ವಿಧವಂಗವಾಗಿಹವು ॥ ೫೮ ॥

ಅಂಗ ಷಡುವಿಧಮಾಗೆ ಷಡ್ವಿಧ
ಲಿಂಗ ಮುಖಕೆಯು ಷಡ್ವಿಧಂ ಸಲೆ
ತುಂಗ ಭಕ್ತಿಯದಿಂದಲರ್ಪಿತ ಮಾಡುವದೆ ಭಕ್ತಿ
ಪುಂಗ ಷಟುಸ್ಥಲ ಜ್ಞಾನ ಭಕ್ತಿಯ
ನಂಗೈಸೆ ದ್ವಯರಹಿತ ಕೂಟಂ
ಅಂಗ ಲಿಂಗದ ಕೂಟ ಮುಕ್ತಿಯ ಬೇಟ ಶಿವನಾಟ ॥ ೫೯ ॥

ಮುಕ್ತಿ ರೂಪವೆ ಮಹಾಲಿಂಗದ
ವ್ಯಕ್ತಿಯಾ ಘನ ಲಿಂಗದಲಿ ಅ
ವ್ಯಕ್ತವೆನುವಾಖಂಡ ಪರಿಪೂರ್ಣತ್ವ ಚೈತನ್ಯ
ಚಿತ್ಸ್ವರೂಪಾದಾ ಚಿದಾಂಶಿಕ
ಸತ್ಯನಪ್ಪಾ ಚಿತ್ ಸ್ವರೂಪನು
ತತ್ಪದಾರ್ಥನು ನೀನೆಯೆಂದುಪದೇಶಿಸಿದ ಗುರುವಾ ॥ ೬೦ ॥

ಅಂತು ಷಡ್ವಿಧಲಿಂಗ ಮುಖದಲಿ
ಇಂತು ಷಡ್ವಿಧ ಅಂಗವಾದುದು
ಸಂತತರಿದಾ ಷಡ್ವಿಧಂಗವ ಲಿಂಗ ಷಡ್ವಿಧದ
ಶಾಂತ ಮುಖದಲ್ಲಡಗಿಸಲುಮಿದೆ
ಪಂಥ ಷಟುಸ್ಥಲ ಜ್ಞಾನವಾತ್ಮಗೆ
ಮುಂತಿನಾ ಸಲೆ ಪರಶಿವತ್ವವು ಸಾಧ್ಯಮೊಪ್ಪುಗುಮು ॥ ೬೧ ॥

ತಿಳಿಯೆ ಲಿಂಗವು ಸ್ವಯಂ ಲೀಲೆಯೊ
ಳ್ಚಲಿಸಿ ಲಿಂಗಾಂಗೆರಡು ತಾನಾ
ಗಲಿಸಿ ಸೇವ್ಯ ಸುಶೇವಕಾಗಿಯು ಪೂಜ್ಯ ಪೂಜಕನು
ನಲಿದು ತಾ ಮುನ್ನಾದ ಭೇದದ
ಬಲದಿಯಂಗವು ಲಿಂಗವಾರೆಂ
ದೆಳಸೆ ಗುರುಚರ ಭಕ್ತಿ ಪದಾರ್ಥ ಪ್ರಸಾದವರ್ಪಿತವು ॥ ೬೨ ॥

ಎಂದು ಈ ತೆರ ಭೇದವಾದುದು
ಒಂದೆ ವಸ್ತುವದೆಂದು ಗುರು ಮುಖ
ದಿಂದ ತಿಳಿದೆರಡಳಿದು ಪೂಜ್ಯವ ಕೊಂಬ ಲಿಂಗವದು
ಪೊಂದಿ ಪೂಜೆಯಗೈವ ಭಕ್ತನು
ಒಂದೆ ವಸ್ತೆಂದಾಚರಿಸುವಾ
ಚೆಂದ ಷಟುಸ್ಥಲ ಮಾರ್ಗವಿದೆ ಶಿವಶರಣ ಜನಮಾರ್ಗ ॥ ೬೩ ॥

ಇದುವೆ ಪರತರ ಲಿಂಗದೋಜ್ವಲ
ಸಿದ್ಧಿಸು ಗುರ್ತಿಪ ಸುಜ್ಞಾನಾಂಜನ
ಸುಧೆಯು ಭವ ಭೇಷಜವು ಶರಣ ಪ್ರಮಥರನು ಮತವು
ವಿದಿತ ಷಟುಸ್ಥಲ ಜ್ಞಾನಮಾರ್ಗವು
ಮಿದುವೆ ಪರತರದುನ್ಮನಿಯಲ
ಭ್ಯುದಯ ಸಾಧನ ಸಾರ್ವನಿಗಮಾಗಮದ ಮೂಲವಿದು ॥ ೬೪ ॥

ಎಂದು ನಿರ್ಗುಣ ಸಗುಣ ಭೋದವ
ನಂದು ಸೂಚಿಸುತಂಗ ಲಿಂಗದ
ದ್ವಂದ ಭಾವವನೈಕ್ಯಗೊಳಿಸಾನಂದವೆಳಗಿಸುತಾ
ಕಂದ ಶಿವಲಿಂಗಾಖ್ಯ ಶರಣನ
ಸಂದ ಭಕ್ತಿಯ ವೃಂದದಾಶ್ರಮ
ಹೊಂದಿ ಚಾಂಗ್ಲೆರಿ ಸ್ವಾಮಿ ಗುರುಲಿಂಗಾರ್ಯನಿರುತಿರಲು ॥ ೬೫ ॥

ಸತತ ಸುಪಥವ ಪಿಡಿದು ಚಾಂಗ್ಲೆರಿ
ಯತಿಯ ಪದತತಿಗಳನು ಭಜಿಸುತ
ಲತುಲ ಜ್ಞಾನದಲತಿ ಹಿತೋಕ್ತಿಯ ವಚನ ಶಾಸ್ತ್ರಗಳಂ
ಮತಿಯುತಂ ತಿಳಿವತಿಥಿ ಚರರನು
ಮತಿಯ ಭಕ್ತಿಯ ನೀವುತಂ ಘನ
ವೃತಿಯು ತನ್ನಯ ಕಾಯಕಂ ನಡೆಸಿರ್ದನಪ್ರತಿಮ ॥ ೬೬ ॥

ಹೀಗೆ ಕೆಲದಿನವಿರಲು ಚಾಂಗ್ಲೆರಿ
ಯೋಗಿ ಮತ್ತಾ ಪುರದ ಚೌಕಿಯು
ಶ್ರೀಗಳಿರುವ ಮಠದಲ್ಲಿ ಪೌರಾಣವನು ಸಾಗಿಸುತೆ
ಪೂಗ ಜಂಗಮ ತೃಪ್ತಿಯನ್ನತಿ
ರಾಗದಿಂ ಜರುಗಿಸಲು ಹಣವಿ
ಲ್ಲಾಗಿ ಧ..ಕರ ಮನೆಗೆ ಪೋಗುತ ಸಾಲವಂ ತಂದು ॥ ೬೭ ॥

ನಡೆಸಿದಾ ಪೌರಾಣವನು ತೀ
ರ್ಗಡೆಯ ಮಾಡಲ್ಕವರು ಬಹು ಪರಿ
ಕಡೆಯ ಪ್ರಸ್ತವನಾಗ ಗೈಯ್ಯುತ ನೆರೆದ ಚರತತಿಗೆ
ಕೊಡುತ ಬೇಡಿದ ವಸ್ತು ವಾಹನ
ಪಡಿ ಪದಾರ್ಥವ ಚಿನ್ನ ರನ್ನದ
ಮಡಿಯು ಲಿಂಗದ ಕರಡಿಗೆಯು ಶಿವಪೂಜೆ ಸಾಮಗ್ರಿ ॥ ೬೮ ॥

ಇನಿತಿವೆಲ್ಲವನಿತ್ತು ಋಣದ್ಹಣ
ವನಿತದೆಲ್ಲವನಾಗ ವೆಚ್ಚಿಸಿ
ತನಗೆಯೊಂದರ ಬಿಲ್ಲಿ ಸಹಿತವನುಳಿಸಿಕೊಳ್ಳದಲೆ
ಮನಕೆ ಶಾಂತಿಯನಾಂತು ಮರುದಿನ
ತನಯ ಶಿವಲಿಂಗನನು ಕರೆಯುತ
ಬಿನದಿಸುತ ನಾವಿನ್ನು ಪೋಗುವೆವೆಂದು ವಾಗ್ದಾನ ॥ ೬೯ ॥

ಮಾಡಿ ಹರುಷಂಗೂಡಿ ಕರುಣದಿ
ನೋಡಿ ಮುದವಂ ಮೂಡಿ ಕರವಂ
ನೀಡಿ ಸುಖಿಸೆಂದಾಡಿ ಪರಸುತ ಪಾಡಿ ಭಯ ಬೇಡೀ
ನಾಡೊಳು ಘನ ಕೀರ್ತಿ ನಿನ್ನದು
ಮೀಡೇರಲೆನುತಾನು ಕಾರ್ಯವ
ಮಾಡಿದುಮ ತಿಳಿಯುವದು ಮುಂದಿನ್ನದನು ಪರಿಹರಿಸು ॥ ೭೦ ॥

ಎನಲು ಶರಣನು ಘನ ಮಹಾತ್ಮರೆ
ತನುಜನಿಗಭಯವಸುಮಿತ್ತರೆ
ಘನತರಲ್ಲವು ಮಾತ್ರ ನಿಮ್ಮಯ ಕರುಣವೊಂದಿರಲಿ
ತನಯ ನೀನದ ಮರೆಯಬೇಡ್ವೈ
ಜನುಮ ಸಾರ್ಥಕವೇನು ಗುರುವಿನ
ಘನತರೋಕ್ತಿಯ ಮೀರಿ ನಡೆ ಹಿರಿ ಹರಿಗಳವಲ್ಲ ॥ ೭೧ ॥

ಎಂದು ಗುರುಪದ ನಮಿಸಿ ಬೀಳ್ಕೊಡು
ತಂದು ಶಿವಲಿಂಗಾರ್ಯ ಶರಣನು
ಹೊಂದಿ ತನ್ನಾಶ್ರಮವ ನಿತ್ಯನುಜ್ಞಾನ ಮಾರ್ಗದಲಿ
ಚೆಂದದಿಂ ಗುರುವಾಕ್ಯದನುಭವ
ತಂದು ಮನಕಾನುದ ನಿಜಸುಖ
ದಿಂದಲಿರೆ ಗುರುಪೋದ ವಾರ್ತೆಯ ಕೇಳಿ ಸಾಲಿಗರು ॥ ೭೨ ॥

ಸುಲಭ ಶಿವಲಿಂಗಪ್ಪ ನಿನ್ನಯ
ನೆಲೆಯೊಳಿರುತಿರ್ದಾ ಚಾಂಗ್ಲೆರಿ
ಪೊಳಲ ಗುರುಲಿಂಗಾರ್ಯರಾ ಪೌರಾಣ ನೈಮಿತ್ಯ
ವಲಿಸಿ ನಮ್ಮನು ಋಣವ ತರುತವ
ನಿಲದೆ ಪೋದರು ನಮ್ಮ ಗತಿಯೇಂ
ಹಲವು ಮಾತಿನ್ನೇಕೆ ನೀನವರಶಿಷ್ಯ ಕೊಡು ಎನಲು ॥ ೭೩ ॥

ಕೇಳಿ ಶರಣನು ಮೂಲ ಮಾತಿದು
ಫಾಲಿಗರೆ ಸುಳ್ಳಿಲ್ಲ ಸತ್ಯವು
ಲೋಲ ಮನ ಗುರು ಲಿಂಗ ಪತಿ ಋಣ ಶರಣ ಸತಿ ತಾನು
ಆಳಿಗೊಳ್ಳದೆ ಕೊಡಲುಬೇಕದು
ತಾಳಿ ಮೂದಿನವೆನುತ ಮುಂದಾ
ಸಾಲವನು ತೀರಿಸುತ ಸುಖದಿಂದಿರ್ದ ಗುರುದಯದಿ ॥ ೭೪ ॥

ಕೊಂಡ ಧನಿಕರು ನುತಿಸಿದರುಮರ
ಳ್ಗುಂಡಿಗೆಯ ಪುರ ಶರಣ ಬಸವನು
ಗೊಂಡು ಸಾಲವ ಧನಿಕರಿಗೆ ಹರನಿಂದ ಕೊಡಿಸಿದನು
ಮಂಡಲದೊಳಿವ ಕೇಳಿ ಬಲ್ಲೆವು
ಕಂಡೆವೀಗೀ ಶರಣ ತವಗುರು
ಗೊಂಡ ಸಾಲವ ತಾನೆ ಕೊಟ್ಟುದು ಪೊಸತು ಪೊಸತಿದುವೆ ॥ ೭೫ ॥

ಎಂದು ನುತಿಸುತ ಧನಿಕರತಿ ಮುದ
ದಿಂದ ನಮಿಸುತ ಶರಣರಾಜ್ಞೆಯ
ನಂದು ಶಿರದಲಿ ಧರಿಸಿ ತಮ್ಮಯ ಮಂದಿರಕೆ ಸಾಗೆ
ನಂದಿವಾಹನ ಶರಣ ಶಿವಲಿಂ
ಗೆಂದಿನಂದದಿ ತನ್ನ ಕ್ರಿಯವಾ
ನಂದದಿಂ ನಡೆಸುತಲಿ ಮೆರೆದನು ಶೀಲ ಚರಲೋಲ ॥ ೭೬ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀ ಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಯಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಫಲ
ದೊರೆಕೊಳಗುಮಿಷ್ಟಾರ್ಥ ಸಿದ್ಧಿಯುಮೇಕದಶ ಸಂಧಿ ॥ ೭೭ ॥

ಅಂತು ಸಂಧಿ ೧೧ಕ್ಕಂ ಪದನು ೯೩೭ ಕ್ಕಂ ಮಂಗಲ ಮಹಾ ಶ್ರೀ ಶ್ರೀ

## ಸಂಧಿ ೧೨

ಸತ್ಯ ಸನ್ಮಾರ್ಗದಲಿ ಶಿವಲಿಂ
ಗೋತ್ತುಮಂ ತಾನಿರಲು ಕೀರ್ತಿಯು
ಪೃಥ್ವಿಯಲಿ ಪಬ್ಬಲಿಕೆ ಭಕ್ತರ ಮೊತ್ತವೆಡೆಯಾಡೆ ॥ ಪಲ್ಲ ॥

ಮುಕ್ತರಿಗೆ ಮುಕ್ತಿಯನು ಕರ್ಮಾ
ಸಕ್ತರಿಗೆ ಶಕ್ತಿಯನು ಗುರುವರ
ಭಕ್ತರಿಗೆ ಭಕ್ತಿಯನು ಯೋಗ ಧ್ಯಾನಯುಕ್ತರಿಗೆ
ಮುಕ್ತಿಯನು ಯಮಿ ಜನಕೆ ಸೂವಿ
ರಕ್ತಿಯನು ಕೊಡಬಲ್ಲ ಯುಕ್ತಿಯ
ಭಕ್ತನಲ್ಲಾ ಸಕ್ತ ಶಿವಪುರದೇವ ಶಿವಲಿಂಗ ॥ ೧ ॥

ಇಂತು ಶರಣನು ಜ್ಞಾನ ಷಟುಸ್ಥಲ
ವಂತರಂಗದ ಶುದ್ಧ ಭಾವದ
ಲಾಂತುಲಂಗಾಂಗ ವಿರಳದ ಸಮರಸ ಸುಶಾಂತಿಯಲಿ
ಚಿಂತೆ ಜೀವನ ಮರದು ಸದ್ಗುಣ
ಸಂತ ಶರಣರೊಳಾಡುತಿರಲು ದಿ
ಗಂತ ಕೀರ್ತಿಯು ಪರಿದು ಹಲಕೆಲ ದೇಶ ಭಕುತರುಗಳ್ ॥ ೨ ॥

ಬರುತಲಿರಲೊಂದಿನದಿ ಚಿಮ್ಮಡ
ಪುರದ ಅಲ್ಲಪ್ಪೆಂಬುವಂ ಶ್ರೀ
ಗುರು ಕಾಡಸಿದ್ಧಾರ್ಯರಿಗೆ ಶಿಷ್ಯನಾಗಿರಲು
ಮರಹೊದಗೆ ಮುಂದುವರಿಗಾಗಾ
ಗುರು ಭಕ್ತನಲ್ಲಪ್ಪ ದುಃಖದಿ
ಪೊರೆಯುವರುವಿನ್ನಾರು ತನಗೆಂದಡವಿಯ ಸೇರಿ ॥ ೩ ॥

ಇಚ್ಛೆಯಿಲ್ಲದೆ ಸತಿಯ ಸಂಸಾರ
ಬಿಚ್ಚಿ ಪಾಶವ ಸ್ವಚ್ಛ ಗುರು ನಾ
ಮುಚ್ಚರಿಸುತುದ್ಧರಿಸುವರುಮಾರೆಂದು ಬಲು ಮರುಗಿ
ಹುಚ್ಚನಂದದಿ ಪೆಚ್ಚ ದುಃಖದ
ಕಿಚ್ಚಿನಿಂ ಬೇಯುತ್ತ ನಿಶಿದಿನ
ಎಚ್ಚರಿಲ್ಲದೆ ಚರಿಪನವನಚ್ಯೊತ್ತಿ ಗುರುಮಹಿಮ ॥ ೪ ॥

ಇಂತು ಚಿಂತಿಸುತಿರಲವನ ಸ್ವ
ಪ್ನಾಂತರಾಳದಿ ಕಾಡಸಿದ್ಧನು
ಸಂತ ರೂಪದಿ ಬಂದು ಎಲವೋ ಏಕೆ ಮರುಗುವಿಯೋ
ಪ್ರಾಂತ ಮೊಗಲಾಯಲಿ ಬಲ್ಲಿದ
ಶಾಂತ ಶಿವಶರಣಿರುವನಲ್ಲಿಗೆ
ನೀಂ ತವಕದಲಿ ಪೋಗೆ ನಿನ್ನಯ ಬಯಕೆ ಸಿದ್ಧಿಪುದು ॥ ೫ ॥

ಎಂದುದಂ ಕೇಳೆಚ್ಚರಿಸಿ ಕುಳಿ
ತೆಂದನಾವೂರೆಂದು ಗುರ್ತಿಸ
ಲೆಂದು ಚಿಂತಿಸಿ ಹಾಗೆ ಹೊಲದೊಳಗಿಂದ ಪೊರಡುತ್ತೆ
ನಿಂದಿರದೆ ಸಂಚಾರಗೈಯ್ಯುತ
ಲೊಂದೆರಡು ಮಾಸದಲಿ ಭೀಮೆಯ
ಹೊಂದಿ ಬಳಿಗೂಡಿರ್ದ ಗಡ್ಡಿಯ ಲಿಂಗ ಮಣ್ಣೂರಕೆ ॥ ೬ ॥

ಬರುತ ನದಿಯಲಿ ಸ್ನಾನ ಗೈಯ್ಯು
ತ್ತಿರುತ ಕಂಡನುವೋರ್ವ ಹಿರಿಯನ
ಕರೆದು ಕೇಳಿದನಿನ್ನು ಮೊಗಲಾಯೆನಿತು ದೂರಿಹುದು
ಹಿರಿಯ ನಮ್ಮೂರಿದೇ ಇಂಗ್ರಜಿ
ಇರುವದಾಚೀಯೂರೆ ಮೊಗಲಾಯಿ
ಹಿರಿಯ ಮಣ್ಣೂರದುವೆ ನಮ್ಮದು ಚಿಕ್ಕಮಣ್ಣೂರು ॥ ೭ ॥

ಎಂದುದಂ ಕೇಳುತಲಿ ಅತಿತ್ವರ
ದಿಂದ ದಾಟುತ ನದಿಯನಲ್ಲಿಂ
ಮುಂದೆ ಪೊರಟಾನಂದದಿಂ ಬರೆ ಕಂಡ ಮಾಶಾಳಾ
ಅಂದ ಪುರ ಜಾಹಗಿರೆಯುಮಿರುವದ
ರಿಂದ ಹೊಡೆಯು ಮೇಣ್ಕಚೇರಿಗ
ಳಿಂದ ಶೋಭಿಪುದಲ್ತೆ ಈ ಪುರವೆಂತು ಘನಮಿಹುದು ॥ ೮ ॥

ಇಲ್ಲಿಯೋರ್ವರುಮಿರರೆ ಶರಣನ
ಬಲ್ಲವರು ಎಂದೆನುತುಮನವತಿ
ಲಲ್ಲೆಗರೆಯಲು ತಿಳಿದು ಕಣ್ಣರಿಯುದಿರೆ ಕರುಳುಗಳು
ಬಲ್ಲವೆಂಬುವ ನ್ಯಾಯದಿಂ ಕಂ
ಡೆಲ್ಲರನು ಕೇಳುವನು ಬೇಸರ
ಗೊಳ್ಳದಲೆ ನಿಮ್ಮೂರೊಳುಂಟೇನೋರ್ವ ಶಿವಶರಣ ॥ ೯ ॥

ಇಲ್ಲವೈ ಮತ್ತೆಲ್ಲಿಯಿಹ ಗುರು
ತಿಲ್ಲ ನಮಗದು ಪ್ರಾಂತ ಮೊಗಲಾ
ಯಲ್ಲವೇನಿದುಮಹುದು ಶಿವಶರಣೆಲ್ಲವೇನಿಲ್ಲ
ಸೊಲ್ಲು ಸೊಲ್ಲಿಗೆ ಪೋಗು ಬರುವರ
ನಿಲ್ಲಿಸುತ ಕೇಳಲ್ಕೆ ಬೇಸ
ತ್ತೆಲ್ಲರಿವನತಿ ಮರುಳನೆಂದನು ಮತಿಸಿ ಪೋಗಲ್ಕೆ ॥ ೧೦ ॥

ಅನಿತರಲಿ ಪುರಗೌಡ ಮನೆಯಿಂ
ವನವ ನೋಡಲು ಪೊರಪೆ ಬೀದಿಯು
ಜನರ ಸಂದಣಿ ಕಂಡು ಏನೆನಲವನ ಸ್ತಿತಿ ಗತಿಯಾ
ನೆನೆದು ನಗುತಂ ಪೇಳೆ ಗೌಡನು
ಸನುಮತಿಸಿ ಕರೆದವನ ಕೇಳ್ದನು
ಧಣಿಯರೇ ತಾವ್ಕೇಳಿರೆನುತಲಿ ಪೇಳತೊಡಗಿದನು ॥ ೧೧ ॥

ಪ್ರಾಂತ ಮೊಗಲಾ ಯಾವ ಪುರವೋ
ಹಂತಿ ಶಿವಶರಣೆರುವನಂತೆಯು
ನಾಂ ತವಕದಲಿ ಕಾಣ್ಬಕಾಂಕ್ಷೆಯದಿಂದೆ ಕೇಳಿದರೆ
ಶಾಂತ ಭಕ್ತರು ಪೇಳದೇ ಎನ
ಗಿಂತು ಹುಚ್ಚನ ಮಾಡಿ ಸಕಲರು
ನಿಂತು ನಗುವರು ಏನು ಪೇಳಲಿ ಪುರವನಾಳುವರೆ ॥ ೧೨ ॥

ಹುಚ್ಚನಾದರೆ ಶರಣರ ಪದ
ವಿಚ್ಛಿಸುವನೇಂ ನೀವೆ ಹುಚ್ಚರು
ಸ್ವಚ್ಛ ಮೂರುತಿ ಮಾಧನಾ ಹಿಪ್ಪರಿಗೆಯಲ್ಲಿರುವಾ
ಅಚ್ಚರಿಯಮವರಿರವ ಪೇಳಲು
ಮೆಚ್ಚುತ ಜರಿಗೆ ತೀರಲರಿಯದು
ಆಚ್ಚಿತ್ರಯ ಶರಣಹನು ಭಕುತನೆ ಪೋಗು ದೂರಿಲ್ಲ ॥ ೧೩ ॥

ಎಷ್ಟು ಗಾವುದಮಿರುವವೆನಲಿ
ನ್ನೆಷ್ಟು ಸಹಜವು ಒಂದೆ ಗಾವುದ
ಕಷ್ಟವಿಲ್ಲದೆ ಪೋಗ್ವೆ ಸಂಜೆಯುತನಕಲೆನೆ ದಾರೀ
ಗುಟ್ಟು ಪೇಳಲು ಪೊರಟು ಬರುತಿರೆ
ಕಷ್ಟವದು ಕಾರಣವು ಸುಖಿಕೆಂ
ದಷ್ಟರೊಳು ಮಾವೂರ ಸೀಮೆಯ ಹಳ್ಳ. ಜಾಲಿಯಲಿ ॥ ೧೪ ॥

ದಾರಿ ಕಾಣಗೆ ಮಬ್ಬು ಮುಸುಕಲು
ಏರಿ ಮೇಲಕೆ ನಡೆದನಲ್ಲಿಂ
ತೀರ ನಸುಗತ್ತಲವು ಮುಸುಕುತ ದಿಕ್ಕು ತಪ್ಪುತಲಿ
ಸಾರಿ ಬರುವನು ದಾರಿ ಕೆಳಬದಿ
ದೂರ ಪೋಗ್ವನು ಮೀರಿ ಮತ್ತತಿ
ಯಾರು ಸುಳುವಿಲ್ಲಿಲ್ಲವಾ ಪಲ್ವಲದ ಜಾಲಿಯಲಿ ॥ ೧೫ ॥

ರಾತ್ರಿಯಾದುದು ಕಂಡು ಗಿಡದಡಿ
ಗಾತ್ರವಾನಿಸಿ ಕುಳಿತು ಮಹಶಿವ
ರಾತ್ರಿಯಂದ್ದರಿಸಾಗಳುಪವಾಸದಲಿ ಮನವೆರಸಿ
ನೇತ್ರತ್ರಯ ಘನ ಮಹಾದೇವನ
ಸ್ತೋತ್ರ ಗೈಯ್ಯುತ್ತಿರಲು ಶರಣನು
ಮಾತೃ ಸುವರ್ಣಾಂಬೆಯೊಳು ಕಳವಳಿಸಿ ಪೇಳಿದನು ॥ ೧೬ ॥

ತಾಯಿ ಕೇಳುತ ತಮ್ಮ ನೀ ಕರ
ತಾಯೆನಲುಮತಿ ಬೇಗ ಶರಣನು
ಶ್ರೇಯ ಭಕ್ತನ ಬಳಿಗೆ ಬರಮಾಡುತಲಿ ಭೆಟ್ಟಿಯನು
ಸಾಹ್ಯಗೊಳಿಸುತ ಶಿವಶಿವಗುಣ
ಪ್ರಿಯ ಭಕ್ತನು ಬಳಲಿಸನುತಲಿ
ಬಾಯೆನುತ ಮಾರ್ಗವನು ತೋರಿಸಿ ತನ್ನ ಆಶ್ರಮದ ॥ ೧೭ ॥

ಗುರುತು ಪೇಳುತ ಮರಳಿ ಪುರಕಂ
ಬರುತ ಶರಣನು ತನ್ನ ಮಾತೆಗೆ
ವರದ ಭಕ್ತನ ಪೂರ್ವಚರಿತವನದನುಯಲ್ಲವನಂ
ಇರದೆ ಪೇಳುತ ಬೆಳಗು ಜಾವದಿ
ಹರುಷದಿಂ ತವ ನಿತ್ಯ ಕರ್ಮವ
ವಿರಚಿಸುತ್ತಿರೆ ಬಂದ ಶರಣನ ಗೃಹವನರಸುತ್ತೆ ॥ ೧೮ ॥

ಸೇದಿ ಭಾವಿಯು ಗೃಹದ ಮುಂಬಿಲ
ಪೋದ ಕಾವಿಯು ಧ್ವಜ ಪತಾಕೆಯು
ನಾ ದಯೂಗುಣಿ ಭಕ್ತನಲ್ಲಪ್ಪಾಗ ಕಾಣುತಲಿ
ಸಾಧು ಶರಣನ ಮಂದಿರಿದೆ ಎಂ
ದಾದುದತಿ ಪ್ರೇಮಾವಲಂಬನ
ಸಾಧಿಸಿತುಮೆಂತೆನುತ ಗೃಹದೊಳಪೊಕ್ಕು ಶರಣನು ॥ ೧೯ ॥

ನೋಡಿ ತನಗಾ ಕಾಡಿನಲಿ ದಯ
ಮಾಡಿ ಭೆಟ್ಟಿಯನಿತ್ತು ಕಳವಳ
ಗೂಡಿ ಮಾರ್ಗವ ನೋಡೆನುತ ತೋರಿಸಿದ ಘನಮಹಿಮ
ಗಾಢನಿವನೆಂದುಬ್ಬಿ ಸಲೆ ಮುಂ
ದಾಡಿ ತೆಕ್ಕೆಯನ್ನಾಯ್ದು ನಮಿಸುತ
ಬೇಡಿಕೊಂಡಾನೇಕ ಪರಿಯಿಂದಲ್ಲೆ ವಾಸಿಸುತ ॥ ೨೦ ॥

ಶರಣ ಶಿವಲಿಂಗೇಶ ಪದವನು
ಸ್ಮರಿಸಿ ಸೇವೆಯಗೈಯ್ಯುತನುದಿನ
ಪರಮ ಲಿಂಗಾಂಗೈಕ್ಯ ಜ್ಞಾನ ಶಿವಾನುಭವಮಾದ
ವರ ಪ್ರಮಥರೊಡನಾದಿ ಶಾಸ್ತ್ರಗ
ಳರಿಯುತಾ ಘನ ಮಹಿಮರಿಂದಂ
ಬೆರೆತು ಸತ್ಸುಖದಿರವಿ ನಲಿಯಿವರೆನ್ನ ಗುರುವೆಂದು ॥ ೨೧ ॥

ಭಾವ ಬಲಿಸುತ ದೇವ ಶರಣರ
ಪಾವನಾಂಘ್ರಿಯ ನಂಬಿ ಭಕ್ತಿಯ
ಸಾವಧಾನದಿಮಿರಲು ಮುಂದಾ ಮಸಳಿ ಗ್ರಾಮದಲಿ
ಶೈವ ಪಾರ್ಥಿವ ಲಿಂಗ ಪೂಜಕ
ಕೋವಿದಂ ಬ್ರಾಹ್ಮಣನುಮಾತನು
ಸೇವ್ಯ ಶಿಷ್ಯನುಮಾದ ಮಲ್ಲಪ್ಪಾಖ್ಯನೆಂಬುವನ ॥ ೨೨ ॥

ತಂಗಿ ಭೀಮಾಂಬೆಯಳು ಗರ್ಭವ
ನಂಗಿಕರಿಸುತಲಿರ್ದು ಮೇಣ್ಣವ
ತಿಂಗಳಂ ಪೂರ್ತಿಸಲು ಪಡೆಯದೆ ವರುಷ ಮೂರಾಗಿ
ಹಾಂಗೆ ಪೊಡೆಯಂ ಪೊತ್ತು ಬೇಸ
ತ್ತಂಗ ಶೋಧಕ ಡಾಕ್ಟರುಗಳಿಂ
ಸಾಂಗೋಪಾಂಗಾದಲೆ ಮರುಗುತ್ತಿರ್ದ ಅಬಲೆಯಳ ॥ ೨೩ ॥

ಕಂಡು ಮಲ್ಲಪ್ಪಾಖ್ಯನತಿ ಖತಿ
ಗೊಂಡು ತನ್ನಯ ಗುರುವಿಗುಸುರಲು
ಕಂಡು ಸ್ವಪ್ನದಿ ಪೇಳ್ದಿನಾ ಮುಂದಿದರ ಯೋಚನೆಯ
ಪಂಡಿತರು ಮಹಾವೈದ್ಯರಿದನಂ
ಖಂಡಿತವಗೈಯ್ಯದಿರಲುಳಿದಾ
ಷಂಡ ಪಾಮರ ಜನಕೆ ವಶವೇನಂದು ಸ್ಮರಣಾಂತ ॥ ೨೪ ॥

ನಿಲಿಸಿ ನಿದ್ರಿಸುತಲಿರಲು ಸ್ವಪ್ನದಿ
ಸುಲಭ ಹೃದಯಾಕಾಶವಾಣಿಯು
ಒಲಿದು ಪೇಳ್ದಂತಾಗೆ ಮಾಧನ ಹಿಪ್ಪರಿಗೆ ಶರಣ
ಒಳಿತುಗೆಯ್ವನುಮೆಂದು ಕೇಳ್ದಾ
ಗುಳಿದು ನಿದ್ರೆಯನೆದ್ದು ಶಿಷ್ಯಗೆ
ತಿಳಿಸಲದ ಕೇಳುತ್ತ ಭೀಮಾಂಬೆಯಳ ಕೂಡುತ್ತೆ ॥ ೨೫ ॥

ಎತ್ತು ಗಾಡಿಗೆ ಪೂಡಿ ತಮ್ಮಯ
ಬುತ್ತಿಯನು ಸಹವಾಗಿ ಗಾಡಿಯ
ನ್ಹತ್ತಿಸುತ ತಂಗಿಯನು ಬರೆ ಮೈಂದರಗಿ ಪುರಕಾಗ
ಪೊತ್ತುಮಿನ್ನೊಂದರ್ಧ ತಾಸುಳಿ
ಯಿತ್ತು ಹರದಾರೆರಡುಮಿನ್ನೆ
ಷ್ಟೊತ್ತು ಪೋಗ್ವದಗಾಧವೋ ಎಂದೆನುತು ಗಾಡಿಯನಂ ॥ ೨೬ ॥

ಸಾಗಿಸುತ ಬರೆ ಮುಂದೆ ಹಳ್ಳದ
ಜೋಗ ಪಂಕದ ಪೂಗವತಿಶಯ
ಮಾಗಿ ಮೇಲೆಂತೋರದೆ ಬಿಗಿಯಾಗಿ ರಂಜಿಸಲು
ಬೇಗನದರೊಳಗ್ಹಾಗೆ ಬ್ಯಾಗಿಸೆ
ಸಾಗದಲೆ ಚಕ್ರಗಳು ಸಿಲ್ಕುತ
ಬಾಗಿ ಕುಸಿಯುತಲೆತ್ತುಗಳು ಕಾಲೂರಿ ಪೊರಳಾಡೆ ॥ ೨೭ ॥

ಬೀಳುತೇಳುತ ಭಕ್ತಮಲ್ಲನು
ತೋಳನೇರಿಸಿ ಕೀಳಲೆತ್ನಿಸೆ
ಗಾಲಿಯರ್ಧವು ಮುಳುಗೆ ಕೆಸರೊಳು ಸಾಗದಿವನಾಟ
ಕಾಳು ಕವಿಯಿತು ಕತ್ತಲಾಯಿತು
ಗೋಳು ಇನ್ನೇನ್ಹೇಳಲಸದಳ
ಕಾಳಿನೊಳು ಕಾಲಿಡಲುಬಾರದು ದುಃಖದಿಂದವನು ॥ ೨೮ ॥

ಶರಣನನು ನೆನೆನೆನೆದು ದೇವಾ
ಪೊರೆಯೊ ನಮ್ಮನ್ನರರೆ ದೇವಾ
ಕರೆಸಿಕೋ ನೀಂ ಬಳಿಗೆ ದೇವರ ದೇವ ಗುರುದೇವಾ
ಇರುಳುಮಿಲ್ಲಾರಿಲ್ಲ ಬರುವರು
ತರುಣಿ ಗರ್ಭಿಣಿ ನಿಮ್ಮ ಪಾದದಿ
ಯುರಿಳಿಕೊಳ್ಳೈ ದೇವ ನುತಜನ ಕಾವ ಸಂಜೀವಾ ॥ ೨೯ ॥

ಎಂದು ಮನದಲಿ ಮರುಗಿ ಕಳವಳ
ದಿಂದ ಕಣ್ಣೀರುದರಿಸುತ ತನು
ಗುಂದಿ ಗದ್ಗದ ನಡುಗಿ ಭೂಮಿಯೊಳೆರಗಿ ಸಾಷ್ಟಾಂಗ
ಪೊಂದಿ ನಮಿಸುತ ಮಗುಳಿ ನಮಿಸುತ
ತಂದೆ ಬಾರೈ ಬೇಗ ಬಾರೈ
ಎಂದು ಕರೆಯುವ ಹುಯ್ಯಲಂ ತಾನರಿದು ಶರಣೇಶ ॥ ೩೦ ॥

ಭಕ್ತ ಸಮುಹದಿ ಭಜನೆಯನುಗೈ
ಯುತ್ತಲಿರೆ ತ್ವರನಕ್ಕುಮಲ್ಲಿಯೆ
ಭಕ್ತನಿಗೆ ಪ್ರತಿಯಾಗಿ ಸಾಷ್ಟಾಂಗವನು ಪಾಕಲ್ಕೆ
ಸುತ್ತಲಿಹರ್ನೀವೇಕೆ ಹಿಂಗೆಂ
ದುಕ್ತಿಸಲಿಕಾ ಮಹಂತನನು ಕರ
ದುತ್ತಮನೆ ಸೊಪ್ಪೊಂದು ಹೊರೆಯುಗೋ ಗಾಣದ್ದಿಂಡಿಯನು ॥ ೩೧ ॥

ಮತ್ತೆ ಹಂಡೆಯು ಬಾಂಡೆಗಳ ನೆರ
ಹತ್ತೆ ನೀರನು ತುಂಬ್ಬುದಲ್ಲದೆ
ಹತ್ತಿನ ಮೃದು ಮಣ್ಣು ತಂದಿಡು ಎಂದು ಸೂಚಿಸಲು
ಅತ್ಯಗಾಧವು ಎನಿಸಿ ಸ್ವಾಮೀ
ಕತ್ತಲಲ್ಲಿಲ್ಲಾರು ಬಪ್ಪರು
ಸತ್ಯ ಬಪ್ಪರು ನೋಡು ನೀನಿನ್ನೊಂದು ಕ್ಷಣದೊಳಗೆ ॥ ೩೨ ॥

ಎಂದು ಭಜನಾನಂದದೊಳು ತೊಡ
ಗಿಂದುಧರ ಶರಣೊಂದು ಕ್ಷಣದಲಿ
ನಿಂದಿರದೆ ಪೋಗೆವರ ಸಮೀಪದಿ ನಿಂದು ಎಲೊ ತಮ್ಮ
ಹಿಂದೆ ತಪ್ಪಿದೆ ದಾರಿ ಇಗೊ ಬಾ
ರೆಂದೆನುತೆ ಕರದಂತೆ ಕೇಳಿಸೇ
ಬಂದು ತಾಂ ಗಾಡಿಯೊಳು ಕುಳಿತುಂ ನಂದಿವರ ಬಸವ ॥ ೩೩ ॥

ಎನುತ ಮೈಮೇಲೆಳೆಯ ಹಸ್ತವ
ನಿನಿತುಳಿಯದಲೆ ಇಳಿವ ಗಾಲಿಗ
ಳನು ಪಂಕದೊಳಗಿಂದ ಕೀಳುತ ದಣಿಯದಲೆ ಕಡೆಗೆ
ಬಿನದಿಸುತ ಬರಲವನ ಕೂಡಿಸು
ತನಘ ತನ್ನಯ ಗುರ್ತು ತಿಳಿಗೊಡ
ದನುಪನು ತಾಂ ಗಾಡಿಪೊಡೆಯುತ ತನ್ನಯಾಶ್ರಮದ ॥ ೩೪ ॥

ಮುಂದೆ ನಿಲ್ಲಿಸಿ ತೋರದವರಿಗೆ
ಬಂದು ಕುಳಿತಿಹ ತನ್ನ ಸ್ಥಾನದಿ
ಹಿಂದುಳಿದ ಮಲ್ಲಾಖ್ಯ ಭಕ್ತನು ಗಾಡಿಯನು ಬಿಟ್ಟು
ತಂದು ವೃಷಭಗಳಂಗಳದಿ ನಿಲೆ
ತಂದೆ ಶಿವಲಿಂಗಾಂಗ ಶರಣನು
ಪೊಂದರಿಯದಂತವರ ಸ್ಥಿತಿಗತಿ ಕೇಳಿ ಮಹಂತನನು ॥ ೩೫ ॥

ಕರೆದವರ ಸಾಮಗ್ರಿಗಳನಂ
ತರುವದೆನಲಾ ಭಜನೆ ಭಕ್ತರು
ನೆರೆದು ಸರ್ವವನಾಗಳಿದ್ಧಿಸಿ ವೃಷಭಗಳ ಕಟ್ಟಿ
ಸುರಿದು ಸೊಪ್ಪನುಮಿತ್ತು ಪಿಂಡಿಯ
ನಿರದೆ ಈರ್ವರ ವೈದೊಳಸಿ ಘನ
ಹರುಷದಿಂದುಣಸೀಡಿ ತೃಪ್ತಿಸಿದರುಮವರು ॥ ೩೬ ॥

ಇವರು ಮಾರ್ಗದಿ ಪೊರಟಿರುವ ಟಂ
ಜವದಿ ಶರಣನು ತಿಳಿದನ್ಹೇಗದು
ವಿವರಿಸಲ್ಕದು ಮನಕಗೋಚರ ಶಿವನೆ ಬಲ್ಲನದ
ಸವನಿಸಲುಯಮ್ಮಳವೆಯಲ್ಲವು
ಭುವನಪೊತ್ತಹಿರಾಜಗರಿದರಿ
ದ ವಿರಳನು ಸರ್ವಂತರ್ಯಾಮಿಯುಮಿವನೆ ಸಿಜ ನಿಜವು ॥ ೩೭ ॥

ಎನ್ನಲನಿತಕೆ ರಾತ್ರಿ ತೀರುತ
ಚನ್ನರುಣನುದಯದಲಿ ಮಲ್ಲನು
ತನ್ನ ನೇಮವ ತೀರಿಸಲ್ಕಾ ಪುತ್ತಿನ ಮಣ್ಣು
ಸನ್ನುತರೆ ಬೇಕೆನಲು ಕೋಯೆಂ
ದೆನ್ನುತದ ತೋರಲ್ಕೆ ಭಕ್ತನು
ತನ್ನಗಿದ್ದು ಬೇಕಾದುದನುಮಿವರ್ಹ್ಗೇಗೆ ತರಿಸಿಹರು ॥ ೩೮ ॥

ಎನುವವನು ಚಿಮ್ಮಡದ ಅಲ್ಲ
ಪ್ಪನು ಕೇಳುತಿಗೊ ಭಕ್ತನೇ ಈ
ಘನ ದಯಾನಿಧಿ ಶಿವಶರಣತಿ ಗುಪ್ತ ಮಹತ್ವಿಕನು
ಎಣಿಸಲಳವಲ್ತಿಳಿಯಗೊಡದಿಹ
ಚಿನುಮಯನು ಪರಮುಕ್ತಿ ಸಾಧಕ
ನೆನಲಿವಂಗಗೋಚರವೆನುವದೊಂದಿಲ್ಲವೀ ಜಗದಿ ॥ ೩೯ ॥

ಆವ ಕಾರಣ ನೀವು ಬಂದುದು
ಭಾವಿಕನೆ ಎನ್ನನುಜಳಿಗೆ ಗ
ರ್ಭಾವರಿರಿ ಮೂವತ್ಸರಾದವು ಪಡೆಯದಿರುತಿಹಳು
ದೇವ ಶರಣನು ಕಾವ ಭಯ ಬಿಡಿ
ವ್ಯಾವ ದೊಡ್ಡಿತ ಕಾರ್ಯಮವನಿಗೆ
ನೀವು ಮಾತ್ರವನೋವಿ ಪದಿ ಶರಣಾಂಗ ತರುಮಾಗಿ ॥ ೪೦ ॥

ಬಿಡದೆ ಪಾದವ ಪಿಡಿದು ವಚನಂ
ಗೊಡುವ ತನಕಂ ಏಳಬೇಡಿರಿ
ಹಿಡಿಯುತಂ ಮನಘಟ್ಟಿ ನೀವ್ಪಲು ಘಟ್ಟಿಯಾಗಲ್ಕೆ
ಕೊಡುವನೊರವಂ ನಿಮ್ಮ ಬಯಕೆಯು
ಕಡೆಯು ಸಾರ್ದುದು ಸತ್ಯ ಸತ್ತೆಂ
ದೊಡನೆ ಕಲಿಸುತ ಭಕ್ತಿ ಕಟ್ಟಳೆಯವನು ಸ್ಥಿರಪಡಿಸೆ ॥ ೪೧ ॥

ಮಾಣದಾ ಮಲ್ಲಾಖ್ಯ ಭಕ್ತನು
ಏಣವಾಹನಧಾರಿ ಶರಣನ
ತಾಣದಲಿ ಚರ ತೃಪ್ತಿಗೈಸಲು ಭಕ್ಷ ಪಾಯಸವ
ಊಣೆಯಿಲ್ಲದೆ ಸಿದ್ಧಪಡಿಸಲು
ಜಾಣ ಶಿವಶರಣಾದ್ಯನುಂ ಚರ
ಶ್ರೇಣಿ ಸರ್ವರ ತೃಪ್ತಿಗೈಸುತ ಸವಿದು ಮನದೊಳು ತಾ ॥ ೪೨ ॥

ಆಡಿದಂ ಬಂದುದನು ಕೈಕೊಳೆ
ರೂಡಿಯಲಿ ಇದು ನೇಮ ಮತ್ತಂ
ಮಾಡದಿರ್ಪುದೆ ನೇಮ ವಡವಿಯಲಿದ್ದುದೊಂಚನೆಯ
ಗಾಢನೊಡೆಯರಿಗೊಪ್ಪಿಸುವವೇ
ನಾಡಿನಲಿ ಬಲು ಸುಖವು ಆದುವೇ
ಪಾಡುಮೆನುತಂ ಮರುದಿನಂ ತನ್ನಾಶ್ರಮದಿ ಪಲವಂ ॥ ೪೩ ॥

ಬಸುರು ಬಯಕೆಯ ವಿಸರವಮಂ ಬಹು
ಸಸಿವ ಶರಣನುಗ್ಯೈಯ್ಸಿದುದನಂ
ವಸೆದು ಪೇಳ್ವುದುಮೆನ್ನ ವಶವಲ್ಕಾಯಿಪಲ್ಲೆಗಳ
ಬಸಲಿಗೊರ್ಜಿಯು ಹರವಿ ಪುಂಡಿಯು
ಲಸಿತ ಮೆಂತೆಯು ತಿರಕಸಾಲಿ ಸ
ಬ್ಬಸಿಯು ಮರ ಸಂಗಿರಿಯು ಸುಗ್ಗಿಯು ಗೋಣಿ ಹೆಗ್ಗೋಣಿ ॥ ೪೪ ॥

ಮುಳ್ಳುಗಾಯಿಯು ವಳ್ಳಿ ಕುಂಬಳ
ಜಳ್ಳವರಿಯುಂ ಜವಳಿ ಭೆಂಡಿಯು
ಉಳ್ಳಿ ಸವತಿಯು ಹೀರಿ ಹಾಗಲ ಪಡುಲ ತಿಪ್ಪರಿಯು
ಎಳ್ಳುಪಚ್ಚಿದ ಸಜ್ಜೆ ಭಕ್ಕರಿ
ಸುಳ್ಳಿ ಪೋಳಿಗೆ ಸರಳ ಸಾವಿಗೆ
ಗುಳ್ಳಂಬ ಗುಡ ಕಡಬು ಗಾರಿಗೆ ಕೋಡಬೇಳಿಗಳ ॥ ೪೫ ॥

ಪರಡಿ ಸಜ್ಜಿಕೆ ಭಕ್ಷ ಪಾಯಸ
ಕರದ ಪೂರಣಗಡಬು ಗಿಲಗಂ
ಬೆರಸವಡಿ ಪುಳಿಯನ್ನ ದೋಸೆ ಧಪಾಟಿ ಪಾಲ್ಹುಗ್ಗಿ
ಮರಗುಳಗಿ ಮಾಲೇದಿ ಮಾವಿನ
ಗರಗರಿಂಬೆಯು ಬೆಲ್ಲವಂತವ
ಸುರಚಿರುಪ್ಪಿನಕಾಯಿ ಫುಗೆಯಂ ಬಾಡಿ ಬುರಬುರಿಯು ॥ ೪೬ ॥

ಇಂತು ಬಯಕೆಯ ಪರಿಕರಂಗಳ
ಸಂತ ಶರಣನು ಸಿದ್ಧಪಡಿಸ
ಲ್ಕಂತದೆಲ್ಲವ ಕಂಡು ಮಲ್ಲಪ್ಪಾಖ್ಯೆ ಬೆರಗಾಗಿ
ಶಾಂತರೇ ತಮಗಿನಿತು ಕಷ್ಟೇ
ಕೆಂತೆನಲುಮೀ ಕಷ್ಟ ಭಕ್ತರಿ
ಗಾಂತ ಕಷ್ಟವು ಪರಿಹರಿಪುದೆನುತಾಗ ಗಹಗಹಿಸೆ ॥ ೪೭ ॥

ಮುದದಿ ಶರಣರ ಹೃದಯ ಕಳವಳ
ವದನು ಮಲ್ಲಪ್ಪಾಖ್ಯನರಿಯದೆ
ಪದೆದು ಪಾರ್ಥಿವ ಲಿಂಗಪೂಜೆಯ ಗೈಯ್ಯುತಿರಲಾಗ
ಸದಯ ಶಿವಲಿಂಗೇಶ ಕಾಣುತ
ಮದನ ಹರ ಲಿಂಗವನು ಕಂತದಿ
ವದವಿ ಧರಿಸುತ ಮತ್ತೆ ಪಾರ್ಥಿವ ಲಿಂಗವಂಗೈದು ॥ ೪೮ ॥

ಪೂಜಿಸುವದಿದು ವೀರಶೈವಗೆ
ಸಾಜ್ಯವಲ್ಲವು ಸೌನಾಮಣಿ
ನೈಜವಿದು ಶೈವರಿಗೆ ಸಮ್ಮತವೆಂದು ಬೋಧಿಸಲು
ರಾಜಧರ ಶರಣಾಗ್ರಗಣ್ಯರೆ
ತ್ಯಾಜಿಸುವೆ ನೀ ವ್ರತವನೆನೆ ಗುರು
ರಾಜನಾಜ್ಞೆಯದಿಂದ ನೀನಿದ ತ್ಯಜಿಪುದೆನಲೊಪ್ಪಿ ॥ ೪೯ ॥

ತನ್ನ ಭಗಿನಿಯು ತಾನು ಶರಣರ
ಚನ್ನ ಹಸ್ತ ಹಸಾದವನು ಸಲಿ
ಸಿನ್ನು ಪೋಗಲುಮಾಜ್ಞೆ ಪಾಲಿಪುದೆಂದು ಭಗಿನಿಯಳಂ
ಸನ್ನುತರ ಪದಕೆರಗಿಸಲ್ಕದ
ದನ್ನನರಿಯುತ ನಗುತಲೇನೊಂ
ದೆನ್ನದಿರೆ ಚಿಮ್ಮಡದ ಅಲ್ಲಪ್ಪದನು ನೋಡುತಲಿ ॥ ೫೦ ॥

ತಾಯೆ ನೀಗಟ್ಯಾಗಿ ಪಿಡಿಯೈ
ಕಾಯ ಜಾರಿಯ ಶರಣಪದ ನಿ
ನ್ನಾಯ ಸಂಕಡೆಗೆಯ್ವ ವರಂ ನೀವತನಕೆನಲು
ಅಯ್ಯೊ ಎನಗಿದು ವಶವೆ ವಶವೈ
ಧ್ಯೇಯವಲ್ಲವುಮಹುದು ಭಕ್ತರ
ಕಾಯುವದು ತಮಗರಿದೆ ಮತ್ತಿನ್ನಾರಿಗಳವಡದು ॥ ೫೧ ॥

ನುಡಿಯೆ ಶಿವಶರಣಾಗ್ರಗಣ್ಯನು
ದೃಢ ಮನದಿ ಪದ ಪಿಡಿದ ಭಕ್ತೆಳಿ
ಗೊಡನೆ ಲೇಸಹುದೆನುತಲಾಶೀರ್ವದಿಸೆ ಭೀಮಾಂಬೆ
ಪಡೆಯಬೇಕಾಂ ಪುತ್ರ ಸಂತತಿ
ಪಡೆಯುವದು ನಿಜವೆಂದು ಸುಗ್ಗಲೆ
ಪೊಡೆಯು ರೇವಣನಂದು ತಡಹಿದ ತೆರದಿ ಶಿವಶರಣ ॥ ೫೨ ॥

ವರದ ಹಸ್ತವನುರದಿ ಎಳೆಯಲು
ಹರುಷವಾಗುತಲಾಗ್ರಜಾನುಜೆ
ಭರದಿ ಶಿವಲಿಂಗೇಶನಡಿಗಂ ಬಾಗುತಪ್ಪಣೆಯ
ವೆರಸಿ ತಮ್ಮಯ ಪುರಕೆ ಪೋಗುತ
ಲಿರದೆ ಮಹಿಮರ ವಾಕ್ಯದಂದದಿ
ತರುಳನನೆ ಪ್ರಸವಿಸಲು ಪುರ ಜನ ಸ್ತುತಿಸೆ ಶಿಶುವಿಗೆ ॥ ೫೩ ॥

ಇಟ್ಟು ಶರಣರ ನಾಮ ಕೆಲ ಕಾ
ಲ್ಬಿಟ್ಟು ತರುಳನ ಜಡೆಯನಿಳುಹಲು
ಮುಟ್ಟಿ ಮನ ಹಿಪ್ಪರಗಿ ಪುರಕಂ ಗುರುವಿನಂ ಕೂಡಿ
ಅಟ್ಟಹಾಸದಿ ಬರುತ ಶರಣನ
ಶ್ರೇಷ್ಠ ಪದವಂ ಕಂಡು ಮೂವರು
ನಿಷ್ಠೆಯಿಂ ಸ್ತುತಿಸಿದರು ಸರ್ವಜ್ಞಾನ ಸಂಯಮಿಯೆ ॥ ೫೪ ॥

ನಿನ್ನ ದರ್ಶನ ವರದ ವಾಣಿಯು
ನಿನ್ನ ಹಸ್ತಸ್ಪರ್ಶನಂ ಮೇ
ಣ್ನಿನ್ನ ಶಾಂತಾಕಾರ ಮನಸುಂ ನಯನ ಪದ ಪರುಷ
ನಿನ್ನ ದಿವ್ಯತರ ಪ್ರಸಾದವ
ನೆನ್ನ ಭಗಿನಿಯು ಸವಿದ ಫಲವೀ
ಚಿನ್ನನೆನುತಂ ಶರಣ ಪದಕಂಪಾಕಿ ಕರಮುಗಿದು ॥ ೫೫ ॥

ನೀನೆ ಪ್ರಮಥಗಣಾಗ್ರಗಣ್ಯಂ
ನೀನೆ ಮಹಿಮಾ ಗಣ್ಯ ಪುಣ್ಯಂ
ನೀನೆ ಮನು ಮುನಿ ದೇವ ಮಾನ್ಯಂ ಶೈವ ಸುಖ ತಾಣಂ
ನೀನೆ ಭುವನತ್ರಯಕೆ ಧನ್ಯಂ
ನೀನೆ ಭೂತದಯಾವರೇಣ್ಯಂ
ನೀನೆ ಮುಕ್ತ್ಯಾಂಗನೆಯ ರಮಣಂ ಬ್ರಹ್ಮಚೈತನ್ಯ ॥ ೫೬ ॥

ನಿನ್ನ ಪಾಂಗಂ ಕಾಮಧೇನುಂ
ನಿನ್ನ ವರಕರ ಕಲ್ಪಭೂಜಂ
ನಿನ್ನ ಚರಣಾಬ್ಜಾಳಿ ಚಿಂತಾಮಣಿಯ ಸಂದಣಿಯು
ನಿನ್ನ ವಾಕ್ ಸುಸಿದ್ಧರ ಸಮಡು
ನಿನ್ನ ಕೃಪೆ ಕೈವಲ್ಯ ದ್ವಾರವು
ಸನ್ನುತಾಮಳ ದೇವಗುಣ ಶಿವಲಿಂಗ ಶ್ರೀ ಶರಣ ॥ ೫೭ ॥

ಮೊದಲು ಬಹು ಜನ್ಮಗಳೊಳಿಸಗಿದ
ವಿದಿತ ಘನ ಪುಣ್ಯ ಪ್ರಭಾವದಿ
ಪುದಿದ ಸಲೆ ನಿನ್ನಂತಃಕರುಣದ ಪಾಂಗ ದೃಷ್ಟಿಯದು
ವದವಿ ಕೈಸಾರ್ದೆನ್ನ ಭಗಿನಿಯ
ಉದರದಿಂ ಸಂತಾನ ಲಭಿಸಿತು
ಸದಯ ಗುರು ನೀನೆನುತ ನುತಿಸಿದನಾಗ ಮಲ್ಲಾಖ್ಯ ॥ ೫೮ ॥

ಏನು ಮಲ್ಲಪ್ಪಾಖ್ಯ ಎನ್ನನು
ನೀನು ಪೊಗಳುವವೇಕೆ ಸುಮ್ಮನೆ
ಜ್ಞಾನಿ ಪ್ರಮಥ ಗಣಾರ್ಯರೊಳಿಗ ದಾಸ ಪಡಿದಾಸ
ದೀನನಾದೆನ್ನಲ್ಲಿ ಲೇಸಿ
ಲ್ಲಾ ನಿರಘ ಗುರು ಪೊರೆದನವನಂ
ಧ್ಯಾನಿಸೆಂದೊರೆದಾತನಂ ಸಮ್ಮತಿಸಿದನು ಶರಣ ॥ ೫೯ ॥

ಬಳಿಕಲಾ ಬಾಡಬನು ಶರಣನ
ನಳಿನ ಪದಕೆರುಗುತ್ತ ಮಹಿಮನೆ
ತಿಳಿಯೆ ಮಮಕರ್ಮಂಗಳುಂಮಳ ಸ್ಮರಿಸುತ ದೇವಾ
ತಿಳುಹಿ ಕೃಪೆಯಿಂ ಸಲಹಬೇಕೆಂ
ದೆಳಸಿ ಮನವಾಸಿಸುವನೆಂದಾ
ಮಲ ಪರಾತ್ಮನ ಮೊರೆಪೊಗಲು ಘನಕರುಣ ಹೃದ್ಗತನು ॥ ೬೦ ॥

ಹುಟ್ಟಿದರೆ ಸಾವಿಲ್ಲದಿಹ ಬಲು
ಬಟ್ಟೆಯನು ಸಾಧಿಸಲು ಬೇಕದು
ನೆಟ್ಟನಳವಡದಿರ್ದಡೀ ತನು ಬಿದ್ದ ಬಳಿಕಿನಲಿ
ಹುಟ್ಟದಿಹ ಲಿಂಗಾಂಗದರಿವನು
ಸೃಷ್ಟಿಯೊಳು ಸಾಧಿಪುದಿದುತ್ತಮ
ಮಟ್ಟಿ ಲಿಂಗವ ಪೂಜಿಪೀ ಕಷ್ಟದಲಿ ಫಲವೇನು ॥ ೬೧ ॥

ನಾಶವಾಗದ ಸುಖದ ಪದವಂ
ನಾಸಿಸಲು ಬೇಕಾರುಮಾದಡು
ಲೇಸುಬಗೆಯದಲೇಸು ಪಾರ್ಥಿವಲಿಂಗ ಪೂಜಿಸಲು
ಘಾಸಿಯಾಗದು ಬಿಡದು ಜಗವೀ
ಮೋಸ ತಿಳಿಯದೆ ಕರ್ಮ ಕೋಟಲೆ
ಗಾಸಿ ಸುತ ಭ್ರಮೆಯಿಂದ ಜಡರು ವಿವೇಕವನ್ನುಳಿದು ॥ ೬೨ ॥

ಮಿಥ್ಯ ಸುಖಕಾಸಿಸುತ ಮನುಜರು
ಮಿಥ್ಯವಾದೀ ಕಾಮ್ಯ ಕರ್ಮದಿ
ಮತ್ತೆ ಶರೀರವ ಮುಡಿಸಿ ಬಹುತರ ಸುಕೃತವಂ ಪಡೆದು
ಪೃಥ್ವಿಯೊಳು ಮತ್ತೊಂದು ದೇಹವ
ಪೊತ್ತು ಭೋಗವನುಂಡು ಬಳಿಕದು
ಮತ್ತೆ ನೀಗುತ ಮೊದಲಿನಿರವಂ ತಪ್ಪದಲೆ ಕೆಡುವರ್ ॥ ೬೩ ॥

ಶರೀರವಾನೆಂದರಿದ ಪಾಮರ
ಶರೀರದಿಂದುಂ ಕಾಮ್ಯ ಕರ್ಮವ
ವಿರಚಿಸನುಮೀ ಶರೀರವಾನಲ್ಲೆಂದ ಸುಕೃತಾತ್ಮ
ಶರೀರ ಭೋಗಕ್ಕಾಗಿ ಕರ್ಮದಿ
ಬೆರೆಯುದಿಹ ನೀ ಕಾಮ್ಯ ಕರ್ಮವ
ವಿರಚಿಸುವನೈ ಶರೀರದಾ ಭೋಗಾಭಿಮಾನಿಯು ತಾಂ ॥ ೬೪ ॥

ಭೋಗದುಬ್ಬಿನೊಳಿರುವ ಕಷ್ಟವ
ಸಾಗಿ ಬರಲದಲೆಕ್ಕಿಸದಲಿಹ
ಭೋಗದಿಂ ತೀರುವನು ಮರೆಯುನು ಪುಣ್ಯಮದು ಭೋಗಿ
ಭೋಗಮಂ ಬಯಸದಲೆ ಪರಶಿವ
ಯೋಗಮಂ ಪಡೆಯುತ ವಿವೇಕದಿ
ನೀಗುತಿಹ ಪರ ಸತ್ಸುಖಾತ್ಮರುಮಾಗಿ ಬೆಳಗುವರು ॥ ೬೫ ॥

ಭುವನದೊಳು ವನಿತಾದ್ಯಖಿಲ ಭೋ
ಗವನುಪೇಕ್ಷಿಸದಗಣಿತ ಗುಣಾ
ರ್ಣವ ಸುಖಾನ್ವಿತ ನಿತ್ಯಸಲೆ ಪದಮಿದನು ಪೊದಗಿಸದೆ
ಕವಿದ ಮೋಹದಿ ಪಚ್ಚಮಣಿ ಸಮು
ಹವನು ತ್ಯಜಿಸುತಲಾ ಪಸುರ್ಗಾ
ಜವನುಪೇಕ್ಷಿ ಪರಜ್ಞರೆಂದವರೊರೆದೊಡಂ ಬಡಿಸೆ ॥ ೬೬ ॥

ಕಾಡಿನೊಳು ಕಲ್ಮುಳ್ಗಳಂ ತುಳಿ
ದಾಡುತಂ ಚರಿಸಾಡುವಾತಗೆ
ನಾಡೆ ಸುಪಥವ ಪಿಡಿಸಿದಂತೀ ಶರಣನುಪದೇಶ
ಗಾಢನಾ ಕರ್ಮಾಭಿಲಾಷೆಯ
ಪೋಡಿಸುತ ನಿಃಕಾಮ್ಯ ಕ್ರಿಯಸುಧೆ
ಯೂಡಿಸಿದ ಶರಣರ್ಕಳೊಡನಾಟವದು ಶಿವಕೂಟ ॥ ೬೭ ॥

ಕತ್ತೆ ಬಲ್ಲುದೆ ಕುಸುಮ ಕಂಪಂ
ಮುತ್ತು ಬಲ್ಲುದೆ ಮರ್ಕಟಂ ಶುನಿ
ಮತ್ತಗಜ ಶಕ್ತಿಯನು ಬಲ್ಲುದೆ ತೊತ್ತು ಭೃತ್ಯನು ನಾಂ
ಚಿತ್ತಜಾಂತಕ ಶರಣವೃತ್ತಿಯ
ನೆತ್ತಬಲ್ಲೆನು ಮಿಥ್ಯಕರ್ಮಾ
ಸಕ್ತ ಕುಮತಾಜಾತ ಮದಿರಾಮತ್ತ ಮಾನಸನು ॥ ೬೮ ॥

ಜಲ ನಿಧಿಯ ಸಮ್ಮುಖದಿ ಪಲ್ವಲ
ಬಲು ಮುರಕಮಾಳಂತೆ ದಿನಮಣಿ
ಲಲಿತ ಕಿರಣಗಳೆದುರಿನಲಿ ದೀವಟಿಗೆ ನರ್ತನೆಯ
ನಲಿದು ಮಾಳ್ಪಂದದೊಳು ಶಿವಪದ
ಶುಲಭ ಶರಣನೆ ನಿನ್ನೊಳಿನ್ನಯ
ಬಲುಮೆ ತೋರ್ದಡೆ ಮೆರೆದಪುದೆ ಬಲು ಡಾಂಭಿಕನು ಕ್ಷಮಿಸೈ ॥ ೬೯ ॥

ಆವ ಜನ್ಮದ ಪುಣ್ಯವೋ ಮ
ತ್ತಾವ ದೇವರ ಕರುಣವೋ ತವ
ಪಾವನಾಂಘ್ರಿಯ ದರ್ಶನಂ ಭವನಾಶದುಪದೇಶ
ಭಾವ ಶುದ್ಧಿಗಳೊದಗಿದವು ಗುರು
ದೇವ ಕೊನೆಗೇ ಸತ್ಯ ಸುವಿಚಾ
ರಾವಲಂಬನನಾದೆನೆನುತಂ ಪೊಗಳ್ದುಬಾಡಬನು ॥ ೭೦ ॥

ಭೋ ಶರಣ ಶಿವಲಿಂಗ ಗುಣಮಣಿ
ಈ ಸುಬೋಧೆಯನರಿಯದಿರ್ದು ದು
ರಾಸೆಯಿಂದಂ ಕಾಮ್ಯ ಕರ್ಮದಿ ಘಾಸಿಯಾಗುವನಂ
ಘೋಷಿಸಿದ ನಿನ್ನೋಪಕಾರವ
ನೇಸು ಜನ್ಮದೊಳ್ಮರೆದಪೆನೆ ಘನ
ಶ್ರೀಶ ಶರಣನೆ ನೀನೆ ಗುರುವರನೆಂದು ಪದಕೆರಗಿ ॥ ೭೧ ॥

ಶರಣರೊಚನವೆ ಹರನೊಚನಮೆಂ
ದರಿದವಗೆ ನಿರ್ವಾಣ ಪದ ಜವ
ಕರವಶವು ಶಿವಶರಣ ನರನೆಂದರಿದ ಪಾಮರನು
ಪಿರಿಯ ನಿರಯಂಗಳೊಳು ಮುಳುಗುತ
ಚರಿಸುತಿಹ ಪರ ತೀರ ಕಾಣದೆ
ತಿರಗುವನು ಭವಗಳೊಳು ಶಾಶ್ವತ ಸತ್ಯ ಶಿದ್ಧಾಂತ ॥ ೭೨ ॥

ಎಂದು ಪರಿಪರಿ ಸ್ತುತಿಸಿ ಮೂವರು
ಇಂದುಧರ ಶರಣೇಶನಪ್ಪಣೆ
ಯಿಂದ ತಮ್ಮಯ ಪುರಕೆ ಪೋದರುಮಿತ್ತ ಶಿವಶರಣ
ಎಂದಿನಂತೆಯು ತನ್ನ ಕಾಯಕ
ಚಂದ ನಡೆಸುತ ಶೈವ ಸಾಮ್ರಾ
ಜ್ಯಂದದೊಳು ಪರಿಣಮಿಸುತಿರ್ದನು ಹಿಪ್ಪರಗಿ ಪುರದಿ ॥ ೭೩ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀ ಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ದ್ವಾದಶ ಸುಸಂಧಿ ॥ ೭೪ ॥

ಅಂತು ಸಂಧಿ ೧೨ಕ್ಕಂ ಪದನು ೧೦೧೧ಕ್ಕಂ ಮಂಗಲಮಹಾ ಶ್ರೀ ಶ್ರೀ

# ಸಂಧಿ ೧೩

ಕ್ಷಾಮ ಕಾಲದಿ ಸ್ವಾಮಿ ಕಾಯಕ
ನೇಮ ನಡೆಸುತ ಬಂದ ಜಂಗಮ
ಸ್ವಾಮಿಯನು ತೃಪ್ತಿಸುತ ಪರಸುಖದಿರ್ದನನವರತಂ ॥ ಪಲ್ಲ ॥

ಐದು ಮುಖವಿರ್ಪೈದು ಲೋಚನ
ಮೈದು ಭಾಳಡೊಳುರಿವ ಕಂಗಳು
ಮೈದು ಸಹಿತಿದ್ದೆ ಸೆವಸಲೆವಿರ್ಪೈದು ಬಾಹುಗಳು
ಅದೈದು ತತ್ವವನು ಬೆರದೀ
ರೈದು ಮತ್ತೊಂದಧಿಕ ತತ್ವವ
ನೈದೆ ಮೆರೆದಿಹ ಮೂರ್ತಿ ಶಿವಪುರ ತುಂಗ ಶಿವಲಿಂಗ ॥ ೧ ॥

ನಿತ್ಯ ನೈಪರ ಕಾಯಕದಿ ದುಡಿ
ಯುತ್ತಲಿರಲದರಿಂದ ಸಂಬಳ
ಪತ್ತು ಬಿಲ್ಲಿಯು ಶಾಯಿ ದೊರೆಯಲು ಗಂಜಿ ಜೋಳವನು
ಚಿತ್ತದಲಿ ನಲುವೇರಿತರೆ ಮು
ವೆತ್ತು ಮಾತೆಯು ಮೂರು ಭಕ್ಕರಿ
ಯರ್ಥಿಯಿಂ ಗೈವುತ್ತ ಸಮಯಾಚಾರ ಮೂರ್ತಿಯನು ॥ ೨ ॥

ಬರಿಸುತವರನ್ನುಣಿಸಿ ಮಿಕ್ಕಿದ
ವರ ಪ್ರಸಾದವ ತಾನು ಮಾತೆಯು
ಹರುಷ ಮನದಿಂದುಂಡು ಹರಗೋಷ್ಟಿಯಲಿ ಕಾಲವನು
ಜರುಗಿಸುತ್ತಿರಲೊಂದು ದಿನ ಶಿವ
ಚರನು ಮಾಪುರ ಭಕ್ತ ಮಂದಿರ
ತಿರುತಿರುಗಿ ಬೇಸತ್ತನದನಂ ಶರಣ ಶಿವಲಿಂಗಾ ॥ ೩ ॥

ತಿಳಿದು ತನ್ನಯ ಜ್ಞಾನ ದೃಕ್ಕಿಂ
ದೊಳಗೆ ಕುದಿಯುತ ಶರಣನಿರೆ ತವ
ನಿಳಯಕೈದುವ ಮೂರ್ತಿ ಬರುತಂ ತೃಪ್ತಿಸುತ ಪೋಗೆ
ಬಳಿಕ ತನಯನ ಕರೆಯೆಲೊಂದಿನಿ
ತಲಸು ನೀನೌ ಏಕೆ ದೇವರು
ಇಳೆಯೊಳಂದು ಭಿಕ್ಷ ತಂದಿರಲೆಲ್ಲರತಿ ಕಷ್ಟ ॥ ೪ ॥

ಬಡುತಲಿದ್ದರು ಚರರು ಭಕ್ತರ
ಗೊಡವೆಯುನ್ನವನುಣುವ ಆಶೆಯು
ಪಿಡಿದು ಚರಿಪರು ಏನು ಗೈವುದ್ಯುವದಿಂದು ಚರನೋರ್ವ
ಕಡು ಹಸಿದು ಕಂಗೆಟ್ಟು ಮನೆ ಮನೆ
ಬಿಡದೆ ತಿರಗುವನೋರ್ವನವನನು
ಸಡಗರದಿ ಕರದುಣಿಸದಿಹರಿದಕೇನು ಗತಿ ಮಾತೆ ॥ ೫ ॥

ಗತಿಯು ಮತೇಸ್ ಶಿವನೆ ಗತಿ ಬಾ
ಹಿತದಿ ನೀನುಣು ತಮ್ಮ ಬಾಬಾ
ವಿತತ ಸಮಯಾಚಾರ ಮೂರ್ತಿಗಳೂಟವಾಗಿದೆ ಬಾ
ಮತಿಯು ತಮ್ಮತ್ತೇಕೆಯುಣಬಾ
ಸತತ ಜಂಗಮ ಕಾಟವಿದೆ ಯೆಂ
ದತಿಶಯೋಕ್ತಿಯನಾಡೆ ಜನನಿಯಳಿಂದುಮೀರ್ವರದು ॥ ೬ ॥

ಊಟವಿಲ್ಲೌ ಏಕೆ ಚರನುಳಿ
ದೂಟ ಗೈವದು ಭಕ್ತ ಶರಣರ
ಮಾಟವಲ್ಲವು ನಿನ್ನನನ್ನೊಪ್ಪತ್ತಿನಾಹರವನು
ಶ್ರೇಷ್ಠ ಜಂಗಮಕೀಯೆ ಶಿವಸುಖ
ಬೇಟವೆನಲದ ಕೇಳಿ ಮಾತೆಯು
ಸಾಟಿಯೆನಲನತರಲಿ ಶರಣನ ಗೃಹಗೆ ಚರವರನು ॥ ೭ ॥

ಬರಲು ಹಸಿದಿಹೆನೆನುವ ಮುನ್ನವೆ
ಇರಿಸುತಾಸನ ತೊಳೆದು ಚರಣವ
ಶರಣನಾಗಳೆ ತನ್ನ ಪಾಲಿನವೊಂದು ಭಕ್ಕರಿಯು
ಚರಗೆ ನೀಡಲು ಮುಂದುಮಿನ್ನೊಂ
ದಿರುವದೇ ಕೊಡು ಎನಲು ತಾಯಿಯು
ದಿರುವ ಪಾಲಿನವೊಂದು ನೀಡಲು ಸವಿದು ನುಚ್ಚುಂಟೇ ॥ ೮ ॥

ಇಲ್ಲವೆನೆ ನಿನಗರಿದೆ ಜನನಿಯು
ಕಲ್ಲ ಪಾಯಸಗೈದು ವೋಡಿಸೊ
ಳಲ್ಲೆ ಮಡುಗಿಹಳೆನಲು ಸೂವರ್ಣಾಂಬೆಯುದು ಕೇಳಿ
ಸಲ್ಲದೆಂಜಲ ಜಲದಿ ಶೀತನಿ
ಕಲ್ಲ ಪಾಯಸಗೈದುದನಂ
ಬಲ್ಲದಿಹ ಶಿವಲಿಂಗನಿಲ್ಲೆಂದ ಸ್ವಾಮಿಗಳೆ ॥ ೯ ॥

ತಿಳಿಯೆ ಜಲವದು ಮುಚ್ಚದೆಂಜಲು
ಹುಳಗಳೆಂಜಲು ಕಾಳುಕಡಿಗಳು
ಚೆಲುವ ಗೋಕ್ಷೀರವದು ಕರುವಿಂದೆಂಜಲಾಗಿಹವು
ಫಳನಿಕರವವು ಪಕ್ಷಿಯಂಜಲು
ಮಿಳಿಯೊಳಾವುದು ವೀಸಲಿಲ್ ಶಿವ
ನಿಲವು ಸಾಧಿಪ ಶರಣ ಮನ ಮೀಸಲವು ನೀಪನಲು ॥ ೧೦ ॥

ಮಾತೆಯಿಂ ಕೈಕೊಂಡು ಶಿವಲಿಂ
ಗೋತು ನೀಡಲು ಸವಿದು ಸ್ವಾಮಿಯು
ಸಾತಿಶಯದಿಂ ಪೇಗುಬಿಡುತ್ತೊರವಳಯವಲಿ ಬಂದು
ಕೂತುಕೊಳ್ಳಲು ಶರಣ ಮುಂಗಡೆ
ಕೂತಿರಲು ಮಮತನಯ ಚರಣವ
ನೀ ತಳುವದಲೆ ಸೇವಿಸ್ಯೆ ಲಟಪಟಿಸುತಿವೆ ನೋಡು ॥ ೧೧ ॥

ವೃದ್ಧ ನೀ ಬಲು ಶುದ್ಧ ಜಗ ಪ್ರ
ಸಿದ್ಧ ದೇವನು ಬದ್ಧ ಭವಹರ
ಮುಗ್ಧ ಭಕ್ತ ಪ್ರೀತಯುಗ ಜುಗದಿದ್ದ ಮೂರುತಿಯೆ
ಸದ್ದಯಾಸಿಧಿ ಸಿದ್ಧಯಮಿ ಜನ
ಸಾಧ್ಯ ಸುಗುಣಾರಾಧ್ಯ ಚರ ಸಂ
ವೇದ್ಯ ನಿರ್ಗುಣ ಬೋಧ್ಯನೆಂದು ಪರಾಮಶಿಸುತಿರಲು ॥ ೧೨ ॥

ಗುರುತು ಹತ್ತಿತೆ ಶರಣ ಸ್ವಾಮೀ
ನಿರವಯವನೀನಿರ್ದು ಭಕ್ತರ
ಪೊರೆಯಲೋಸುಗ ಸಗುಣ ರೂಪವನಾಂತ ಘನಮೂರ್ತಿ
ಚರವರಂ ನೀನೆಂದು ನಗುತಿರೆ
ಹರಿಸಿ ಶರಣನೆ ನಿನ್ನ ಹಸ್ತವು
ಪರುಷವಾಗಲಿ ಬರುವೆನೆನುತ್ತೊರಟ್ಟೊರಗೆ ಸಾಗಿದನು ॥ ೧೩ ॥

ಇತ್ತ ಶರಣನು ತನ್ನ ಮಾತೆಗೆ
ಸತ್ಯ ಚರವರ ವಾರ್ತೆ ಬೀರುತ
ಲತ್ಯಧಿಕವಾನಂದದಿಂ ಪಸು ಮರೆತು ಕುಳಿತಿರಲು
ತತ್ತನುಜರಿಗೆಯುಣಿಸುವಾಸ್ಯೈ
ಮಿತ್ಯ ಶಿವ ಜಂಗಮನು ತಾ ಚರಿ
ಸುತ್ತಲಮೃತರಾಯ ಗೌಡನ ಮನೆಗೆ ಬರಮಾಡಿ ॥ ೧೪ ॥

ಭವತಿ ಬಿಕ್ಷಾಂದೇಹಿ ಎಂದೆನೆ
ಶಿವಚರಾರ್ಯನ ಕಂಡು ಗೌಡನು
ಸ್ತವನ ಗೈಯ್ಯುತ ಶಿವಶಿವಾ ಚರ ದೇವನೆಂದಂದು
ಜವದಿ ನಮಿಸುತ ಪೇಳಿಕೊಂಡನು
ಭುವನ ರುದ್ರನೆ ನಮ್ಮ ಗೃಹದಲಿ
ಸವಿದು ಪ್ರಾಸಾದವನುಮಲ್ಲಿಂ ಕಾಂತಿ ಭಿಕ್ಷವನಂ ॥ ೧೫ ॥

ಗ್ರಾಮದೊಳು ಗೈಯ್ಯುವದುಮೆಂದನೆ
ಗ್ರಾಮ ಪತಿತವ ನೇಮವಿಹುದೇಂ
ಸ್ವಾಮಿಯೇ ಇಲ್ಲಿಲ್ಲ ಪ್ರೇಮಾಸ್ಪದರು ಬಂದಿಹರು
ಧಾಮದೊಳು ಭಕ್ಷಾದಿ ಪಾಯಸ
ಮಾಮಿಡಿಯ ಶ್ರೀಕರಣೆ ಘೃತಪಯು
ವಾಮಹ ಷಡ್ರಸ ಪದಾರ್ಥಗಳನಿತು ಗೈದಿರಲು ॥ ೧೬ ॥

ಚರರೆ ತಮಗರ್ಪಿತವ ಗೈಯ್ಯದೆ
ಹರನ ಭಕ್ತರು ಭುಂಜಿಸಲು ಘನ
ದುರಿತವಲ್ಲವೆಮಹುನು ಭಿಕ್ಷದ ಹೊರ್ತು ನಾವೆಂದು
ಪರರ ಗೃಹದಲಿ ಉಣುವದಿಲ್ಮೇ
ಣ್ಮರಳ ತರಳಿಯುರೀರ್ವರನ್ನುಳಿ
ದರರೆ ನಾನೆಂತುಣಲಿ ಗೌಡರೆಮವರು ಎಲ್ಲಿಹರು ॥ ೧೭ ॥

ಇಲ್ಲೆ ಶಿವಲಿಂಗಪ್ಪ ಶರಣರ
ಸಲ್ಲಲಿತ ಗೃಹದಲಿ ಇರ್ವರು
ನಿಲ್ಲದಾಂ ಬಿಕ್ಷವನು ಕೈಕೊಂಡೊಡನೆ ತೆರಳುವದು
ಇಲ್ಲವಾದರೆ ಈರ್ವರುಪವಾ
ಸಲ್ಲೆ ಕೂಡ್ರುವರೆನಲು ಗೌಡನ
ಬಲ್ಲ ತಾಯಿಯು ಪಾರಾಬಾಯಿಯು ಕೇಳಿ ತಕ್ಷಣದಿ ॥ ೧೮ ॥

ಗೃಹಿಸುತಂ ಮಾ ಅಮೃತರಾಯನೆ
ಮಹಿಳೆ ಭಂಗಾರೆಮ್ಮ ಶರಣರು
ಮಹಿಮರಿವರಾತ ನುಜರೀರ್ವರು ನಾಲ್ವರೆಡೆಮಾಡಿ
ಬಹುತ್ಸರಂ ನೀ ಕಳುಹಿಸಲು ಬಲು
ವಿಹಿತ ಸ್ವಾಮಿಗಳಿಲ್ಲೆಯುಣ್ಣಲಿ
ಆಹುದು ಜನನಿಯಳೆಂದು ಎಡೆ ಪಾತ್ರೆಗಳ ಸಿದ್ಧಿಸಲು ॥ ೧೯ ॥

ನೋಡಿ ಶಿವಚರ ಮೂಡಿ ನಗೆ ಜವ
ಮಾಡಿ ನಾನೈದು ಮನೆ ಬಿಕ್ಷವ
ಬೇಡಿ ಬಹೆನೀಗೆಂದು ಪೋಗಲು ತಮ್ಮ ಸೇವಕನಿಂ
ಗಾಢನಾ ಎಡೆ ಪಾತ್ರೆಗಳನಂ
ನಾಡೆ ಶರಣರ ಗೃಹಕೆ ಕಳುಹಲು
ನೋಡು ಭಂಗಾರೆವ್ವ ದೇವರು ಕಳುಹಿದೆಡೆ ನೋಡು ॥ ೨೦ ॥

ನೀನು ಗಂಜಿಯು ಜೋಳ ಭಕ್ಕರಿ
ದಾನಿಸಲು ಶಿವ ತಾನು ಪಾಯಸ
ಬೋನ ಹೋಳಿಗೆ ಶೀಕರಣೆ ಘೃತ ಪಂಚ ಪಕ್ವಾನ್ನ
ನೂನವಿಲ್ಲದೆ ಕಳುಹಿದನು ಎನೆ
ಜಾಣ ಮಾತೆಯು ಹರುಷಿಸಲು ಗುಣ
ವಾನ ಶರಣನು ನಕ್ಕುಮಿದನುಣ್ಣುವರು ಜೇರಿಹರು ॥ ೨೧ ॥

ಆರು ತಮ್ಮಾ ಸಾರು ಮೈದರಿ
ಗೂರ ಭಕ್ತರು ಹತ್ತು ಜನವಿದೆ
ದಾರಿಯಿಂ ಪೊರಟಿಹರುಮವರಂನುಣಿಸಬಹುದೌ ನೀಂ
ಸಾರು ಮಹಂತನ ಬೇಗದಿಂ ಕರ
ತಾರೆನಲು ಬಂದವನು ಶರಣನ
ಚಾರುಪದಕಂ ನಮಿಸುತೇನಪ್ಪಣೆಯುಮೆನೆ ಜವದಿ ॥ ೨೨ ॥

ಇರಿಸು ಆಸನ ತಾಟು ತಂಬಿಗೆ
ಬರುವವರಾರೈ ಭಕ್ತ ಮಂಡಳಿ
ಇರುವರೆಲ್ಲೆನೆ ಕಾಸಬಾಗದಲಿಹರು ಕರೆ ಎನಲು
ಭರದಿ ಪೋಗೆವನೋಡಿ ಕೇಳಲು
ಶರಣರ ಸುಪದ ದರ್ಶನೋಸುಗ
ಬರುವದಾಯ್ತೆಂದವನ ಬೆಂಬಲವಾಗಿ ಬರಿದವರು ॥ ೨೩ ॥

ನಮಿಸಲಾಶೀರ್ವದಿಸಿ ಭಕ್ತರೆ
ಶ್ರಮುವನಾಂತಿರಿ ಮಿವರದೆಶೆಯಿಂ
ವಿಮಲ ಮಾನಸರೇಳಿ ಶಿವ ಪ್ರಾಸಾದ ಕೈಕೊಳ್ಳಿ
ಸುಮನ ಶಿವ ಸನ್ನಿಧಿಗೆ ಕಾರಣ
ತಮವ ಕೆಡಿಸುವದೆಂದು ಬೋಧಿಸಿ
ಕ್ರಮದಿ ಭೋಜ್ಯವ ನೀಡಲೆತ್ನಿಸಲನಿತಕಾವೋಣೆ ॥ ೨೪ ॥

ಸಣ್ಣ ಬಾಲರು ನೆರೆದು ಭಜನೆಯ
ಬಣ್ಣದಲಿ ಕುಣಿಯುತ್ತ ಶರಣನ
ರೇಣ್ಕ ಮುತ್ತಯ್ಯಗಳ ಮಠದಲಿ ಹೋಳಿಗಿವೆ ಇಂದು
ಉಣ್ಣಿಸುವ ನಡಿರೆಂದು ಬರಲಾ
ಚಿಣ್ಣರನು ಕಂಡುಬ್ಬಿ ಕೂಡ್ರಿಸಿ
ತನ್ನ ಕರದಿಂ ನೀಡಿ ಸರ್ವರ ತೃಪ್ತಿಸುತ್ತಿರುವ ॥ ೨೫ ॥

ಸಮಯದಲಿಯಾ ಪ್ರಮುಖ ಪುರಪತಿ
ಯಮಮ ಚರನೈದು ಮನೆ ಭಿ
ಕ್ಷಮದುಗಡ ಕೊಂಡೀಗಬಹನೆಂದಾಡಿತಾನೆತ್ತ
ಗಮುಗೈದನೊ ಎಂದು ಚಿಂತಿಸಿ
ಸಮತವಾಗದೆ ತಾನೆ ಪುಡುಕು
ತ್ತಮಲ ಮಾನಸ ಶರಣ ಗೃಹಕಂ ಬಂದು ನೋಡಲ್ಕೆ ॥ ೨೬ ॥

ಪಂಕ್ತಿ ಕೂತಿದೆ ಸಂತ ಶರಣನು
ಸ್ವಂತ ತಾನೇ ಬೆಳಸಿಕೊಡುತಿಹ
ಮಾಂತ ನೀಡುವನದನು ಕಾಣುತ ಗೌಡ ಬೆರಗಾಗಿ
ಶಾಂತ ಶರಣರೆ ನಿಮ್ಮಾಶ್ರಮದೊಳು
ಮಂತಕಾರಿಯ ರೂಪ ಚರಮ
ತ್ತಂತನಯರವರೀರ್ವರಿಹರೇನೆಂದು ಕೇಳಲಿಕೆ ॥ ೨೭ ॥

ನಕ್ಕು ಶಿವಲಿಂಗಾರ್ಯ ಹರುಷವ
ದುಕ್ಕಿ ಗೌಡರೆ ನಿಮ್ಮ ಗೃಹದೊಳು
ಸೌಖ್ಯ ಶಿವಚರಮೂರ್ತಿ ಪಾದವು ಬಂಮು ತೋರಿದವೇ
ದೃಕ್ಕು ದರ್ಶನದುದ್ಧರಾದಿರಿ
ಮಿಕ್ಕ ಮಾತಿನ್ನೇನವಂ ತಾ
ಸಿಕ್ಕಲಾರನುಮಿನ್ನು ನಿಮ್ಮಯ ದುಃಖಪೋಯಿತಲಾ ॥ ೨೮ ॥

ಎಂದು ಮಹಾನಂದಾಶ್ರು ಸುರಿಸುತ
ಹಿಂದಣದ ವೃತ್ತಾಂತ ಪೇಳುತ
ಸಂದ ಭಕ್ತರ ಪಂಕ್ತಿಯಲಿಯುಣನೀಡೆ ತೃಪ್ತಿಸುತ
ತಂದೆ ನಿಮ್ಮಿಂದೆನ್ನ ಜನ್ಮವು
ಮಿಂದು ಸಫಲಾಯ್ತೆಂದು ಮಿಗೆಯಾ
ನಂದ ಶರಧಿಯೊಳಾಳುತಂ ಮನದಣಿಯೆ ಸ್ತುತಿಸಿದನು ॥ ೨೯ ॥

ನಾಲ್ಕು ಜನರಿಗೆ ಸಾಲ್ವ ಪಾಕವ
ನೇಕಜನ ಬಾಲರಿಗೆ ನೀಡಿದ
ನೀ ಕಲಿಯೊಳಿವನರನಲ್ಲ ಶಿವಶರಣನೇ ದಿಟವು
ಸೌಖ್ಯದಿ ವರ್ಧಸ್ತ ಪ್ರಸಾದವ
ಸ್ವೀಕರಿಸೆ ಜೀವೇಶರೈಕ್ಯವು
ನಾಲ್ಕು ಪದಕರ ತಳವು ಸಿದ್ಧವುಮೆಂದು ಸ್ತುತಿಸುತಲಿ ॥ ೩೦ ॥

ಪೋದ ತನ್ನಯ ಗೃಹಕೆ ಮಾತೆಯೊ
ಳಾದ ಚರಸಾದ್ಯಾಂತ ಮತ್ತಾ
ಸಾಧು ಶರಣನ ಕರ ಪ್ರಸಾದ ಮಹಿಮೆಯಂ ಪೇಳೆ
ಸೋದಯಾದ್ಭುತಳಾಗಿ ತತ್ಕ್ಷಣ
ಕಾ ದಯಾನಿಧಿ ದರ್ಶನಂ ಕೊಂ
ಡಾದರಿಸಿ ತವ ಗೃಹಕೆ ಬರೆ ಮೈದಿರಿಗಿ ಭಕ್ತರುಗಳ್ ॥ ೩೧ ॥

ಹರುಷದಿಂ ಶಿವಲಿಂಗ ಶರಣನ
ವರ ಪ್ರಸಾದದ ಮಹಿಮೆ ಕೀರ್ತಿಯ
ಪೊರೆಯ ಕಟ್ಟುತ ಶಿರದೊಳಾನುತ ನಮಿಸುತಪ್ಪಣೆಯಂ
ವೆರೆಸಿ ಪೋಗಲ್ಕಿತ್ತಲನಘನು
ಹರಚರಾರ್ಪಿತನ್ಯೆದ ಶಾಂತಿಯ
ಪರಮ ಪರಿಣಾಮವನು ಸವಿದಿರುತಿರಲು ಮತ್ತೋರ್ವ ॥ ೩೨ ॥

ಚರನು ಕಾಯಕಗೈಯ್ಯುತಂ ಸಂ
ಚರಿಸಿ ಶರಣನ ಮಠದೊಳಿಳಿಯುತ
ಮೆರೆವ ಬಸವನ ಘಣೆಯೊಳಿರುವರಳೆಲೆಯನಂ ಕಂಡು
ಇರದೆ ಮನಸೋಲುತಲಿಯದನಾ
ರರಿಯದಂದದಿ ರಾತ್ರಿಯಲಿ ಕ
ದ್ದಿರದೆ ಮುಂಜಾವಿನಲಿ ತನ್ನಯ ಸರಕು ಸವರಿಸಲು ॥ ೩೩ ॥

ತಿಳಿದು ಶರಣನುಮೇಕೆ ಸ್ವಾಮಿಯೆ
ಘಳಿಲನೆತ್ಯೈಯ್ಯರಿಸಿ ನಿಂತಿರಿ
ಸುಳಿದು ಕಾಯಕಗ್ಯೆಯ್ಯದಲೆ ಮತ್ತೆಲ್ಲಿ ಪೋಗುವಿರಿ
ಒಳಿತುಮಿಲ್ಲವು ದೇಹದೊಳು ಬಲು
ಬಳಲಿದರೆ ಇಂದುಳಿದು ನಾಳಿನ
ಬೆಳಗಿನಲಿ ಸಂಚರಿಸಿ ಕಾಯಕ ಗ್ಯೆಯ್ಯಬಹುದಯ್ಯ ॥ ೩೪ ॥

ಬೇಡ ಶರಣನೆ ಪೋಗ್ವದೇ ಜವ
ಮಾಡಿ ಪೋದರೆ ಲೇಸು ನಿಮಗೆಂ
ದಾಡೆ ಗಾಢನೆ ಪೋಗಲಾ ಸಮಯದಲಿ ಪೂಜಕನು
ಪೌಢ ಬಸವನ ಪೂಜಿಸಲು ಬರೆ
ಮೌಢ್ಯದರಳೆಲೆಯಿಲ್ಲದುದನಂ
ನೋಡಿ ಗಾಬರಿಗೊಂಡು ಶರಣರೆ ದೇವರರಳೆಲೆಯು ॥ ೩೫ ॥

ಇಲ್ಲವೈ ಮತ್ತೆಲ್ಲಿ ಪೋಯಿತು
ಬಲ್ಲರಾರದು ದೇವ ಬಲ್ಲನು
ಎಲ್ಲಿ ಮಾತಿದುಮೆಂದು ಪುಡುಕಿದ ಸಂದುಗೊಂದಿಯನು
ಬಲ್ಲ ಶರಣನು ನುಡಿದನೆಲೆ ನೀ
ಸುಳ್ಳು ಏತಕೆ ಪುಡುಕುತಿರುವಿಯೊ
ಸಲ್ಲಿತದು ದೇವರದು ದೇವರಿಗೆನಲು ಪೂಜಕನು ॥ ೩೬ ॥

ತಿಳಿದು ನಿನ್ನಲ್ಲಿಳಿದ ಜಂಗಮ
ಕಳವು ಮಾಡೆಲ್ಲಡಗಿ ಪೋದನೋ
ಘಳಿಲನವ ಮೈದಿರಿಗಿಗೆನೆ ಕಳಕಳಿಸಿ ಜನನೆರದು
ಛಳಿಸಿಯವನಂ ತರುವದದನೆನೆ
ಬಳಿಮನಿಯ ಚಿನ್ನಣ್ಣನೆಂಬುವ
ಗಳ ಬಳನೆಯೋಡುತ್ತ ನಡೆಯಲು ಶರಣ ಬೆನ್ನಟ್ಟಿ ॥ ೩೭ ॥

ಬೇಡ ಭಕ್ತಾದೇವ ಕೊಡಲದು
ಗಾಢನಾಚರನೊಯ್ದನಲ್ಲದೆ
ನಾಡ ಮಾತಾಡಿದರೆ ಸಲ್ಲದು ಶಿವನೊಳ್ವ್ಯಾಜ್ಯವನು
ಮಾಡಲಸದಳ ಹಿಂದಿರುಗು ನಡೆ
ಕೇಡುಗ್ಯೆಯ್ಯುವನವನೆ ಕೆಡುವನು
ರೂಢಿ ರುದ್ರನು ಎನಿಸಿ ಬಸವನ ಕಾಡಿ ಕೆಡಕಾದ ॥ ೩೮ ॥

ಎಂದು ಬುದ್ಧಿಯಗಲಿಸಿ ವರಗುಣ
ಸಿಂಧು ಶಿವಶರಣೇಶ ಸರ್ವವು
ಚಂದ್ರಧಾರಿಯ ಸ್ವಯಂಲೀಲೆಯದೆಂದು ನಂಬಿರುವ
ಕುಂದು ಕುಟಿಲವು ಕಪಟ ನಿರ್ದಯ
ದ್ವಂದ್ವ ಭಾವವನಳಿದು ಜಗವನು
ಪೊಂದಿ ಪೊಂದದೆ ಇರ್ದ ಶಿಲೆಯೊಳಗಗ್ನಿ ತೆರನಂತೆ ॥ ೩೯ ॥

ಇರುತಲೊಂದಿನವುಳವಿ ಯಾತ್ರೆಗೆ
ಚರಿಸಬೇಕೆಂದೆನುತ ಯೋಚಿಸಿ
ಪುರವನುಳಿದುಂ ಪೊರಟು ಮಾರ್ಗದಿ ನಡೆಯೆ ಹಿಂಬಲದಿ
ಕರುವನೊಂದನು ಕೊಂಡು ಬರುವನ
ಶರಣನಾಗಳೆ ಕಂಡುಮಿವ ಕಟು
ಗರವನಿದನಂ ಕೊಯ್ಯಲೊಯ್ಯುವನೇನು ಮಾಡಲಿನಾಂ ॥ ೪೦ ॥

ಉಳುವಿಗ್ಹೋಗುವದೇನುಮಿದನಂ
ಉಳುಹಿಕೊಂಡರೆ ಜೀವದಿಂ ಘನ
ಉಳವಿ ಯಾತ್ರೆಯುಮಿಲ್ಲೆ ದೊರೆದಂತಾಯಿತೆನುತಾಗ
ಎಳೆಗರುವನೆಲೊ ಎಲ್ಲಿಗೊಯ್ಯುವಿ
ತಿಳಿದವನೆ ಕೊಲಲೊಯ್ವೆನ್ನೆ ನಾಂ
ಘಳಿಲನಿದ ಬಿಡು ಮುಳುವಿಕೋ ಕೊಡು ಕ್ರಯವ ನೆನಲವನಂ ॥ ೪೧ ॥

ಬೋಧಿಸುತ ಹಲವಂದದಿಂ ಘನ
ಸಾಧು ಶರಣನು ಬಿಡಿಸಿ ಕರು ತವ
ಸ್ವಾಧೀನವ ಕೈಕೊಂಡು ಹಣವಂ ನೀಯ್ಯ ಪೋಗಲ್ಕೆ
ಆ ದಯಾಂಭುದಿ ವಚನ ಪರುಷವು
ಬಾಧಕನ ಮನಕತ್ತಿ ಮುಟ್ಟಲ
ಸಾಧ್ಯ ಸೂವರ್ಣಾದ ಪರಿಕ್ರಯವಲ್ಲೆನುತ ನಮಿಸಿ ॥ ೪೨ ॥

ಶರಣಶಿವಲಿಂಗೇಶನನು ಪರಿ
ಪರಿಯ ಸ್ತುತಿಸುತ ಪೋದನಿತ್ತಲು
ಕರುಣಿ ಕರುವನು ಕೊಂಡು ತನ್ನಾಶ್ರಮಕೆ ಬರಮಾಡಿ
ಪೊರೆಯುಲದನ್ನಲವಾಗೆ ಸಂತರು
ಬರಲು ದಾನಿತ್ತವರ ಮನ್ನಿಸಿ
ಪರರಿಗುಪಕಾರವನು ಗೈಯ್ಯುತಿರ್ದನನವರತಂ ॥ ೪೩ ॥

ಇಂತು ವರ್ತನದಿರುತಲೊಂದಿನ
ಸಂತ ಶರಣನುಮೆಂದು ಬೆಳಸಿಯು
ನಂ ತಿನಿಸಬೇಕೆಂದು ವಕ್ಕಲನೋರ್ವನುಂ ತನ್ನ
ಸ್ವಂತ ಪೊಲಕಂ ಕರದು ತರಲದು
ಮುಂತೆ ತಾಂ ಬಸವಣ್ಣನೊಯ್ದು ನಿ
ವಾಂತ ಸ್ಥಲವೆಂದರಿದು ಔದುಂಬರದ ನೆರಳಿನಲಿ ॥ ೪೪ ॥

ಮಾಡುತಂ ಶಿವನಾಮ ಸ್ಮರಣವ
ಕೂಡಲನಿತಕೆ ಮಾರ್ಗದಿಂದೊ
ಬ್ಬೋಡಿ ಬರುತಂ ಬಾಡಿ ಮುಖವತಿ ಪೊಲದವನ ಕಂಡು
ಬೇಡೆ ಜಲವಂ ನೀಡಲೆಲ್ಲಿಂ
ನೋಡಿ ಬಿಂದಿಗೆ ನೀಡು ಜಲವೆನೆ
ನಾಡೆ ಕುಡಿಯುತ ಪೋದರಾವೇಂ ಕುಡಿಯಬೇಕೆನಲು ॥ ೪೫ ॥

ಕೇಳಿ ಶರಣನು ಮಿತ್ತು ಜಲವನು
ಪಾಲಿಸವನನುಮೆನಲು ಸುಗುಣವಿ
ಲೋಲ ತಮಗೆಯು ಸಾಲುವನಿತಿವೆಯಿರಲು ಕೊಡು ಎನಲಾ
ಕಾಲದೊಳು ಕುಡಿಸುತ್ತ ಕಳಪುತ
ಮೇಲು ಜಲದಾನೆಂದು ಬೋಧಿಸಿ
ಶೀಲ ಶರಣನು ಎಂದನಾತಗೆ ಇಲ್ಲಿ ಭಾವಿಯನು ॥ ೪೬ ॥

ತೆಗೆಯಬೇಕೆನಲಹುದು ಶರಣರೆ
ಹಗುರುಮೇನನಲ್ಲ ಭಾವಿಯ
ತೆಗೆಯಲಿಕೆ ಹಣಬೇಕು ನಾ ಬಲು ಬಡವನೆನ್ನಿಂದ
ತೆಗೆಸಲುಂ ವಶವಲ್ಲ ಬಿಡು ನಾಂ
ತೆಗೆಯುವೆನು ಹೊಲ ನಿನ್ನದದೆ ನೀ
ಬಗೆದು ಸ್ಥಲವಿನಿತಿತ್ತಿಯಾದರೆ ಭಾವಿ ಸಿದ್ಧಿಸುವೆ ॥ ೪೭ ॥

ಎಂದು ನುಡಿಯಲು ಕೇಳಿ ತಿಳಿಯುತ
ಮಂದ ಭಾಗ್ಯನು ನಾನು ನನ್ನಿ
ದೆಂದಿಗಾಗದು ಭಾವಿಯಿವರಿಂದಾಗುತಿರಲಾನು
ಹಿಂದುಗೆಡಿಪದಿದೇನು ಕಾರಣ
ಸಂಧಿ ಸಾಧಿಸಿತೆಂದುಮವರಡಿ
ಹೊಂದಿ ನಮಿಸುತ ತೆಗೆಯಲಪ್ಪಣೆಯೆನುತ ಬಿನ್ನೈಸೆ ॥ ೪೮ ॥

ಬಳಿಕ ಬೆಳಸಿಯ ಸವಿದು ಶರಣನು
ನಿಲಯಕಂ ಬರುತಾಗ ಚಿಮ್ಮಡ
ದಲಘುಮತಿ ಅಲ್ಲಪ್ಪನಿಗೆ ತವ ಮನದ ಯೋಚನೆಯ
ತಿಳಿಸಿ ಮರುದಿನದೊಂದು ಬಿಂದಿಗೆ
ಯೊಳಗೆ ನಿರ್ದುಂಬುತ್ತ ಪೂಜಿಸಿ
ಘಳಿನಲದ ಕೊಡಗೂಸಿನಾ ಶಿರಸದೊಳು ಪೊರಿಸುತ್ತೆ ॥ ೪೯ ॥

ಕೋಮಲಣುಗಿಯೆ ಪೊಲದ ತಾಣದಿ
ಪ್ರೇಮ ಬಂದಲ್ಲಿರಿಸು ನಡೆಯೆಂ
ದಾಮಗಳ ಮುಂದಾಗಿ ನಡೆಯುತ ಪೊಲವ ತೋರಿಸಲು
ನೇಮಿಸಿದ ಪರಿಯಂತೆ ನಾಲ್ಕೂ
ಸೀಮೆಯಲ್ಲವ ನೋಡಿ ತಂನ್ಮನ
ಕಾಮಿಸಿದ ತಾಣದಲಿ ಇಳಿಸಿದಳಾಗ ಬಿಂದುಗೆಯ ॥ ೫೦ ॥

ಕಂಡು ಶರಣನು ಬಾಗಿ ವಸುಧಿಗೆ
ದಿಂಡುಗೆಡಹುತ ಚಾಚಿ ಮೈಮನ
ಗೊಂಡು ಗುದ್ದಲಿ ಪಿಡಿದುಮಗಿಯಲು ನೋಡುತಾ ಕ್ಷಣದಿ
ದಂಡಧರ ಬೆದರಿದನುಮಿವ ಭೂ
ಮಂಡಲದ ಭವ ಬೇರನಗಿಯುತ
ಕುಂಡವೆನ್ನದು ಪಾಳುಗೆಡಹುವನೆನುತ ತಿಳಿದಂದು ॥ ೫೧ ॥

ಮತಿಯು ಮಾಸುತಲೆ
ಗತಿಯು ಶರಣನು ಎನ್ನೊಳೇನುಂ
ಕೃತಕಗೈಯ್ಯಲು ಬಾರದೆನುತಂ ಕ್ಷಮೆಯ ಬೇಡಲಿಕೆ
ಪಿತನ ಮಧ್ಯಸ್ಥನನ ಮಾಡುತ
ಕ್ಷಿತಿಗೆ ಕಳುಹಿದನೆಂಬೊಲಾ ದಿನ
ಪತಿಯು ಬಂದನು ಪೂರ್ವ ದಿಗ್ಭಾಮೆಯಳ ಗರ್ಭದಲಿಂ ॥ ೫೨ ॥

ಪೂತ ಶರಣನು ಭೂತದಯೆ ಪ
ಶ್ಚಾತ್ತಾಪಿ ತಾನೆನಿಸಿ ಗುಣನಿಧಿ
ಪಾಥಿಕರು ಪಶುಪಕ್ಷಿ ಮೃಗತತಿ ಜೀವ ಜಂತುಗಳು
ಪೋತು ಜಲಪ್ರಾಶನವಗೈಯ್ಯುತ
ಭೂತಳದಿ ಶಾಂತಿಯಲಿ ಚರಿಪುದೆ
ಸಾತಿಶಯವೆನಗೆಂದು ಭಾವಿಯ ತೋಡಲನುಗೆಯ್ಯೆ ॥ ೫೩ ॥

ಗುರುಭಕ್ತನಲ್ಲಪ್ಪನದನಂ
ನರಿದು ಶರಣರೆ ನಿಮ್ಮ ಕಾಯಕ
ನಿರುತಗೈಯ್ಯುತ ಗೃಹದೊಳಿರುವದು ಕೂಪವಿದು ನಿಮ್ಮ
ಕರುಣದಿಂದಲಿ ಖನನಿಸುತವಂ
ದರ ಮಾಸದಲಿ ಸಿದ್ಧಗೊಳಿಸಾ
ಪರಮ ಗಂಗಾ ಭಾಗಿರಥಿಯಂ ಬರಿಸಿ ಮೆರೆಯುವೆನು ॥ ೫೪ ॥

ಎನುತ ನಿತ್ಯದಿ ಭಾವಿ ಕೆಲಸದಿ
ಸನುತ ತೊಡಗಿರಲೊಂದು ದಿನವಾ
ಚಿನುಮಯನು ಕೂಪವನು ಕಾಣುವ ಕಾರಣಾಂತರದಿ
ಬಿನದಿಸುತಲಾ ಪೊಲದ ಮಾರ್ಗವ
ನನುಕರಿಸಿ ಬರುತಿರಲು ಮುಂದೆಯು
ಕನಕದುಂಗರವಷ್ಟಪಾಯ್ಲಿಯು ಬಿದ್ದಿರಲು ಕಂಡು ॥ ೫೫ ॥

ಆರದಿಹುದೋಮವರಿಗೆಯು ಮಿಗಿ
ಮೀರಿ ದುಃಖಾಗುವದುಮೆಂತೆನು
ತಾರುಮಾದರು ಬರಲುಮವರಿಗೆ ತೋರಬೇಕೆಂದು
ದಾರಿಯಲಿ ತಾಸ್ಹೊತ್ತು ನಿಂತಿರ
ಲಾರು ಬರದಿರಲಾಗ ಚಿಂತಿಸಿ
ಸಾರಿ ಭಾವಿಯ ನೋಡದಲೆ ಹಿಂದಿರುಗಿ ಬರೆ ಗೃಹಕೆ ॥ ೫೬ ॥

ಮಾತೆ ಸೂವರ್ಣಾಂಬೆ ತಮ್ಮಾ
ನೀ ತಿರುಗಿ ಬಂದೇಕೆ ಭಾವಿಯ
ನೋತು ನೋಡಲು ಪೋಗಲಿಲ್ಲವೆ ಎನಲು ಪರಹಿತನು
ಮಾತನಾಡದೆ ಸುಮ್ಮನಿರಲಾ
ನೀತೆ ಮಹಂತನ ಕರೆಯೆ ಬರಲವ
ತಾತ ಶರಣರ ಕಂಡು ಮಹಿಮರೆ ಏನು ಚಿಂತಿಪಿರಿ ॥ ೫೭ ॥

ಭಾವಿ ತೆಗೆಪೋಗಿಲ್ಲವೇ ಗುರು
ಸೇವಕನೆ ಹಿಂದಿರುಗಿ ಬಂದೆವು
ದೇವ ಕಾರಣದೇನು ಮಾರ್ಗದಿ ಕನಕದುಂಗರವು
ರೂವು ಬಲು ಚಂದಷ್ಟಪಾಯ್ಲಿಯು
ಮಾವನದೊ ನಾನರಿಯನದನಂ
ತಾವು ತರಲಿಲ್ಲೇಕೆ ಪರರದು ಮುಟ್ಟಬಾರದಯ್ಯ ॥ ೫೮ ॥

ತರುತ ಮರುಳಿಪ ಬರಲು ಮತ್ತಿ
ದಿರುಗಿಯೀಯುತ್ತಿದ್ವಿರದನಂ
ತರುವದಿತ್ತೆನೆ ಕೊಡುವ ಬುದ್ಧಿಯು ಪುಟ್ಟದಿರೆ ಗತಿಯೇಂ
ಕಿರುಬ ಮನವಿದು ಮೊದಲೆಯುದನಂ
ನರಿದವರುಮಾರಿಲ್ಲವಲ್ಲಿಂ
ಬರಿಯ ಭ್ರಮೆ ತೊಂದರೆಗಳಲಿ ಬಳಲುವದುಮೇಕೆನಲು ॥ ೫೮ ॥

ಹಳಹಳಿಯು ಮತ್ತೇಕೆಯದನಂ
ಕಳೆದುಕೊಂಡವನೆಂತು ಮನದೊಳು
ತಳಮಳಂಗೊಳ್ಳುವನೊಮೆಂತೆನು ತಾನು ಹಳಹಳಿಪೆ
ತಿಳಿಯೆ ನರಜನ್ಮನಿತು ಘನವಿದು
ತಿಳಿಯದಲೆ ಬಹು ಜನರು ಭವದಲಿ
ತೊಳಲಿ ಬಳಲುವದಾಯ್ತು ಜನ್ಮಾಂತರುಗಳಲಿ ತಿರುಗಿ ॥ ೫೯ ॥

ಪರರ ಕಷ್ಟವು ತನ್ನದದುಮೇ
ಣ್ಪರರ ಸುಖವದು ತನ್ನದೆಂದರಿ
ದೆರಡಕುಂ ತಾನಲ್ಲದನ್ಯರುಮಿಲ್ಲವೆಂದೆನುತೆ
ಕರಮನಂ ಭಾವಂಗಳಲಿ ನಿ
ರ್ಧರಿಸಿ ಪರಧನದಾಸೆಯಲಿ ಮನ
ವೆರಸದಿಹುದೆ ಶರಣ ಪಥವಿದು ನಂಬುದೆಲೈ ಭಕ್ತಾ ॥ ೬೦ ॥

ಹೊನ್ನಿಗಾಗಿಯು ಕೆಲರು ಕೆಟ್ಟರು
ಹೆಣ್ಣಿಗಾಗಿಯು ಕೆಲರು ಮತ್ತಾ
ಮಣ್ಣಿಗಾಗಿಯು ಕೆಟ್ಟು ಕೆಲರುಂ ಪೋದರಕಟಕಟ
ಕಣ್ಣು ಮೂರುಳ್ಳವನ ಮರೆಯುತ
ಬಣ್ಣಗೆಡೆ ಹೊನ್ಮಣ್ಣು ಹೆಣ್ಣಿಗೆ
ಪನ್ನಗನ ಪೆಡೆ ನೆರಳು ಪೊಂದಿದ ಬೇಕನಂತಹುದು ॥ ೬೧ ॥

ಏನೆಯಾಗಲಿ ದೇವ ತಾನಾ
ಮಾನವಗೆ ಕೊಡಲೊಳಿತುಮಕ್ಕುಂ
ಜಾಣನವನೆ ಮೂರು ಲೋಕಕೆ ತ್ರಾಣ ಎನಿಸುವನು
ಆ ನಿಧಾನವ ತಿಳಿದು ಪರಹಿತ
ಧ್ಯಾನಿ ಕಳವಳಿಸುತಲಿ ಗುಣ ಸಂ
ಧಾನಿ ತನ್ನಯ ಕೂಪ ಕಾಣಲು ಪೋಗಲನಿತರಲಿ ॥ ೬೨ ॥

ಜಲದ ಸೆಲೆಯೊಡೆಯುಕ್ಕೆಯಾ ದಿನ
ವಲಘುಮತಿ ಅಲ್ಲಪ್ಪ ತಾನುಂ
ಕಲಿಗಳಂದದಿ ಕಲ್ಲುಬಂಡೆಗಳ್ಕೀಳಲಗ ಜಾಣ್ಮಿಂ
ಒಲಿದು ಸೊನ್ನಲಿ ಸಿದ್ಧರಾಮಗೆ
ಬಳಿಯು ಗಂಗೆಯು ಕಳುಪಿದಂದದಿ
ಸುಲಭ ಶರಣನ ಭಾವಿ ಪೊರಸೂಸುತಲಿ ತುಂಬಿದುದು ॥ ೬೩ ॥

ಕಂಡು ಶರಣನು ಭಕ್ತ ಸಮುದಯ
ಗೊಂಡು ಮರುದಿನ ಮಾಲ್ದಿ ಸಜ್ಜಕ
ದುಂಡಿ ಪೂರಣಗಡಬು ಪುಳಿ ಬೋನಂಬಲಿಯು ರಚಿಸಿ
ಥಂಡ ಜಂಗಮ ಸಾಧು ಸಂತರ
ಮಂಡಲಿಯು ಪ್ರಮಥಾದಿಪತಿಗಳು
ಪಂಡಿತರು ಪಾಮರರು ಮೊದಲಾಗೆಲ್ಲ ಬರಿಸುತಲಿ ॥ ೬೪ ॥

ಏಕ ಭಾವವುಮೇಕ ದೃಷ್ಟಿಯು
ಸೌಖ್ಯ ಪೂರ್ಣನು ಸತ್ಯ ಶರಣನು
ಲೋಕ ಪೂಜ್ಯನು ಶೋಕರಹಿತನು ಕಾಕಗುಣಹತನು
ಪಾಕವನು ತವ ಹಸ್ತ ವರುಷದಿ
ಸ್ವೀಕರಿಸಿ ನೀಡಿದನು ಸರ್ವರು
ಸಾಕುಸಾಕೆಂದೆನುತ ಮನದಣಿಯುತಲಿ ತಣಿಸಿದರು ॥ ೬೫ ॥

ಹಿರಿಕಿರಿದು ಎಂದೆಂಬ ಭಾವವು
ಮರರೆ ಸಪ್ನಾಂತರದಿ ಕಾಣನು
ಧರೆಯ ಪ್ರಾಣಿಗಳೆಲ್ಲ ಶಿವನೆಂದರಿದು ವರ್ತಿಪನು
ಕರುಣೆಪರ ಹಿತಕರನುಮಿವನೆನು
ತರಿದು ಪೊಗಳುತ್ತಿರಲು ಪುರಜನ
ಬರಿದೆ ನನ್ನನ್ನೇಕೆ ಪೊಗಳುವಿರಯ್ಯೊ ಜಲವಿತ್ತಾ ॥ ೬೬ ॥

ಶಿವನ ಸ್ತವನವ ಗೈದುಮವಿರತ
ಶಿವನ ಭಕ್ತಿಯ ಕಾರ್ಯದಲಿ ಮನ
ಸವನಿಸುತಲಿರಲದುವೆ ಕಾರಣ ನಿಮಗೆ ಸಾಮ್ರಾಜ್ಯ
ಜವದಿ ಫಳಿಸುತ ಸತ್ಯ ಸುಖವನು
ಭವಿಸುತಲಿ ಪರಹಿತವ ಬಯಸುತ
ಭವಕೆ ಬಾರದ ತೆರದಿ ವರ್ತಿಪುದೆಂದು ಬೋಧಿಸುತೆ ॥ ೬೭ ॥

ಎಲ್ಲ ಶಿವಚರ ಭಕ್ತ ಸಮೂಹವ
ನಿಲ್ಲದಲೆ ಕೂಡುತ್ತ ಪುರಕಂ
ದುಲ್ಲಸದಿ ಬರುತವರ ಕಳಪುತೆ ತನ್ನ ಆಶ್ರಮದಿ
ಸಲ್ಲಲಿತ ಶಿವಗೋಷ್ಠಿ ಸಂತಸ
ದಲ್ಲಿ ಮೆರೆಯುತಿರ್ದನನುದಿನ
ಕಲ್ಲುಣಗಿ ಪತಿ ಶರಣ ಶಿವಲಿಂಗೇಶ ಗುಣಕೋಶ ॥ ೬೮ ॥

ಇಂದಿಗಾದರು ಪುರದ ಭಕ್ತರು
ಹೊಂದಿ ಶ್ರಾವಣದೊಂದು ಮಾಸದಿ
ಅಂದಿನಂತೆಯು ಪೆಡಗಿ ಜಾತ್ರೆಯ ಜರುಗಿಸುತ್ತಿಹರು
ಮುಂದೆ ಪೊಲದವಗಿತ್ತು ಹಣವವ
ನಿಂದ ಖಾತೆಯುಗೊಂಡುಮದನಂ
ತಂದೆ ಶರಣನಿಗಿತ್ತು ಮೆರದರು ದೈವ ಭಕ್ತರುಗಳ್ ॥ ೬೯ ॥

ವರವೆನಿನ್ನೊಂದಿದೆ ಮಹಾತ್ಮನ
ಚರಿತೆಯಂ ಸ್ನಾನವನು ಗೈಯ್ಯು
ತ್ತಿರಲು ಶಿವಚರ ಕೌಪಕರುವೆಯ ಬೇಡೆ ತನಗೊಂದೆ
ಇರುವ ಪಂಜೆಯುಮದರೊಳರ್ದಂ
ಹರಿದುಕೊಡಲದ ನೋಡಿ ಮಾತೆಯು
ತರಳ ನೀನ್ಹೇಗುಡುವಿ ಮತ್ತೊಂದೊಸ್ತ್ರನೇಯೆನುತ ॥ ೭೦ ॥

ಮಗ್ಗದಲಿ ಕೂಡಿಸಲು ಘನ ಶಿವ
ನಗ್ಗಳದ ಮಹಿಮೆಯದ ವೃತ್ತಿಯು
ದೃಗ್ ಜ್ಞಾನಕಾವರಿಸಿ ಬೆಳಗಲು ಮನವು ಲಯವಾಗಿ
ಶೀಘ್ರ ಸಮಾಧಿಯದು ಪತ್ತಲು
ಮುಗ್ರ ಮನ ಮಾತೆಯಳು ಕಾಣುತ
ಸಗ್ಗನಾಕೆಯು ಕೆನ್ನೆಯಲಿ ವಳಿತಾಗಿ ಥಳಿಸಲ್ಕೆ ॥ ೭೧ ॥

ಹುಚ್ಚರಾಗಲು ಹುಚ್ಚನೇನಿದು
ಮುಚ್ಚಿಕಣ್ಣಿದ್ರೆಯನುಗೈವದು
ಎಚ್ಚರಿಲ್ಲವು ಮನೆಯು ಬಾಳ್ವೆಯದೇನು ತಿಲಮಾತ್ರ
ಹುಚ್ಚನಿವ ಬಲು ಮಾತೆ ನಿನ್ಮನ
ಮೆಚ್ಚುವಂತಿನ್ನೊಬ್ಬನನು ನಾ
ಸ್ವಚ್ಛ ತರುವೆನು ನಾಳೆ ನೋಡವನ್ಹೇಗೆ ನೇಯುವನು ॥ ೭೨ ॥

ಎಂದು ಸಂತೈಸುತಲಿ ಮರುದಿನ
ಚಂದ ಲಿಂಗಾರ್ಚನೆಯನೆಸಗುತ
ಬಂದು ಮಗ್ಗದಿ ಕುಳಿತು ತಾಸೊಂದರಲಿ ಬಟ್ಟೆಯನು
ನಿಂದಿರದೆ ನೇಯಲ್ಕೆಯರಡನು
ಮುಂದು ಬಂಗಾರೆವ್ವ ಕಾಣುತ
ಕಂದ ನಿನ್ನನು ಬಡಿದೆ ಸುಮ್ಮನೆ ಎಂದು ಮರುಗಿದಳು ॥ ೭೩ ॥

ಬಡಿದುದೆ ಹಿತವೆನಗೆ
ಬಡಿಯದಿರ್ದರೆ ಮುಡಿಯುತಿರ್ದೆನೆ
ಜಡದಿ ಜಲ ಕೊಡೆ ಮೋಡ ಪ್ರತಿಜಲ ಕೊಡುವದೇ ಸಿದ್ಧ
ಒಡೆಯನಿಗೆ ವಂದೊಸ್ತ್ರ ಕೊಡಲವ
ಬಿಡದೆಯುರಪುನ್ನೆಯ್ವ ಶಕ್ತಿಯು
ಕೊಡುತಲೆನ್ನಂ ಕಾಯ್ದ ಮೃಡ ಚರಮೂರ್ತಿ ಎನುತಿರ್ದ ॥ ೭೪ ॥

ಇಂತು ಶಿವಶರಣೇಶ ಪ್ರಮಥರ
ಪಂಥ ಷಟುಸ್ಥಲ ಜ್ಞಾನ ಪರಿಪೂ
ರ್ಣಾಂತು ಹೃದ್ಗತನಾಗಿ ಜಗದಿರವಿನಲಿ ಜಗದಾತ್ಮ
ಶಾಂತಭಾವದಿ ಮುಕ್ತಿಕಾಂತೆಯ
ಕಾಂತನೆನಿಸುತ ಮೆರೆಯುತಿರ್ದ
ತ್ಯಾಂತ ಮಹಿಮನು ಮಹಿಮೆಯೊಳುಂ ಮಹಿಮಾಂತ ಸಾಧಕನು ॥ ೭೫ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳಿ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ತ್ರಿದಶ ಸಂಧಿಯಿದು ॥ ೭೬ ॥

ಅಂತು ಸಂಧಿ ೧೩ಕ್ಕಂ ಪದನು ೧೦೮೭ಕ್ಕಂ ಮಂಗಲಮಹಾ ಶ್ರೀ ಶ್ರೀ

## ಸಂಧಿ ೧೪

ಹರಿಣಿ ರೂಪದ ವೀರಮಾಂಬೆಯ
ಪೊರೆದು ಬಸವಾಲಯವ ರಚಿಸುತ
ಹರನ ಸಂತರೊಳಾಡುತಿರ್ದನು ಸತತ ಶಿವಲಿಂಗ ॥ ಪಲ್ಲ ॥

ಎಲುದೊಗಲು ಬಿಸಿ ಮೂತ್ರ ರಕ್ತದ
ಕೊಳಕು ಮಾಂಸದ ಪಿಂಡ ನರಗಳ
ಬಲೆ ಬಹಳ ಕ್ರಿಮಿ ಜಂತು ಬಳಗದಿ ಬಲತ ಮಲ ಭಾಂಡ
ಪೊಲಸು ಸಾರುವ ಕೆಡಕು ಹೆಣವಿದು
ತೊಳ ತೊಳದು ಬೇಸತ್ತೆ ಶಿವಪುರ
ನಿಲಯು ಶಿವಲಿಂಗೇಶ ಕರುಣಿಸು ಶರಣು ಬಂದಿಹೆನಾಂ ॥ ೧ ॥

ಕಾಯಕರಣವನಳಿದ ಶಿವಶರ
ಣಾಯು ಭಕ್ತಿ ಜ್ಞಾನವಿರತಿಯ
ಶ್ರೇಯ ಪದವನುಸರಿಸಿ ಸಚಿತೋಪಾಯದಿಂದಿರಲು
ಮಾಯೆ ಮೋಹದಿ ಮರುಗಿ ಮರಣಿಸಿ
ದಾಯಕಿಯು ವೀರಾಂಬೆ ಹರಣಿಯ
ಪೇಯವಾಗುತ ಜನಿಸಿ ಕಾನನದಿರಲು ಭಕ್ತೋರ್ವ ॥ ೨ ॥

ತರಲು ಜನಕನು ಕಂಡು ಹರಿಣಿಯ
ಕರುವಿದೇತಕೆ ನಮಗೆ ಎನೆ ಶಿವ
ಶರಣಗೀವೆನು ಎಂದು ತರೆ ಸರ್ವಜ್ಞನದ ನೋಡಿ
ಅರರೆ ಬಂಗಾರೆವ್ವ ವೀರ
ಮ್ಮರಳಿ ಬಂದಳು ನೋಡ ಬಾಯೆನೆ
ಮರಣಿಸಿದಳಾಕ್ಷಿಗೆ ಬರುವಳು ತಿಳಿಯ ಪೇಳೆನಲು ॥ ೩ ॥

ಹುಟ್ಟಿ ತಾ ತನ್ನರಿಯದಿರಲದ
ಕ್ಹುಟ್ಟಿ ಬರುವದೆ ನಿಜವು ಸಂಚಿತ
ದಿಷ್ಟತೆರ ದೇಹವನೆ ತೊಡಲಹುದೆರಳಿ ಜನ್ಮವನು
ತೊಟ್ಟುಬಂದಿಹಳ್ನೋಡು ಋರಕೊಂ
ದಿಷ್ಟು ಕಚ್ಚಿದೆ ಗುರ್ತಿಸೌ ಎನೆ
ಶಿಷ್ಠಳೆಂ ನಾನೇನು ಬಲ್ಲೆನು ನಿನಗೆ ಗುರ್ತೆನಲು ॥ ೪ ॥

ಘಟ್ಟನದಕಂ ಪಾಲುಕುಡಿಸುತ
ಮುಟ್ಟಿ ಮನ ಸಾಕಲ್ಕೆ ಶರಣನ
ಬಿಟ್ಟಿರದು ನೇಗಿಯಲಿ ಭಜನೆಯು ಲಿಂಗಪೂಜೆಯಲಿ
ಇಷ್ಟ ತಾಣದಿ ಶ್ರೇಷ್ಠರೆದುರೇ
ನಿಟ್ಟಿಸುತಲದು ಕೊಡ್ರುವದುಮವ
ಬಿಟ್ಟು ಪೊರಗಂಪೋಗ್ವದಾದರೆ ಕೋಣೆ ಬಾಗಿಲವ ॥ ೫ ॥

ಮುಚ್ಚಿಪೋಗುವ ನಿಯಮವಿರೆ ಜಗ
ದಚ್ಚಿಯುದಯದಿ ಬಹಿರ್ಪ್ರದೇಶಕೆ
ನಿಚ್ಚಪೋಗುವ ತೆರದಿ ಶರಣನು ಪೋಗ್ವ ಸಮಯದಲಿ
ಯಚ್ಚರಿರಲೌ ಮಾತೆ ಕದವನು
ಮುಚ್ಚು ಬಿಟ್ಟೀ ಚಿಗರಿ ಜತ್ತನ
ಪಚ್ಚಿ ಕಾಯೆಂದೊರೆದು ಪೋಗಲು ಮರದಳಾ ಮುಗುದೆ ॥ ೬ ॥

ಯೇಣವಾಗಳೆ ಎದ್ದು ಶರಣನು
ಕಾಣದಿರೆ ಹೊರಬಿದ್ದು ನಿಲದಾ
ಓಣೆ ಸಂದಿಯು ಪಿಡಿದು ನಡೆಯುತ ಋಟ್ಟೆ ಶಿವಲಿಂಗ
ಜಾಣ ಭಕ್ತನ ಗೃಹದ ಮುನ್ನಿಲೆ
ಶ್ವಾನ ನಾಲ್ಕೆರಡಾಗ ಕಾಣುತ
ಗೋಣು ಪಿಡಿಯುತ ಹಿಚಿಕಿ ಕೊಲಲೌತರಲಿ ಕಂಡವನು ॥ ೭ ॥

ಅಯ್ಯೋ ಶರಣರ ಚಿಗರಿ ಭಜನೆಯು
ಗೈಯ್ಯುತಿರಲೆದುಕರ್ೂಡ್ವ ಚಿಗರಿ
ಅಯ್ಯ ಶರಣರ ಲಿಂಗಪೂಜೆಯು ನೋಡುವ ಚಿಗರಿ
ಸಯ್ಯುಮೇಶನ ಕೈಯ್ಯ ಚಿಗರಿ
ಜೀಯ್ಯ ಚಂದ್ರನೋಳ್ತೊರ್ವ ಚಿಗರಿ
ಅಯ್ಯೊ ಕಣ್ಣಿಗೆ ಪಲಲವಿಶ್ನಿವ ನೊಲಿಸಿದ ಚಿಗರಿದು ॥ ೮ ॥

ಎಂದು ಶೋಕಿಸಿ ಪೊತ್ತು ಶರಣರ
ಮಂದಿರಕೆ ತರಲನಿತರಲಿ ಗುಣ
ಸಿಂಧು ಬರಲವನೋ‍ಡಿ ದೇವಾ ಚಿಗರಿ ಪೋಯ್ತೆನಲು
ಕೊಂದಿ ಭಂಗಾರೆವ್ವ ನೀ ಬಿ
ಟ್ಟಿಂದು ಮಾಡಿದಿ ಘಾತವೀಕಿ
ನ್ಮುಂಪೆ ಜನಿಪಳು ವಡ್ಡರಲಿಯೆಂದಂದು ಮೈದೊಳೆದು ॥ ೯ ॥

ಧರಿಸಿ ಭಸ್ಮವ ಪತ್ರಿ ಪುಷ್ಪವ
ನಿರದೆ ಸಾಮಾಧಿಯನು ಗೈಯ್ಯುತ
ಪೊರಟು ತನ್ನಾಶ್ರಮಕೆ ಬರಲುಂ ಮುಂದೆ ಕೆಲದಿನದಿ
ಶರಣ ಶಿವಲಿಂಗೇಶ್ವರನ ಮನ
ಪರಕಿಸಲು ಮೈದಿರಿಗಿ ಭಕ್ತರು
ತರುತ ಸಕ್ಕರಿಯೊಂದು ಮಣವದರೊಳಗೆ ರೂಪಾಯಿ ॥ ೧೦ ॥

ಮಡುಗುತ್ತೈದನು ಮಧ್ಯದಲಿ ಇಡು
ತೊಡೆಯರೇ ಸ್ವೀಕರಿಸುತುಳಿದುದ
ನೊಡನೆ ಹಂಚಿಸಿರೆಂದು ಮುಂದಿಡೆ ಸಲ್ಲದಿದು ನಮಗೆ
ಮೃಢ ಶರಣರೇ ಕೊಲ್ಲಿರೈ ಮನ
ಕೆಡಿಪ ಹಣವಿದೆಯಲ್ಲ ಸಕ್ಕರಿ
ಪುಡಿಯು ಮಾತ್ರಿದೆ ಎನಲು ಬಿಚ್ಚಿರಿ ತೋರುವವು ನಿಮಗೆ ॥ ೧೧ ॥

ನಮಗೆ ತೋರುವವೆಂದಮೇಲವು
ತಮಗರಿಕೆಯಿರ್ದಂತುಮಾಯಿತು
ಸುಮನಸರೆ ಹಣವೆಷ್ಟು ಪೇಳಿರಿ ಸತ್ವವದು ತಿಳಿಲಿ
ತಿಳಿಯಲಿ ನಾನೇನು ಮಹಿಮಾ
ಬಳನೆ ತ್ರೈಕಾಲಜ್ಞನೆ ಭವ
ವಳಿದ ಪ್ರಮಥಾಳಿಗಳ ಲೆಂಕನುಮೈಡುಮಿವೆ ಎನಲು ॥ ೧೨ ॥

ದೇವ ನಿಮ್ಮಯ ಘನತೆಯರಿದಲೆ
ಈ ವಿಧಂ ಗೈಯ್ದಿಹೆವು ನಮ್ಮನು
ತಾವು ರಕ್ಷಿಸಬೇಹುದೆನೆ ಸುವಿನೋದ ಘನಶಾಲಿ
ಸಾವುದ್ಹುಟ್ಟುದ ದಾಂಟಿದವ ಮಹ
ದೇವ ದೇವರ ದೇವ ನಿಮ್ಮನು
ಕಾವನವನೇ ದೇವ ಭಕ್ತರೆ ಎನುತೆ ಸಮ್ಮತಿಸೆ ॥ ೧೩ ॥

ಶರಣು ಶರಣೆಂದೆನುತ ಸರ್ವರು
ಶರಣ ಪದಕಂ ನಮಿಸಿ ತಮ್ಮಯ
ಪುರಕೆ ಪೋಗಲ್ಕಿತ್ತ ಗುಣ ಚಾರಿತ್ರ ಶಿವಲಿಂಗ
ಶರಣ ಪ್ರಮಥಾಳಿಗಳ ಸಂಗದಿ
ನಿರುತ ಶೈವಾನುಭವದ ಗೋಷ್ಠಿಯೊ
ಳಿರುತ ಬಸವಾಲಯವ ರಚಿಸಲು ಸಿದ್ಧಿಸುತ ಮನವ ॥ ೧೪ ॥

ಕಲ್ಲುಗಳನಂ ತರಿಸಿ ತಾನೇ
ಕಲ್ಲು ಕುಟಿಗನುಮಾಗಿ ಕಟಿಯುತ
ಕಲ್ಲ ಮಂಟಪದಳತೆ ಗೋಪುರವೆಲ್ಲ ರಚನೆಯನಂ
ನಿಲ್ಲದೇಗೈಯುತ್ತ ಬಂಧಿಪ
ಬಲ್ಲ ಶಿಲ್ಪಿಗರಿಂದವಾಲಯ
ಸೊಲ್ಲಸಲ್ಕಳವಲ್ಲವೆನುತಲಿ ಸಿದ್ಧಗೈಸುತಲಿ ॥ ೧೫ ॥

ಭಕ್ತ ಸಮೂಹವನೆರಸಿ ಬಸವನ
ಭಕ್ತಿ ಪೂರ್ವಕ ಸ್ಥಾಪಿಪುದಕ
ವ್ಯಕ್ತರಾರನು ಬರಿಸಬೇಕನೆ ಬೊಂತಲಾಪುರದಾ
ಸಕ್ತ ಶಂಕರಲಿಂಗ ಸದ್ಗುರು
ತತ್ವ ಬೋಧಕ ಸಿದ್ಧಲಿಂಗನ
ಕರ್ತುರ ಶರಣರೆ ಬರಿಸಿ ಬಸವನ ಸ್ಥಾಪಿದುಮನಲು ॥ ೧೬ ॥

ಕೇಳಿ ಸಂತಸ ತಾಳಿ ಶಿವ ಭಕು
ತಾಳಿಯಿಂದಾ ಮಹಿಮನನು ಬರಿ
ಸೋಳಿಯಿಂದಿದಿರ್ಗೊಳುತ ಕರೆತಂದಾಗ ಮನ್ನಣೆಯಿಂ
ಶೂಲಿ ಶರಣನು ಕೇಳಿಕೊಂಡನು
ಶೂಲಿವಾಹನ ಬಸವನನು ಯತಿ
ಮೂಲ ತಮ್ಮಯ ಕರದಿ ಸ್ಥಾಪಿಪುದೆನಲು ಶಾಂತಿಯುತ ॥ ೧೭ ॥

ಶರಣ ಶಿವಲಿಂಗೇಶ ನಿಮ್ಮನ
ದಿರವೆ ಎನ್ನದು ಎನುತ ಸಮರಸ
ದುರುತರೋನ್ನತ ವಾಕ್ಯವಚಿಸಲು ಕೇಳಿ ಮೂದಲಿಸಿ
ಹರಗಣಂಗಳು ಸಾಧುಸಂತರು
ಪರಮ ಭಕ್ತಾದಿಗಳು ಸಂಭ್ರಮ
ವೆರೆಸಿ ಸಭೆಯಾಗಿರಲು ಶಿವ ಸಭೆಯಂತೆ ರಂಜಿಸಲು ॥ ೧೮ ॥

ರುದ್ರ ಘೋಷಣ ನಮಕಚಮಕವು
ರುದ್ರನಾಮೋಚ್ಚರಣ ಭಜನೆಯು
ರುದ್ರನಾಮವು ಗಾನ ಪ್ರಮಥೋಚನಾಳಿ ಸಂಭ್ರಮದಿ
ರುದ್ರವಾಹನ ನಂದಿ ರೂಪಗೆ
ರುದ್ರ ಗಣವರ ಸಮೂಹ ಕೂಡುತ
ರುದ್ರ ಪಾರಾಯಣದಿ ಮಹಾರುದ್ರಾಭಿಷೇಕವನಂ ॥ ೧೯ ॥

ಮಾಡಿ ಭಸ್ಮವ ತೀಡಿ ಕೊರಳಲಿ
ಸೂಡಿ ಸುಮರುದ್ರಾಕ್ಷಿ ಮಾಲೆಯ
ಪಾಡಿ ಮಂಗಳ ಕೂಡಿ ಭಕ್ತರು ಕಂಥೆ ಧರಿಸುತಲಿ
ನೀಡಿ ಚರತತಿಗಿಷ್ಟ ಪಾಕವ
ಬೇಡಿದಿತ್ತಸುನುದಾನ ದಕ್ಷಿಣೆ
ನೂಡಿ ಶಾಂತಿಯು ಸರ್ವ ಜನ ಬೆರಗಾಗಿ ಹರಸಿದರು ॥ ೨೦ ॥

ಸಿದ್ಧಲಿಂಗನ ಕರುಣ ಕರದಿಂ
ಸಿದ್ಧ ಬಸವನ ಸ್ಥಾಪಿಸುತ ಘನ
ಸಿದ್ಧಲಿಂಗೇಶನನು ಬಿಜಯಂಗೈಸಿ ಶಿವಲಿಂಗ
ಸದ್ದಯಾನಿಧಿ ತನ್ನ ಕಾಯಕ
ಶುದ್ಧ ಭಾವದಿ ನಡೆಸಿ ಸಾಮಾ
ಜೊದ್ಧರಣಗೈಯ್ಯುತ್ತಲಿರುತಿರೆ ಮುಂದೆ ಕೆಲದಿನದಿ ॥ ೨೧ ॥

ಹರಿಣಿ ಜನ್ಮವನುಳಿದ ವೀರೌ
ಪುರ ಮಂಗಲಿಗಿ ವಡ್ಡರುದರದಿ
ಯರರೆ ಭಂಗಾರೆವ್ವಮೀದಿನ ಜನ್ಮಿಸಿದಳೆಂದು
ಕರದ ಚಪ್ಪಾಳೆಯನು ಬಾಜಿಸೆ
ತರಳ ಮತ್ತೇಕ್ಹುಟ್ಟಿದಳು ಮಾ
ಡಿರುವ ಪಾಪಕ್ಕೆನಲು ಮುಂದ್ಹತ್ತೆಂಟು ವರುಷದಲಿ ॥ ೨೨ ॥

ಬೆಳೆದು ದೊಡ್ಡವಳಾಗೆ ಪಿತ ತಾ
ಅಳಿಯೆ ಪೊಟ್ಟೆಗೆಯನ್ನವಿಲ್ಲದಲೆ
ಬಳಲುತಾ ಪುರಗೌಡರಾ ನಿಳಯದಲಿ ಕಸ ಸೆಗಣಿ
ಬಳಿದು ಜೀವಿಸುತಿರಲು ಗೌಡರು
ಮೆಳಸಿ ಮನ ಶಿವಲಿಂಗ ಶರಣರ
ಹಲವು ಮಹಿಮೆಯ ವಿಷಯಗಳ ಮಾತಾಡುತಿರಲದನು ॥ ೨೩ ॥

ಕೇಳೆ ಶರಣರ ಮಹಿಮೆ ಕಿವಿಯೊಳು
ಬೀಳೆ ಪೂರ್ವದ ನೆನಹಿನಂಶವ
ಸೂಳೈಸಲಳುತಿರಲು ಕಂಡವರೇಕೆ ವಡ್ಡತಿಯೇ
ಶೀಲರೇ ಶಿವಶರಣ ಘನಪದ
ಜಾಲ ಕಾಣಲ್ಕೆಳಸಿ ಮನದುಃ
ಖೇಳುತಿದೆ ಕರದೊಯ್ಸುದೆನುತಂ ಬೀಳೆ ಪದ ತಳಕೆ ॥ ೨೪ ॥

ಆಗಲೇಳೆಲೆ ಹುಡಿಗೆ ನಮ್ಮಯ
ಬೀಗರಾಪುರ ಗೌಡರಲ್ಲಿಗೆ
ಪೋಗ್ವ ಸಮಯದಿ ಬರುವದೆನೆ ನೆನಪಿಟ್ಟು ಜೊತೆಯಾಗಿ
ಸಾಗಿ ಬರುತಿರಲರಿದು ಶರಣನು
ಮಾಗ ಭಂಗಾರೆವ್ವ ವೀರ
ವ್ವೀಗಳೀಪುರ ದಾರಿಯಲಿ ಪೊರಟಿಹಳು ಬಹಳೆನಲು ॥ ೨೫ ॥

ಏನು ತರಳನೆ ನೀನು ನುಡಿವುದು
ಹಾನಿಯಾದವರೆಲ್ಲರೀ ನರ
ಸ್ಥಾನದೆಡೆಗಮ್ಮರುಳಿಬರ್ಪರೆ ಬರ್ಪರೌ ಸತ್ಯ
ಈ ನಿಯಮವೆನಗರಿಯದೆನುತಾ
ಸಾನುಭೂತಿಯು ಸುಮ್ಮನಿರಲ
ಜ್ಞಾನ ರೂಪಿಣಿ ಶರಣ ಶಿವಲಿಂಗೇಶನರಸುತಲಿ ॥ ೨೬ ॥

ಬಂದು ಮಹಿಮರ ಪಾದ ಸಮ್ಮುಖ
ನಿಂದು ದುಃಖವಗ್ಗೆಯ್ಯುತುರುಳುತ
ತಂದೆ ತಂದೇಯೆಂದು ಪಲಬುತ ಕಂದಿ ಕಳೆಗುಂದಿ
ನೊಂದು ಮರುಳಾವಸ್ಥೆ ತಳೆ ದಯ
ಸಿಂಧು ಸನ್ಮಾನಿಸಲುಮವರಡಿ
ಹೊಂದಿ ಕೆಲದಿನವಿರ್ದು ಸೇವಿಸಿ ಮರಣವಾಂತಿಹಳು ॥ ೨೭ ॥

ಪುರದ ಭಕ್ತರು ನೆರೆದು ವಡ್ಡರ
ತರಿಸುತವಳಂತಿಮವಗ್ಗೈಸುತ
ಶರಣರೇಮಿವಳಾರುಮೀಕೆಯ ಪೂರ್ವಪರವದುಯೇಂ
ಒರೆವುದೆನಲದ ಕೇಳಿ ಮಹಿಮರು
ವಿರಚಿಸುತಲಿನ್ನೊಂದು ಬಾರಿಯು
ಭರುವಳಲ್ಲಿಂ ಮುಂದೆಯೆಮ್ಮನು ಕೂಡಿ ಸಾಗುವಳು ॥ ೨೮ ॥

ಆರ ಗರ್ಭದಿಯಿದೆ ಮಹಂತನ
ನಾರಿ ಗರ್ಭದಿ ಜನಿಸುವಳು ಎನೆ
ಪೌರ ಜನ ಕೊಂಡಾಡೆ ನರಸಿವನೆಂದು ಭಾವಿಪನು
ಸೇರುವನು ಯಮಲೋಕ ನಿಜವಿದು
ಸಾರ ಮಹಿಮಾಗಾರ ಶರಣನ
ಚಾರು ಪದಕಂ ನಮಿಸಿ ಪೋದರು ನುತಿಸುತತಿಶಯದಿ ॥ ೨೯ ॥

ನೀತ ಸದ್ಗುಣ ಪೂತ ಭಕ್ತರ
ತಾತ ಸದ್ದಯವ್ರಾತ ಸತ್ಕುಲ
ಜಾತ ಜಂಗಮದಾತ ಘನ ಪ್ರಖ್ಯಾತ ಜಗಪ್ರೀತಾ
ಭೂತಳಕೆ ಸುಖಶಾಂತಿ ತತ್ವವ
ನೋತು ಗೈಯ್ಯುವ ವೃತ್ತಿಯಲಿ ಮನ
ವಾತುಕೊಂಡಿಹ ಸತತ ಚಿತ್ಕಾಮಿನಿಯವರ ಕಾಂತ ॥ ೩೦ ॥

ಇರುತ ತನ್ನಾಶ್ರಮದಿ ಸಂತತ
ಪುರದ ಭಕ್ತರು ಮಠದಿ ಭಜನೆಯ
ವಿರಚಸುತ್ತಿರೆ ತ್ರಿದಳ ದಿನ ಮೋಹರಮದಿ ಬಂದೆಂದು
ಪುರದ ತಹಸಿಲ್ದಾರ ಕೊಡೆ ಹುಕು
ಮಿರದೆ ಶರಣರ ಆಜ್ಞೆಯಿಂದದಿ
ನೆರದು ಭಜನೆಯ ಮಾಡುತಿರಲದ ಕೇಳಿ ಕೋಪಿಸುತೆ ॥ ೩೧ ॥

ಬಿಲ್ಲೆ ಶಿಪಾಯರನು ಕಳುಹ
ಲ್ಕೆಲ್ಲರುಂ ಸರಿದೋಡೆ ಭಜನೆಯ
ಎಲ್ಲ ಸಾಮಾನೊಯ್ಯುತಿರೆ ಚಟ್ಟರಕಿ ಬೊಮ್ಮಣಿ
ನಿಲ್ಲದವರನು ತಡೆಯೆ ಖತಿಯಿಂ
ದೆಲ್ಲರವನಂ ಪಿಡಿದು ಕೊಂಡೊ
ಯ್ದಲ್ಲಿ ಸರಕಾರೆದುರಿನಲಿ ನಿಲ್ಲಿಸುತ ಪೇಳಿದರು ॥ ೩೨ ॥

ಜೀಯ ಸರಕಾರಿವನು ನಮ್ಮನು
ಬೈಯ್ಯುತಂ ಬರಗೊಡದೆ ತಡೆಯುತ
ಮೈಯ್ಯಮೇಲ್ಬಂದೀತ ಭಜನೆಯ ಕಾರಭಾರಿಯೆನೆ
ಸಾಯ್ಬ ಕೇಳುತ ಬಡಿಯುತವನಂ
ನ್ಯಾಯದಿಂದುಪವಾಸ ಕೂಡಿಸೆ
ಕಾಯಜಾರಿಯ ಶರಣನದ ಕಳವಳಿಸಿ ತಿಳಿಯುತ್ತೆ ॥ ೩೩ ॥

ಬಸವನಾಲಯಪೊಕ್ಕು ಮನದೊಳ
ಗುಸುರುಗರೆಯುತ್ತಯ್ಯೋ ಶಿವನಿಂ
ನಸಮ ಭಕ್ತರ ಕುಶಲವಾರ್ತೆಯ ಮರೆದಿಯಾ ನೀನು
ಹಸನವೇನಿದು ತಮಗೆ ದುರ್ಗುಣ
ಮುಸುಕಿದವರನು ಶಿಕ್ಷಿಸುತ ಗುಣ
ವಿಸರರುಂ ರಕ್ಷಿಪುದೆ ಲೇಸೆಂದಂದು ಬಿಸುಸುಯ್ಯೆ ॥ ೩೪ ॥

ತಂದೆ ಶರಣನು ನೊಂದ ನೋವೇ
ಬಂದು ಶೀಘ್ರದಿಯವನ ಪೊಡೆಯಂ
ಹೊಂದಿ ಸಂಕಟದಿಂದಲುರುಳಾಡುತ್ತ ರಾತ್ರಿಯಲಿ
ತಿಂದನೌಷಧಿ ಮತ್ತೆ ಮುಂದಿನ
ಕಿಂದ ಘನವಾಗಲ್ಕೆ ಸಾಯುವೆ
ನೆಂದು ಗಾಭರಿಸುತ್ತಲಮೃತರಾಯ ಗೌಡನನು ॥ ೩೫ ॥

ಬರಿಸಿ ನಾ ನಿನ್ನಿರೆನು ಗೌಡರೆ
ಉರಿಯಪತ್ತಿದೆಯಂಗ ಮತ್ತಾ
ಪರಿಪರಿಯು ಪೊಟ್ಟೆಯದು ಕಡಿಯುತ್ತಿರುವದೆಂದಂದು
ಮುರುಳುವನು ಮತ್ತೊರಳವನು ಬಲು
ಬರಳುವನುಮಿದಕೊಂದು ಸರಕಾ
ರಿರುವದೌಷಧಿ ತಾವು ಸೇವಿಪಿರೇನು ಪೇಳುವೆನು ॥ ೩೬ ॥

ಸಿದ್ಧಸಿಹೆ ತಾ ಮದ್ದುಮಲ್ಲವು
ಶುದ್ಧ ಶರಣರ ಭಜನೆ ನಿಲ್ಲಿಸಿ
ಗದ್ದಲವ ಕೈಕೊಳ್ಳಲದು ತಮಗೊಡ್ಡಿ ಕಾಡುವದು
ಉದ್ಧರಿಸಲೆವ ಬುದ್ಧಿವಂತನೆ
ಸದ್ಯದಲಿ ನಾಂ ಕೊಡುವೆನಪ್ಪಣೆ
ಸದ್ದಯಾನಿಧಿ ಬಳಿಗೆ ಪೋಗಲು ಶುದ್ಧವಹುದೆನಲು ॥ ೩೭ ॥

ಮರುಗಿ ತಹಸಿಲ್ದಾರನಾ ಚ
ಟ್ಟರಕಿ ಬೊಮ್ಮಣ್ಣನನು ಬಿಡುತಾ
ತುರದಿ ದಮ್ಮಡಿ ತಾಳು ಯೇಕ್ದಾರಿಗಳು ಮೊದಲಾಗಿ
ಭರದಿ ಬಿಲ್ಲೆ ಸಿಫಾಯಿಗಳ ಮೇ
ಲ್ಪೊರಸಿ ಪೂ ಸಂಕೋಲೆ ತನ್ನಯ
ಕರಕೆ ಪಾಕುತ ಪೊರಟು ಬರುತಾ ಕರುಣೆಯಾಶ್ರಮಕೆ ॥ ೩೮ ॥

ದೇವನತಜನ ಕಾವ ನೀ ಮಹಾ
ದೇವ ಭಕ್ತರ ಜೀವ ಜಗದಾ
ಧೈವ ಪಾವನ ಚರಿತ ಪಾಪೋದ್ಧರಣ ಶಿವಶರಣ
ಕಾವುದೆನ್ನನು ಕರುಣೆ ನಿಮ್ಮಯ
ಭಾವನರಿಯದೆ ಕೆಟ್ಟೆ ಪೊಟ್ಟೆಯ
ನೋವು ನಿಲಿಸೆಂದೆನುತ ಬಿನ್ನಯಿಸುತಲಿ ಪದಕೆರಗಿ ॥ ೩೯ ॥

ಏಳು ಸಾಯ್ಬನೆ ನಿನ್ನ ಮನದಾ
ಏಳಿಗೆಯುಮೆಂತಿಹುದು ತಾನಹು
ದೇಳುಮೆನುತಾ ಕರವ ಪೊಟ್ಟೆಯೊಳೆಳೆಯ ನೋವಡಗೆ
ತಾಳಿ ಸಂತಸ ದೇವ ತವಪದ
ದಾಳುಮಿವನಿಂ ತಾವು ಸೇವೆಯ
ನ್ಹೇಳಿ ಕೈಕೊಳಿರೆನುತ ತನ್ನಯ ತಾಣಕಂ ಪೋದ ॥ ೪೦ ॥

ಮತ್ತೆ ಮಹಿಮಾಸಕ್ತ ಶರಣನ
ವೃತ್ತಿ ತಿಳಿಯುತ ಬಂದ ಕಾಜೊಳ
ಪಟ್ಟಣದ ಶಿವಶರಣ ರೇವಣಸಿದ್ಧನೊಂದಿನದಿ
ಸತ್ಯಮೂರ್ತಿಯೆ ತಾವು ಚರಪ
ಟ್ಟಕರ್ತರಾಗಿರಿಯೆನುತ ಪೇಳ
ಲ್ಕೋತ್ತುಮೋತ್ತುಮ ಶರಣ ಸ್ಥಲ ಮಾಹೇಶ ಸ್ಥಲದಿಂದಂ ॥ ೪೧ ॥

ಮೀರಿ ಮೆರೆವುದು ವೀರ ಪಥವನು
ಮೇರಿದವರಿದು ತಿರುಗಿ ಪಟ್ಟಧಿ
ಕಾರವನು ಕೈಕೊಳ್ಳಲಾಗದು ಮುಂದೆ ಗತಿಯೇನು
ಭೂರಿ ಪಟ್ಟವ ತಾವು ತಿಳಿಯುತ
ವೀರ ಮಾಹೇಶನಿಗೆ ಪಟ್ಟಧಿ
ಕಾರವನು ಗೈಯುತ್ತಲಿರಿಯೆಂದಾಗ ಬೋಧಿಸಲು ॥ ೪೨ ॥

ಕೇಳಿಯದರಂತಾಗಿ ದಾಸ್ಮಯ
ಶೀಲ ಗುಣಮಣಿ ಸಾಂಪ್ರದಾಯಿಕ
ಮೇಲು ಎನಿಪಾ ಭೂರಿ ಪಟ್ಟವಗೈಯ್ಯುತಿರಲಿತ್ತ
ವ್ಯಾಳ ಧರ ಶರಣೇಶ ಶಾಂತಿಯ
ತಾಳಿ ತನ್ನಾಶ್ರಮದಿ ಇರುತಿರೆ
ಗಾಳಿ ದಾನವ ಧೂತ ಹಠ ವೈರಾಗಿ ಗುಣರಹಿತ ॥ ೪೩ ॥

ಶರೀರ ಮಮತಿಲ್ಲದೆ ಮೂರೇ
ಣಿರುವ ಕಲ್ಲನು ಮೂರನಿರಿಸುತ
ಶಿರವು ನಡು ಹಿಮ್ಮಡವನೂರುತ ಮೇಲೆ ಮಲಗುವನು
ಉರುಳಿವರೆ ನಿನ್ನಹ್ಣಿಯ ಬರಹದು
ಸರಿಯಿತೆಂದೆನುತರಿದು ಎಚ್ಚರ
ದಿರುತ ನಿದ್ರೆಯಗೈಯ್ಯುತಿರು ಎಂದಂದು ಬೋಧಿಸುತ ॥ ೪೪ ॥

ಶರಣ ಮಠದಿರೆ ಬೋಳಿಗಾವಿಯು
ಪರಮ ಚನ್ನಪ್ಪೆಂಬ ಭಕ್ತನು
ಚರರನುಣಿಸುವ ಪ್ರಸ್ತಗೈಯ್ಯುತೆ ಶರಣರಿಗೆ ಪೇಳಿ
ಅರಿದು ಶರಣನು ಗಾಳಿದೇವಗೆ
ಇರುವದೇನ್ನೆ ಬಿನ್ನಹ್ವವೆನೆಮಹು
ದಿರುವವದೆನಲಾ ವೇಳೆಯಲಿ ಚರರೆಲ್ಲ ನೆರೆಯಲ್ಕೆ ॥ ೪೫ ॥

ಶರಣನು ಕರೆತನ್ನಿಯವರಲಿ
ಇರುವ ನಾ ಚರಗಾಳಿದಾಸನ
ಕರದುತಹುದೆಂದೊರೆದ ಭಕ್ತನು ಚರರುಮದು ಕೇಳಿ
ಹರನ ಭಕ್ತನೆ ಬೇಡ ನಮ್ಮೀ
ಚರರ ಪಂಕ್ತಿಯೊಳವನು ಗುಣ ಹೀ
ನಿರುವ ಮತ್ತವಧೂತ ಮಾರ್ಗಿಯುಮೆನಲು ಯಡೆಮಾಡೆ ॥ ೪೬ ॥

ಎಲ್ಲ ಗಣರೆಡೆಯಲ್ಲಿ ಬಾಲ್ಪುಳ
ನಿಲ್ಲದೇ ತೋರಲ್ಕೆಯಿದನಾ
ವಲ್ಲೆವೆನುತವರೆದ್ದು ನಿಲ್ಲಲು ಭಕ್ತ ಗಾಬರಿಸಿ
ಮೆಲ್ಲ ನೋಡುತ ಬರುತ ಶರಣರಿ
ಗೆಲ್ಲವದನರುಹಲ್ಕೆ ಶಿವ ಶಿವ
ಬಲ್ಲ ಮೂರ್ತಿಯೊಳೆಂಥ ದೂಷಣಮಿರಿಸಿದರುಮೆಂದು ॥ ೪೭ ॥

ಘಳಿಲನಾ ಚರ ಗಾಳಿದಾಸನ
ಲಲಿತ ಚರಣೋದಕವ ಕೊಡಲದ
ತಳಿಯೆ ಪಾಕದಿ ಪಂಕ್ತಿಯಲಿ ಪುಳವಡಗಿ ಶುದ್ಧಾಗೆ
ತಿಳಿದು ಜಂಗಮರಾಗಳವರನು
ತಳುವದಲೆ ಬರಿಸುತ್ತ ಪಂಕ್ತಿಯೊ
ಳಿಳಸಿ ಭೋಜನಗೈದು ತಪ್ಪಾಯ್ತೆಂದು ನುತಿಸಿದರು ॥ ೪೮ ॥

ನಮ್ಮನೇತಕನುತಿಪಿರಮಮ
ನಿಮ್ಮ ಪದಯುಗ ತೀರ್ಥ ಮಹಿಮೆಯು
ಹಮ್ಮು ಹರಿದಾ ಶಾಂತ ಮಹಿಮನೆ ಮಹಂತ ಜಂಗಮನು
ನೆಮ್ಮದರೆ ಲೇಸಹುದು ನಿಮಗೆಂ
ದುಮ್ಮಯದಿ ಬೋಧಿಸುತ ಶರಣರ
ಗಮ್ಮನೇ ಕೂಡುತ್ತಲವರಾಶ್ರಮಕೆ ಬರಮಾಡಿ ॥ ೪೯ ॥

ಸಾಕು ಶರಣನೆ ಜಗದ ಜಂಜಡ
ವೇಕವಾದಾ ಪರದೊಳುಂ ಮನ
ವೇಕ ಗೊಳಿಪುದೆ ಲೇಸು ನೀ ತಿಳಿಯೆಂದು ನಡೆತಂದು
ಲೋಕವರಿಯಲು ವಾಘದರಿಯಲಿ
ಸೌಖ್ಯ ಪದವಂ ಶೇರ್ದನಿಂದಿಗೆ
ಮೂಕಲ್ಲನಿರಿಸುತಲಿ ಪೂಜಿಪರಾ ಸಮಾಧಿಯನು ॥ ೫೦ ॥

ಮತ್ತೆ ಮರುದಿವಸಲ್ಲಮಾಪುರ
ಸತ್ಯ ಸಾಧು ಶಿವಪ್ಪನತಿ ಮುದ
ವೆತ್ತು ಬರುತಂ ಶರಣನಂ ಗಣ ತಾಣದಲಿ ನಿಂದು
ಕರ್ತುವೇಯೀ ಕುದುರೆ ನಿಲ್ಲದು
ಇತ್ತ ಬಾರದುಮಿನ್ನು ಬಲುಜವ
ವೆತ್ತು ಸಾಗುವದೆಂದು ಸಾರಲು ಕೊಡಲುಮಪ್ಪಣೆಯ ॥ ೫೧ ॥

ಪುರದ ಭಕ್ತರಿಗೆಲ್ಲರಿಗೆ ಹೀ
ಗಿರದೆ ನುಡಿಯುತ ಸಾಗುತಲ್ಲಿಂ
ಬರುತ ಬಕರೆನವನಕೆ ಸಂತಸದಿಂದೆಲೆಲೊ ಭಕುತ
ಇರಿಸುಮೀ ಕುದುರೆಯನುಮಿಲ್ಲೇ
ಭರದಿ ತೆಗ್ಗೊಂದಗುಳು ಎಂದೆನು
ತೊರೆದು ನಿರ್ವಾಣತೆಯನಂ ಕೈಕೊಂಡನತಿ ಮುದದಿ ॥ ೫೨ ॥

ಮಾರಹರ ಶರಣಾಗ್ರಗಣ್ಯರ
ಚಾರುಪದ ಸೇವಿಸುವ ಚಿಮ್ಮಡ
ದೂರ ಭಕ್ತಲ್ಲಪ್ಪ ಷಟುಸ್ಥಲ ಕೀಲು ಮರಿದಂದು
ಸಾರುವೆನು ಮಹಿಮಾಂತ ಮೂರ್ತಿಯೇ
ಸಾರಲೆನಗಪ್ಪಣೆಯ ನೀವುದು
ವೀರ ಗುರುವರ ಕಾಡಸಿದ್ಧನ ಸೇರಿ ಮೆರೆಯುವೆನು ॥ ೫೩ ॥

ಎನುವ ಗುರು ಭಕ್ತನಿಗೆಯಾಜ್ಞೆಯ
ಸನುಮತೀಯುತ ತನ್ನ ಪಟ್ಟದ
ಗುಣ ವಿಶಿಷ್ಟನು ಶಿಷ್ಯನಾ ಅಲ್ಲಮದ ಗುರುಮೂರ್ತಿ
ಎನುವ ತನಯಗೆ ಶರಣ ಸ್ಥಲದಾ
ಘನತೆಯನು ಕೃತಪಡಿಸುತಂ ತವ
ಮನದಿ ನೆನೆದು ನೆರೆದ ಪ್ರಮಥರ ಬಯಲ ಭಾವವನಂ ॥ ೫೪ ॥

ಇಂತು ತನ್ನಯ ಬಳಿಯೊಳಿರ್ದಾ
ಸಂತ ಶರಣರು ಸಾರಲನಿತಕೆ
ಚಿಂತೆ ರಹಿತನು ಮನದಿ ಹರುಷವನಾಂತು ಪೂರ್ವದಲಿ
ಪ್ರಾಂತ ಕಲ್ಯಾಣ್ಬಸವ ಪ್ರಮಥರ
ಸಾಂತ ಪ್ರಮಥಾಧಿಪರು ತಮ್ಮಯ
ಶಾಂತ ಭಾರತಮಾತೆ ಗರ್ಭವ ಪೊಕ್ಕ ತೆರನಾಯ್ತು ॥ ೫೫ ॥

ಎಂದು ಸ್ತುತಿಸುತ ಮಂದಹಾಸದಿ
ಸಿಂಧು ಸಮ ಗಂಭೀರ ಸದ್ಗುಣಿ
ಬಂದ ಬಟ್ಟೆಯ ಕಾಣ್ವದೇ ಸುಲಭೆಂದು ಹಾರೈಸಿ
ತಂದೆ ಶಿವಲಿಂಗೇಶ ಚರವರ
ರಂದದಪ್ಪಣೆ ಬರವನಾಶಿಸು
ತೆಂದಿನಂತೆಯು ತನ್ನ ಕಾಯಕದಿರ್ದ ಶಿವಶರಣ ॥ ೫೬ ॥

ಶರಣ ಶಿವಲಿಂಗೇಶ್ವರನವರ
ಚರಿತೆಯನು ಶ್ರೀಗುರುವಿನೋನ್ನತ
ಚರಣ ಸರಸಿಜ ಮಧುಕರನು ಮಡಿವಾಳ ನಾಮಕನು
ವರದ ನೀ ಸುಧೆ ಸಾಮ್ಯ ಕಾವ್ಯಂ
ಹರನ ಭಕ್ತರು ಕೇಳೆ ಸತ್ಪಥ
ದೊರಕೊಳಗುಮಿಷ್ಟಾರ್ಥ ಸಿದ್ಧಿಯು ಚತುರ್ದಶವು ಸಂಧಿಯಿದು ॥ ೫೭ ॥

ಅಂತು ಸಂಧಿ ೧೪ಕ್ಕಂ ಪವನು ೧೧೪೩ಕ್ಕಂ ಮಂಗಲಮಹಾ ಶ್ರೀ ಶ್ರೀ

## ಸಂಧಿ ೧೫

ಆವ ವಿಷಯವ ನೆನೆಯುದೇ ಸ
ದ್ಭಾವಿ ಚಿತ್ಕಲಲಿಂಗ ಸಂಸ್ಮರ
ಣಾವಲಂಬನದಡಗಿದನು ತಜ್ಜ್ಯೋತಿರ್ಲಿಂಗದೊಳು ॥ ಪಲ್ಲ ॥

ಪರಮ ಶಿವ ಪರಮಾತ್ಮ ಪರಮೇ
ಶ್ವರ ಪರಾತ್ಪರ ರೂಪ ಪರತರ
ಪರಮಗುರು ಪರತತ್ವ ಪರಮಾನಂದ ಪರಿಪೂರ್ಣ
ಪರಮ ಪುರುಷ ಪರೇಶ ಪಾರ್ವತಿ
ಯರಸ ಪಾವನ ಶೀಲ ಪರಶಿವ
ಪುರ ನಿವಾಸನೆ ಕರುಣಿಸುತ ಕಾಯೆನ್ನ ಮದ್ಗುರುವೆ ॥ ೧ ॥

ಇಂತು ಗುರು ಚರ ಲಿಂಗ ಭಾಗ್ಯವ
ನಾಂತ ಶ್ರೀ ಶಿವಲಿಂಗ ಶರಣನು
ಮಂತುಮಿಂತೆಂದೆನ್ನದೊಳಹೊರಗೊಂದೆ ಭಾವದಲಿ
ಹಂತ ಚರವರ ಚಿತ್ಕಲೇಂದನ
ಸಂತತಂ ಸ್ಮರಿಸುತಿರೆ ತವ ಬಳಿ
ತಾಂತರಂಗನು ಶರಣ ನಿದ್ರಿಸುತಿರಲು ಮೈದೋರಿ ॥ ೨ ॥

ಮಮ ತನುಯು ಶಿವಲಿಂಗ ಶರಣ
ಪ್ರಮಥ ಸೇವೆಯುಗ್ಗೈದಿ ನಿನ್ನಯ
ವಿಮಲ ಮಾನಸ ಕಮಲವರ್ಪಿತವಾಯ್ತು ಶಿವಪದಕೆ
ಶ್ರಮವು ಬೇಡಿನ್ನೀ ಜಗದ ಸುಖ
ಭ್ರಮೆ ಇದಲ್ಲದೆ ಸತ್ಯವಲ್ಲವು
ರಮಿಸು ನೀ ಸಾಯೋಜ್ಯದಲಿ ಇಹಪರಕೆ ಬೇರಾಗಿ ॥ ೩ ॥

ದೇವ ತಾನಾಗಿರಲು ಭಯವಿಂ
ನಾವು ಪೈಸುಖವಾತ್ಮನಿಗೆ ದು
ರ್ಜೀವ ಭಾವವ ಗೆಲಿದುಮಿರಲೇನಹುದು ಇಹಪರವಾ
ಸಾವು ಹುಟ್ಟುವದಂದುಗಂ ಬಿಡ
ದಾವ ಕಾಲದಿ ಚರಿಸಬೇಕೆಲೆ
ಪಾವನಾತ್ಮಕ ತರಳ ಭಕ್ತಿಯ ತಿರುಳ ಬೇಡ್ಮರುಳ ॥ ೪ ॥

ಸತ್ಯ ಸೂಸನ್ಮಾರ್ಗ ಸೂಚಕ
ಮೃತ್ಯು ಮಾಯಾ ಹರಣ ತಾರಕ
ಚಿತ್ಕಲಾ ಚಿತ್ಕಾಮಿನೀಸಂಪ್ರೀತ ಶುಭ ಚರಿತಾ
ಮುಕ್ತ ಮಹಿಮಾಸಕ್ತ ಸುಜ್ಞಾ
ನೋಕ್ತಿ ಬೋಧಕ ಸರ್ವ ಸಾಧಕ
ಭೃತ್ಯನಪರಾಧವನು ಕ್ಷಮಿಸುತ ದಯವ ನೀಡುವದು ॥ ೫ ॥

ಆದರೆಲೆ ಶಿವಲಿಂಗ ನೀನೀ
ಗಾದರಿಸಿ ಕೇಳುವದು ಮುಂದಿ
ನ್ನಾ ದುರ್ಗಿ ಜಗಜೀವಿಗಳನಂ ಹಿಂಡಿ ರಕುತವನು
ಮೋದದಿಂಪಾನಿಸುವ ಕಜ್ಜದಿ
ಈ ಧರೆಗೆ ತಾ ಚರಿಸಿ ಬರ್ಪಳು
ಕಾದುಕೊಂಡಿರುಮವಳ ಗೋಷ್ಠಿಯ ನೀನು ಶರಣೇಶಾ ॥ ೬ ॥

ಎನುತ ಚಿನುಮಯ ಚರವರಾರ್ಯನು
ತನಯ ಶಿವಲಿಂಗನಿಗೆ ಸೂಚಿಸಿ
ಮನದ ಮರೆಯಾಗಿರುವ ಸತ್ಯದವೋಲ್ಬಯಲುಮಾಗೆ
ಅನಿತರಲಿ ಎಚ್ಚರಿಸಿ ಶಿವ ಶಿವ
ಮನಕೆ ನಿಲುಕದ ಮೂರ್ತಿ ಈ ದಿನ
ಕನಸಿನಲಿ ಬಂದೆನಗೆ ಸುವಿಚಾರವನು ಪರಿಪರಿಯು ॥ ೭ ॥

ಬೋಧಿಸುತ ಮರೆಯಾದನೆಂದ
ಲ್ಹಾದಕರಮಾಗುತಲಿ ಶರಣನು
ಕಾದುಕೊಂಡಿರುತಿರ್ದ ದುರ್ಗಿಯ ಬರವ ಸುರತರುವಾ
ಆ ದಯಾಸಿಧಿ ಪೇಳ್ದ ತೆರ ಮುಂ
ದಾ ದುರ್ಗಿ ಸಮನಿಸಲು ಗುರುಳಿಯು
ಭಾದಕದ ರುಜೆಯಡಸಿ ಜಗವತಿ ತಳಮಳಿಸುತಿರಲು ॥ ೮ ॥

ಗ್ರಾಮ ಪಟ್ಟಣ ಹಳ್ಳಿಯೊಳು ಹೆಣ
ಹೋಮವಲ್ಲದೆ ಕ್ಷೇಮವೆಲ್ಲಿಯ
ದಾಮಯವು ಮಿತಿ ಮೀರಿ ಮಾಧನಪುರವು ನಡುಗಿಸಲು
ಕಾಮದಾರರು ಬೆದರಿ ಪುರಜನ
ಸ್ತೋಮವೆಲ್ಲಕೆ ಪೊಳಲ ಪೊರಗಿರು
ನೇಮಿಸಲು ಚಿಂತಿಸುತೆ ಶರಣನು ತನ್ನ ಮಠದಿರಲು ॥ ೯ ॥

ಕಾಲದಲಿ ಪುರ ಭಕ್ತರೆಲ್ಲರು
ವ್ಯಾಳಧರ ಶರಣೇಶ ನಿಮಗನು
ಕೂಲರಾರಿಹರಿಲ್ಲಿ ನಡೆರೆನೆ ಬೇಡಿರೆಂದನುತೆ
ಶೀಲಗುಣ ಗುರುಮೂರ್ತಿ ಶಿಷ್ಯ ದ
ಯಾಳು ಶರಣರ ಪಾದ ಸೇವೆಯ
ಲಾಲನದಿ ಗೈಯ್ಯುತ್ತೆಯವರನುಮಗಲದಿರುತಿಹನು ॥ ೧೦ ॥

ನಿತ್ಯ ಹತ್ತುದಿನಾರು ಜೀವರ
ಕುತ್ತಿಗೊತ್ತುತ ಕೊಲ್ವಳಯ್ಯೋ
ಎತ್ತಣಿಂದೀ ಗುರುಳಿ ಬೇನೆಯು ಬಂದು ಮುಸುಕಿದುದೋ
ಮೃತ್ಯು ದೇವತೆ ಮಾರಿ ದುರ್ಗಿಯೇ
ಭಕ್ತ ಪುತ್ರರ ಕೊಲ್ಲದಿರು ಶಿವ
ತೆತ್ತಿಗನುಮಿವನಿಂದ ಶಾಂತಿಯ ಕೊಳ್ಪದೌ ಎಂದು ॥ ೧೧ ॥

ವೀರ ಶರಣನು ಸಾರಿ ಬಸವಾ
ಗಾರ ಮುಂಬದಿ ದ್ವಾರದೊಳು ಘನ
ವೀರಶೈವದಿ ಚೀರಿ ವೀರಾಸನವನೇ ಬಲಿದು
ಮಾರಿ ಬಾ ಮಂಮಾಯಿ ಬಾ ಛೀ
ಮಾರಿ ದುರ್ಗಿಯೆ ಭೀಷಣೆಯೆ ಬಾ
ಸೇರುಮಿವನೊಳು ಪೌರ ಜನರಂ ಕ್ರೂರಿ ಕೊಲಬೇಡಾ ॥ ೧೨ ॥

ಸಸಿನೆ ಬಾ ಎಂದುಸುರಿ ಮಿಸುಕದ
ಅಸಮ ಲಿಂಗಾರ್ಚಕನು ಬಿಸಿ ಬಿಸಿ
ಯುಸುರು ಸೂಸುತ ಕೋಪ ಮುಪ್ರೇಯನಾಂತು ಕರ್ಕಶದ
ಮುಸುಡಿನಿಂ ಕೆಂಗಣ್ಣ ಕಿಡಿಗಳ
ವಿಶಿಖನುಗುಳುತ ವೀರ ಶರಭನೊ
ಪೊಸಬಗೆಯು ಭೈರವನವೋಲ್ಕಂಗೆಸೆದನಿವ ನರನೆ ॥ ೧೩ ॥

ಭಂಡ ಭೂತ ಪ್ರಾಣಿಗಳನಂ
ಹಿಂಡಿರಕುತವ ಪಾನಿಸುವ ಚಾ
ಮುಂಡಿ ಚಂಡಿ ಕರಾಳಿ ಕಾಳಾರಾತ್ರಿ ಕೌಮಾರಿ
ಗೊಂಡು ಭಯ ಬೆಂಗೊಂಡು ಬರುತಂ
ಖಂಡ ಶಶಿಧರ ಶರಣ ದಿರೊಳು
ಮಂಡಿಸಿವಳಾ ಪ್ಲೇಗಮಾರಿಣಿ ನೆನೆದ ಬಗೆಯೇನು ॥ ೧೪ ॥

ತಾಯೆ ನಮ್ಮಯ ಭಕ್ತ ಜನರಂ
ಸಾಯಗೊಳಿಸಲು ಬೇಡ ನಿನ್ನಯ
ಶ್ರೇಯವೇನದು ಬೇಡು ಕೊಡಲಾಂ ಸಿದ್ಧಸಿಹನಲ್ತೆ
ಕಾಯಜಾಹರ ಶರನೇ ವಳಿ
ತಾಯಿತ್ತೈ ಸಾವಿರಕೆಯೋರ್ವ ಸು
ಕಾಯ ಸತ್ಪುರುಷನೆನುವ ನೀತಿಯ ವಚನಕನುಸರಿಸಿ ॥ ೧೫ ॥

ನಿನ್ನ ಮೃದು ಕಾಯವನುಮಿವಳಿಗೆ
ನನ್ನಯಿಂದರ್ಪಿಸಿದೆಯಾದರೆ
ಚುನ್ನವೀ ಪುರದಿರುವ ಪಾಮರರಾಸೆಯೆನಗಿಲ್ಲ
ಮನ್ನಿಸುತಲೀ ಪುರದಿ ದೂರಾ
ಗಿನ್ನು ಮುಂದಕೆ ಗಮಿಪೆ ಸುಗುಣೋ
ತ್ಪನ್ನ ತಮ್ಮಯ ಪಾದದಾಣೆಯು ಸಟೆಯು ನಾನಾಡೆ ॥ ೧೬ ॥

ಆದಡಾಯಿತುಮೀದಿನಂ ನೀ
ನಾದರಿಸುತೀದೇಹ ಸ್ವೀಕರಿ
ಸಾದ್ಭುತಾಕಾರಿಣಿಯೆ ಶಾಂತಿಯುಮಾಯ್ತೆ ದಿಟಮಾಯ್ತು
ಸಾಧು ಶರಣನು ಶಾಂತಿಯಿಂ ತಾ
ಸಾಧಿಸಿದ ವೀರಾಸನವನುಳಿ
ದಾದಿ ಪರಶಿವಲಿಂಗ ಮೂರ್ತಿಯ ಪೂಜೆ ವಿರಚಿಸುತ ॥ ೧೭ ॥

ರಾತ್ರಿಯಲಿ ಪ್ರಾಸಾದ ಸಲಿಸವೆ
ಪ್ರಾತದಾಚರಣೆಯನು ತೀರ್ಚಿಸಿ
ನೀತಿಯುತ ಗುರುಮೂರ್ತಿ ಶಿಷ್ಯನ ಕರೆಯುತೆಮಗಿಂದು
ಪ್ರೀತಿಯಾಗಿದೆ ಚರರ ತೃಪ್ತಿಸ
ಲಾತುರದಿ ಕರತಾಹುದೆಂದೆನ
ಲಾತ ಮನ್ನಿಸಿ ಕೊಡಿಸಿದ ಗುಡಿಗುಡಿಸಲಂ ಚರಿಸಿ ॥ ೧೮ ॥

ಬಂದ ಪ್ರಥಮರಿಗೊಂದಿಸುತಲಾ
ನಂದ ಸಂಭ್ರಮ ಸದ್ವಿಧಿಯ ತೆರ
ದಂದು ಪೂಜಿಸಿ ದಿನ ನುಡಿ ಸಸಿನ ಭಕ್ಷ ಭೋಜ್ಯಗಳಿಂ
ಚಂದ ತೃಪ್ತಿಸಿ ತಾಂಬುಲೀಯುತ
ಲೊಂದು ರೌಪ್ಯಕ ದಕ್ಷಣೆತ್ತವ
ರಿಂದಲಾಶೀರ್ವಾದಮಂ ಪೊಂದಿದನು ಮರುದಿನದಿ ॥ ೧೯ ॥

ರುಜೆಯಡಸೆ ಶರಣರಿಗೆಯಾಗಳೆ
ನಿಜ ಶಿಷ್ಯನನು ಕೂಡಿಕೊಳುತಂ
ಸುಜನರಿರುಗುಡ ಸಲಿಗೆ ನಡೆದನು ತೀವ್ರ ಗಮನದೊಳು
ಭುಜಗ ಸತ್ತಿರೆ ಪಥದಿ ಮತ್ತೊಂ
ದಜಗರವು ಮೆಳದೊಯ್ಕೆ ಕಾಣುತ
ಗಜದನುಜಹರ ಲೀಲೆ ಶಿಷ್ಯನೆ ಭಯವು ಬೇಡೆನಲು ॥ ೨೦ ॥

ಬೇಡ ಗುರುಗಳೆ ಮಾರ್ಗದಲಿ ಕಿಡಿ
ಗೇಡಿ ಸರ್ಪವು ಮಡಿದು ಬಿದ್ದಿದೆ
ನೋಡಲದು ಮತ್ತೊಂದು ಮೆಳದೊಯ್ತುದರ ಬಗೆಯೇನು
ಕೇಡುದಾರಿಗೆ ಬಪ್ಪುದೋ ನೀ
ನಾಡಿದುದು ತಾ ನಾಳೆ ತಿಳಿವದು
ಖೋಡಿಯುಪಶಕನ್ಮರುಳಿರ್ಪೆ ಮುಂದ್ದೆಜ್ಜೆಯಿಡಬರದು ॥ ೨೧ ॥

ಮರುಳ ಶಿಷ್ಯನೆ ಮರಳಿ ಪೋಗಲು
ದುರುಳವಪಶುಕುನಾಯಿತೇ ಬಿಡು
ಹರನು ಭುಜ ಗಾಭರಣವಂ ಗೈದುದನು ನೀನರಿಯೆ
ಶರಣರೇ ಸತ್ಯಹುದು ನಿಮ್ಮಯ
ಕರುಣವಿದ್ದಂತಾಗಲೆನುತತಿ
ಭರದಿ ಪೋಗಲು ಸರ್ಪ ಗುಡಿಸಲು ಜನರು ಕುಡುಬ್ಬಿ ॥ ೨೨ ॥

ಇಂದುಧರ ಶರಣನಿಗೆ ನಮಿಸುತ
ತಂದು ಸಲಿಲದ ಕುಂಭ ಸುರಿವುತ
ವೃಂದ ತೆಂಗಿನಕಾಯಿ ಕರ್ಪೂರವಿತ್ತು ನೆರೆ ಭಜಿಸಿ
ಬಂದ ಸಂಕಟ ದೂರ ಮಾಡ್ಯೆ
ಕೊಂದುಪಾಕುವಳೆಮ್ಮ ಪ್ಲೇಗಿಣೆ
ತಂದೆ ನೀನಮಗಲ್ಲದಿನ್ನಾರಿಹರು ಕಾಪ್ಪವರು ॥ ೨೩ ॥

ಕಾಯ್ವ ಕೊಲುವದಿವೆರಡಕೆಯು ತಾ
ಮಾಯಹರ ಮಹಾದೇವನಲ್ಲದೆ
ಹೇಯ ಜನನ್ಮರಣದಲಿ ಬೇಯುವ ಪಾಮರರಿಗೊಶವೆ
ಜೀಯ ಶಿವಲಿಂಗೇಶ ಪರರಿಂ
ನೋಯಗೊಡದಾ ಸ್ವಾರ್ಥ ತ್ಯಾಗಿಯೆ
ಕಾಯಜ ಹರ ಶರಣ ನೀನೇ ಶಿವನು ದಿಟ ದಿಟವು ॥ ೨೪ ॥

ನಮ್ಮನೇತಕೆ ಪೊಗಳುತಿರ್ಪಿರಿ
ಸುಮ್ಮನದಿ ಶಿವ ಸ್ಮರಣೆ ಗೈಯ್ಯಲು
ಹಮ್ಮುಹ ಹುಸಿ ಪರಪದವು ಕರತಳವು ಎನುತ್ತರಿಸಿ
ತಮ್ಮ ತಾಣಕೆ ತೆರಳಿ ತ್ವರ ಬರು
ತ್ತುಮ್ಮುಳದಿ ಶಿವಪೂಜೆಗೈಯ್ಯುತ
ತಮ್ಮ ಕರೆ ಧುತ್ತರಗಿ ಹಿರಿಯನ ತ್ವರದಿ ಗುರುಮೂರ್ತಿ ॥ ೨೫ ॥

ಕರೆದು ತರೆ ಶಿವಲಿಂಗ ಹಿರಿಯನೆ
ಹರನ ಸೇವೆಯು ಪೂರ್ತಿಗೊಂಡಿತು
ಪುರದ ಜನ ಸುಖಿಯಾಗಿರ್ಪತವಾಯ್ತುಮೀ ತನುವಂ
ತೆರಳುವೆವು ನಾವಿನ್ನು ಶಿವಪದ
ಕರರೆ ಹೀಗೇ ಕಾಡ್ವಿರ್ಪೈ ಶಿವ
ಶರಣರೇ ನಿಮಗಾವ ಸಂಕಟ ಪೋಗದಿರಿ ನೀವು ॥ ೨೬ ॥

ಏನು ಹಿರಿಯನೆ ನಾನು ಕರೆದರೆ
ನೀನು ಹಿಂದುಳಿಯದಲೆ ಬಂದಿಯು
ಮಾನವೇಶ ಮಹೇಶ ಕರೆಯಲು ನಿಲ್ಲಲಾನೆಂತು
ನೂನ ನೀತಿಯಿದಲ್ಲವೇ ಗುಣ
ವಾನಿ ಹಿರಿಯನೆ ಎನುತ ಶರಣನು
ಮೌನವಂ ತಳೆ ಕಳವಳಿಸಿ ನಿಮ್ಮಿಚ್ಛೆ ಏನಿಹುದು ॥ ೨೭ ॥

ಎಂದು ಬೆಸಗೊಳೆ ಸಲೆ ಸಮಾಧಿಯು
ನಂದಿ ಎದುರಂಗಣದಿಯಾಗುವ
ದೊಂದೆ ವಾಂಛೆಯದಲ್ಲದಿನ್ನೇನಿಲ್ಲವೆನೆ ಹಿರಿಯ
ಹೊಂದಿ ನಮಿಸುತ ನಿಮ್ಮ ಮನದಾ
ನಂದ ಗೋಷ್ಠಿಯನಿಲ್ಲೆ ಸಿದ್ಧಿಪ
ದಂದುಗೆನ್ನದು ನಿಜವೆ ನಿಜದುಸಿಯಿಲ್ಲ ಶಿವಶರಣ ॥ ೨೮ ॥

ಬರಲುಮನಿತಕೆ ಪುರದ ಭಕ್ತರು
ನೆರೆದು ಶರಣರ ಲೋಕಯಾತ್ರೆಯು
ಪರಿ ಸಮಾಪ್ತಿಯ ಕಾಲವೊದಗಿದುದರರೆ ನಾವಿನ್ನು
ಇರುವೆಡೆಯುಳುದ್ಧಾರಮಾಗುವ
ಪರಿಯ ನಾನದೆ ಕೆಟ್ಟೆವಕಟಾ
ದೊರಳಿದರು ತಮ್ಮೊಳಗೆ ಸರ್ವರು ಮುಂದೆ ಗತಿಯೇನು || ೨೯ ||

ಇದನರಿದು ಗುರುಮೂರ್ತಿ ಶಿಷ್ಯನು
ಪಡೆದು ಶರಣರಿಗರುಹಲೀ ಗ್ರಾ
ಮದೊಳು ನಾಲ್ವತ್ತಾರು ವರುಷಂ ಬಾಳ್ದನನಿತಕ್ಕೆ
ಸದಮಲತೆಯಂ ಪಡೆದುಕೊಳಲಾ
ಗದೆ ಪಡೆವ ಮನವಿಂದೆ ಪುಟ್ಟಿತೆ
ತುದಿಯೊಳಿವರೇಂ ಮಾಳ್ಪುದೆಂದಾಡುತಲಿ ಚಿತ್ಘನನು || ೩೦ ||

ಮತಿಯುತರೆ ನೀವೇಕೆ ಪಂಬಲಿ
ಸುತಲಿ ಮರಗುವಿರಯ್ಯೊ ದುಃಖದಿ
ಕ್ಷಿತಿಯ ಪಾಲಿಸುವಾತನು ಹರನುದ್ಧರಿಸುವನು ಬಿಡದೆ
ಕೃತಕ ಕಾಪಟ್ಯವನು ನೀಗುತ
ಸತತ ಸನ್ಮಾರ್ಗದಲಿ ನಡೆ ಪರ
ಗತಿಯು ನಿಮ್ಮೆಲ್ಲರಿಗೆ ತಾ ಲಭಿಸುವದು ಸುಲಭದಲಿ || ೩೧ ||

ಬಳಿಕವಾ ದಿನವಂಗರುಜೆಯುದು
ಬೆಳದುದಾ ಶಿವಲಿಂಗ ಶರಣಗೆ
ತಿಳಿದು ನೆರೆದಿಹ ಸರ್ವ ಭಕ್ತರು ಮುಳುಗೆ ದುಃಖದಲಿ
ಅಳುವದೇತಕೆ ಭಕ್ತರಿರೆ ನಿ
ಮ್ಮಳವೆಯಲ್ಲವು ಎಂದಿಗಾದರು
ಅಳಿಯುದಲೆ ಉಳಿಯುವರುಮಾರಿಲ್ಲೆನಲಿಕನಿತರಲಿ || ೩೨ ||

ಭಕ್ತ ಮಹಂತನು ಬಂದು ಶಿವಶರ
ಣೋತ್ತಮನೆ ತಮ್ಮಾಶೀರ್ವಾದದ
ಪುತ್ಥಳಿಯು ಮಮಸುತೆಯು ಮಂಬಾನ್ವಿತೆಯು ಬಲುರುಜದಿ
ಬತ್ತಿರಸನೆಯು ಪ್ರಾಣವಾಯುವು
ಬಿತ್ತರಿಸಿ ಗುರುಗುಟ್ಟುತಿದೆ ಹಾ
ಸತ್ತು ಪೋಗುವಳ್ಗೀಗೆ ಮಾಡಲಿ ಪೊರೆಯೈ ಶಿವಲಿಂಗ || ೩೩ ||

ಪೊರೆಯಲೋಸುಗ ನಮ್ಮ ಸಂಗಡ
ಬರುವಳಾಕೆಯು ವೀರಮಾಂಬೆಯು
ಅರಿಯಲಿಲ್ಲಿಗೆ ಮೂರು ಜನ್ಮಗಳಾಗಿ ಮೇಲಿನ್ನು
ಪರಮ ಮುಕ್ತಿಯ ಪಡೆಯುತಿರ್ಪಳು
ತರಳೆ ನಿನ್ನವಳಲ್ಲ ಬಿಡು ಬಿಡು
ಬರಿಯ ಭ್ರಮೆ ನಿನಗೇಕೆ ಎನ್ನೊಶವಲ್ಲ ಶಿವಲೀಲೆ ॥ ೩೪ ॥

ಎನುತ ಚರ ಶಿವಲಿಂಗ ದೇವರ
ಘನ ಪದಾಂತರ ಬರಿಸಿ ದೇವನೆ
ಇನಿತು ದಿನಮಿವಸಿಂ ಘಟಿಸಿದಪರಾಧ ಕ್ಷಮಿಸುತಲಿ
ವಿನಯದಂಘ್ರಿ ಜಲಂ ಪ್ರಸಾದಂ
ಕರಿಕರಂಬೆತ್ತೀಯ ಬೇಕೆನೆ
ಘನ ದಯಾನಿಧಿಯಿತ್ತನೆರಡಾವರಣ ಶರಣನಿಗೆ ॥ ೩೫ ॥

ಇನ್ನಿವಗೆಯವಕಾಶಮಿಲ್ಲಂ
ಮುನ್ನೆಗಳ್ವ ನಿಮ್ಮೆಲ್ಲ ಕಾರ್ಯವ
ಸನ್ನುತಾಗಮ ವಿಧಿ ತೆರದಿ ಪೂರೈಸಬೇಕೆಂದು
ತನ್ನ ಬಳಿಮಿಹ ಭಕ್ತ ಚರ ಸಂ
ಪನ್ನರಿಗೆ ಬಿನ್ನೈಸಿ ಶಿವಮನು
ವನ್ನು ಜಪಿಸುತ್ತಂಘ್ರಿ ಜಲ ಪ್ರಾಸಾದ ಸೇವಿಸಲು ॥ ೩೬ ॥

ನಮಿಸಿ ಗುರುಮೂರ್ತೆಪ್ಪ ಶಿಷ್ಯನು
ರಮಿಸಿ ನಿತ್ಯಾನಂದ ಪದದಲಿ
ವಿಮಲ ಪ್ರಭೆಯಿಂ ಬೆಳಗ್ಸುದೆನಗರುಹದಲ ಪೋಗುವರೇ
ತಮಗೆ ಎನ್ನಿಂದಾವ ಸೇವೆಯು
ಕ್ರಮದಿ ಕಾರಣವೆಸಿಸಲಿಲ್ಲವೆ
ಶ್ರಮವಿದುಂ ಭವ ಬಂಧದಲಿ ತೊಳಗುವವು ಬಿಡಿಸೆಂದು ॥ ೩೭ ॥

ಬೇಡಿ ದುಃಖದಿ ಕೂಡಿ ಶರಣರ
ನೋಡಿ ಪದದುರುಳಾಡಿ ವಂದನೆ
ಮಾಡಿ ಮನ ಮಮತೆಯುಲಿ ವಾಂಛೆಯನಾಡೆ ಗೈಯಂದು
ಪೌ್ರಢ ಗುರುಪದ ಬಳಿಯ ಬಿಡದಲೆ
ಜೋಡಿಸುತ ಕರಕಮಲದ್ವಯಗಳ
ನೀಡಿ ಸಾಷ್ಟಾಂಗದಲಿ ಮೆರೆಯುತಿರ್ದ ಶಿಷ್ಯನನು ॥ ೩೮ ॥

ಕರುಣ ದೃಷ್ಟಿಯು ಕಳವಳಿಂಕಂ
ಡಿರದೆ ನಿತ್ಯಾನಂದ ಭವಹರ
ಶರಣ ಪ್ರೇಮಾಲಿಂಗನದಿ ತರಳನನು ಬಿಗಿದಪ್ಪಿ
ಸುರಿವ ಸಂತೋಷಾಶ್ರು ಜಲದಿಂ
ದಿರದೆ ಶರಣರು ತಮ್ಮ ಶಿಷ್ಯಗೆ
ಪರಮ ಜೀವನ್ಮುಕ್ತಿ ವಿವರವ ಸೂಚಿಸಿದರ್ಬಿಡದೆ ॥ ೩೯ ॥

ಮಾನವಾಕೃತಿಯಿಂದೆ ತದ್ಭವ
ಕಾನನಂಗಳ ಸುಡುವ ಸಮ್ಯ
ಜ್ಞಾನವಾಗಲಿ ಬೇಕೆನುತೆ ಶಿವಭಕ್ತಿ ಭರದಿಂದೆ
ಸ್ವಾನುಭಾವನೆವಿಡಿದು ಕೇಳಿದೆ
ನಾ ನಿನಗೆ ಬೋಧಿಸುವೆ ಸುತನವ
ಧಾನಿಸೆನುತಾ ಭಕ್ತ ಸಮೂಹದಿ ಸಾರ್ದ ಶಿವಶರಣ ॥ ೪೦ ॥

ವೇದದೊಳಗಿಹ ಕರ್ಮಕಾಂಡದ
ಬೋಧೆಯಿಂದ ಹರೀಷ ವಿಧಿ ಮೊದ
ಲಾದ ಕಲ್ಪಿತನಾಮ ರೂಪುಗಳಲ್ಲಿ ಮೋಹಿಸುತೆ
ವಾದಿಸುವ ಕರ್ಮಿಗಳ ಜನ್ಮದ
ಬಾಧೆಗೊಳಗಾಗದೆ ಸದಾ ಸ
ದ್ಬೋಧ ಘನ ಚಿಜ್ಜ್ಯೋತಿಯೇ ನಾನೆಂದು ನಿಶ್ಚೈಸು ॥ ೪೧ ॥

ಮನದ ಬಯಕೆಯುನೆನ್ನದೆನ್ನದೆ
ತನು ಕರಣ ಕರ್ಮಗಳ ನಿನ್ನೊಳು
ಗಣಿಸದೇ ತದ್ಭೇದ ಶಾಸ್ತ್ರದ ನುಡಿಗೆ ಕಿವಿಗೊಡದೆ
ಅನುದಿನದಿ ಗುರು ಪೇಳಿದರ್ಥವ
ಮನನ ಮಾಡುತ ನಿರ್ಗುಣಾದ್ವಯ
ಘನ ಪರಮ ಚಿಜ್ಜ್ಯೋತಿಯೇ ನಾನೆಂದು ನಿಶ್ಚೈಸು ॥ ೪೨ ॥

ತತ್ವಮಸಿ ಎಂಬಲ್ಲಿ ಸರ್ವ
ಜ್ಞತ್ವ ಕಿಂಚಿತ್‌ಜ್ಞತ್ವ ಬಿಡಲೇ
ಕತ್ವದಸಿ ಇಂದು ಭಯ ಚೈತನ್ಯಗಳಿಗಹುದೆಂಬ
ತತ್ವವರಿದೀ ದೃಶ್ಯಚಯಮಿ
ಥ್ಯತ್ವ ಸರ್ವಜ್ಞಾನದಿಂ ನಿ
ಸ್ಸತ್ವ ಸುಖ ಚಿಜ್ಜ್ಯೋತಿಯೇ ನಾನೆಂದು ಗತಿಗೊಳ್ಳೆಂದು ॥ ೪೩ ॥

ತನುವು ನಾನಲ್ಲಂತರಂಗದ
ಮನವು ನಾನಲ್ಲಸುಗಳಲ್ಲವು
ಗುಣಕರಣ ಬುದ್ಧೀಂದ್ರಿಯಾದಿಗಳೊಂದು ನಾನಲ್ಲ
ಇನಿತಿವುಂ ತತ್ಕಾರ್ಯಗಳನನು
ದಿನದಿ ತಿಳಿಸುವ ಸಾಕ್ಷಿಯಾಗಿಹ
ಘನ ಮಹಾ ಚಿಜ್ಯೋತಿಯೇ ನಾನೆಂದು ನಿಶ್ಚೈಸು ॥ ೪೪ ॥

ಇಲ್ಲದಿಹ ಮಾಯಾ ಪ್ರಪಂಚಗ
ಳುಳ್ಳವೆಂದೆಂಬಂತೆ ನಿಷಯುದ
ಛಲ್ಲವಣೆಗಳದಿಂದ್ರಿಯ ದ್ವಾರದಲಿ ರಂಜಿಸುವ
ಎಲ್ಲವನು ಕಾಣಿಸುವಡವರೊಳು
ಪೊಲ್ಲವಳ್ಳಿತ್ತೆಂದು ಕೆಲವನು
ಸಲ್ಲವಿಡುವುದು ಮನವು ಮನವಳಿದವನೆ ಸುಖಿಯೆಂದ ॥ ೪೫ ॥

ಸ್ಥೂಲ ತನುವಿನ ಜಾಗ್ರ ಸ್ವಪ್ನದ
ಕಾಲದಲಿ ಹುಸಿ ಸೂಕ್ಷ್ಮತನುವಿಗೆ
ಮೇಲೆ ಕಾರಣ ತನುವಿನಲ್ಲಿ ಸುಷುಪ್ತಿ ಪಸರಿಸಲು
ಬೀಳ್ವದಾಮನ ಜಾಗ್ರ ಸ್ವಪ್ನದೊ
ಳಾಳುತಿಹದಿ ನಮದೇಮನವಾ
ಕಾಳುಮನವಂದಳಿದುದಾದರೆ ನಿತ್ಯರಹರೆಂದ ॥ ೪೬ ॥

ಸುರನರೋರಗರೆಂಬ ಮರುಳರ
ಹುರುಳುಗೆಡಿಸಿದ ಮೂರವಸ್ತೆಗ
ಳರಿದೆನಿಸುವಾತೂರ್ಯ ತೂರ್ಯಾತೀತವೆಂಬೆರಡು
ಸರಸ ತರವಹ ಬಲೆಯ ಬೀಸಿಯೆ
ಹರಹಿ ಕೊಂಡಿಹುದೀ ಮನಸ್ಸದ
ನೆರಗದಿರ ಬಲ್ಲವನೆ ನಿತ್ಯನು ಕೇಳುಸಲೆ ಶಿಷ್ಯ ॥ ೪೭ ॥

ಮನವೆ ಬಹಿರಂಗದಲಿ ಚರಿಸುವ
ಮನುಜವನಜ್ಞಾನಿ ಮತ್ತಾ
ಮನವೆಯುಂತರ್ಮುಖದಲಾಚರಿಸಿದಡೆ ಸರ್ವಜ್ಞ
ಮನವು ಮನದಲಿನಿಂದು ನಿರ್ವಾ
ಸನೆಯಲಿರೆ ಸುಜ್ಞಾನಿಯಂತಾ
ಮನವನಳಿದರೆ ಮುಕ್ತನಹನೈ ಶಿಷ್ಯ ಗುಣಕೋಶ ॥ ೪೮ ॥

ಎನಿತು ತೋರುವ ತೋರಿಕೆಗಳೆನಿ
ತೆನಿತು ಮನಸಿಂದಾದವಲ್ಲದೆ
ಮನವನುಳಿದರೆ ಮತ್ತೆ ಕಾಣಿಪುದುಳಿದುದೊಂದಿಲ್ಲ
ಮನವೆ ಬೆಸಲಾದುನಿಳವಪ ವಾ
ಸನೆಗಳಿಗೆ ಬಿದ್ದಾಸೆಗೈವರೆ
ಮನುಜ ಜಾತಿಯಲಾತನಧಮನು ಕೇಳು ಗುರುಭಕ್ತಾ ॥ ೪೯ ॥

ಆಶೆ ಎಂಬುದು ತಾನೆ ಮಾಯಾ
ಪಾಶವದು ಮುಸುಕಿದರೆ ತಾನೇ
ಕ್ಲೇಶವಿಂತಿವು ಬಗೆಯ ಬಲಿಯಲು ತಾನೆ ಭವಬಂಧ
ಪಾಶ ದುರಿತದ ಪುಂಜವಿದು ಕೇ
ನಾಶಗೊಡ್ಡಿದ ಹರಕೆ ಕುರಿಯೀ
ಆಶೆಯೊಂದಳಿದವನೆ ನಿತ್ಯನು ಸತ್ಯ ಗುರುಮೂರ್ತಿ ॥ ೫೦ ॥

ಬೇಕು ಬೇಡೆಂದೆಂಬುದೊಂದವಿ
ವೇಕವುಳ್ಳನ್ನಕ್ಕ ನಾನಾ
ಶೋಕ ಮೋಹಾದಿಗಳು ಮುದಗೂಡಿರ್ದು ಮುಸುಕುವವು
ಲೋಕರಂಜನೆಗೆರಗಿದವರತಿ
ಕಾಕುತನದಲಿ ಕೆಟ್ಟು ಪೋಪರು
ಬೇಕು ಬೇಡೆಂಬೆರಡನಳಿದರೆ ಕರತಳವು ಮುಕ್ತಿ ॥ ೫೧ ॥

ಅನವರತವೇನಾದಡೊಂದನು
ನೆನೆವುತಿಹುದೀ ಮನ ಸುಮನಸಿನ
ನೆನಹಿನಿಂದಲೆ ತೋರುವವು ಸರ್ವ ಪ್ರಪಂಚಗಳು
ಇನಿತನರಿವ ಸಮಾಧಿಯಲಿತ
ನ್ಮನವನೆಲ್ಲವ ತಿಂದು ತೇಗುವ
ಘನ ಪರಾಕ್ರಮವುಳ್ಳಡಾತನೆ ಮುಕ್ತನಹನೆಂದ ॥ ೫೨ ॥

ಘನ ಮಹಿಮ ಚಿತ್ತೈಸು ದಿಟವಾ
ಮನವನಳಿದೇನೆಂಬುದದು ತಾ
ಮನವೆಯಲ್ಲದೆಯಾ ಮನಸ್ಸನದೆಂತು ತಿನಬಹುದು
ಮನವನೆಂತಾದರೆಯು ನಿರ್ವಾ
ಸನೆಗೆ ತಹುದರಿದಲ್ಲವಲ್ಲದೆ
ಮನವನಳಿವುದು ಚೋದ್ಯವೆಂದನು ಶಿಷ್ಯ ಗುರುಮೂರ್ತಿ ॥ ೫೩ ॥

ಮನವನರಿದೇನೆಂಬುದದು ಮನ
ಮನವ ನಿಲಿಸೇನೆಂಬುದದು ಮನ
ಮನವನಳಿದೇನೆಂಬುದದು ಮನ ಮನವ ರೀತಿಯಲಿ
ಮನವೆ ತಾಹೆರೆ ಸಾರಿ ಬಹು ಯೋ
ಚನೆಗಳನು ರಂಜಿಸುವುದಂತಾ
ಮನವನೆಲ್ಲವನಳಿದನಾದರೆ ಮುಕ್ತನಹನೆಂದ ॥ ೫೪ ॥

ದೇವ ಬಿನ್ನಪ ಮನವನಳಿದ ನಿ
ರಾವಲಂಬಿಯ ಕುರುಹುವೆಂತುಂಟು
ಜೀವನೋ ಪರಮನೋ ಪರಾತ್ಪರ ನಾಮವುಳ್ಳವನೋ
ಆವುದದನುಳ್ಳಾತನಂಕಿತ
ನಾವು ತಿಳಿವಂತಿರೆ ನಿರೂಪಿಸಿ
ಕಾವುದೆನುತಲಿ ಮತ್ತೆ ಬಿನ್ನೈಸಿದನು ಗುರುಪುತ್ರಾ ॥ ೫೫ ॥

ನೇಮವಿಲ್ಲದೆ ಮನವೆಸನತಿಂ
ದಾ ಮಹಾನಿರುಪಮ ನಿರಾಳಗೆ
ನಾಮ ರೂಪ ಕ್ರಿಯಂಗಳುಂಟೇಂ ಕುರುಹು ತೋರುವರೆ
ಪ್ರೇಮದಿಂದಿರ್ದೊಂದು ಕುರುಹನು
ಕಾಮಿಸುವರಿಂತಿವರ ತಿಳಿವಡೆ
ಆ ಮಹಾತ್ಮನಭೇದ್ಯ ಕಾಣಾ ಶಿಷ್ಯ ಗುರುಮೂರ್ತಿ ॥ ೫೬ ॥

ಮರಣವಿಲ್ಲದ ಜನನವಿಲ್ಲದ
ಕರಣವಿಲ್ಲದ ಕರ್ಮವಿಲ್ಲದ
ಪರಗಳೊಳುದುರ್ವಡಲ ಬಿಟ್ಟೆಯ ಹೊರೆಗಳನು ಹೊರದ
ನಿರುಪಮದ ನಿಶ್ಚಿಂತ ನಿಶ್ಚಲ
ಪರಮ ನಿತ್ಯಾನಂದ ಪದವಿಯ
ಕರುಣಿಸಿದಿ ಶ್ರೀಗುರುವೆ ಜಯ ಜಯ ಶರಣ ಶಿವಲಿಂಗ ॥ ೫೭ ॥

ಧನ್ಯನಾದೆನು ಗುರುವೆ ನಿಮ್ಮಯ
ಧನ್ಯವರ ಮಹ ವಾಕ್ಯದಿಂದಲಿ
ಸನ್ನುತಾಮಳ ಪಾದ ಪದ್ಮದ ಬೆರೆಸುತೀ ಮನದ
ಬನ್ನ ವಿಷಯಾದಿಗಳ ನೀಗಿಸು
ತೆನ್ನ ರಕ್ಷಿಸಬೇಹುದೆನೆ ಒಳಿ
ತಿನ್ನು ಸಾಗ್ಸೆನು ಸುಖವು ಪೊಂದಿದಿ ಶಿಷ್ಯನೆನುತಂದು ॥ ೫೮ ॥

ಇದು ಕಣಾ ಪರಮಾತ್ಮ ವಿದ್ಯೆಯು
ಇದು ಮಹಾಯೋಗೀಂದ್ರ ಮತ ಕೇ
ಳಿದು ಭವ ಜ್ವರತಪ್ತ ಸಜ್ಜ ಜ್ಜೀವನೌಷಧವು
ಇದು ಶಮನಗಳ ಪಾಶವೆನಿಸುವು
ದಿದು ದುರಿತ ಘೋರಾಟವೀದವ
ವಿದು ಮಹತ್ತರ ಸುಕೃತ ಫಲದಿಂ ಲಭ್ಯವಹತತ್ವ ॥ ೬೯ ॥

ಇದುವೆ ಭೇದಕ ಹೃದಯ ಶೂಲವು
ಮಿದು ಶಿವನ ಜಪ ಮುಖ್ಯ ಮಂತ್ರವು
ಇದು ನಿಗಮದುಗ್ದಾಬ್ಧಿ ಮಥನೋದ್ಭವ ಸುಧಾರಸವು
ಇದು ಪರಮ ಸುಖ ಹೇತುವದರಿಂ
ದಿದಕೆ ಸಮವಿನ್ನಿಲ್ಲ ಜಗದೊಳ
ಗಿದನೆ ಬಿಡದಭ್ಯಾಸಿಸಲುಮಪವರ್ಗವೆನುತ್ತೇಳಿ ॥ ೭೦ ॥

ನಿರಘನಿರ್ವ್ಯಾಯ ನಿತ್ಯ ನಿರ್ಗುಣ
ನಿರಭಿಮತ ನಿರ್ಮೋಹ ಚಿತ್ಸುಖ
ಶರಧಿ ಸತ್ಯಾನಂದ ಸಾಕ್ಷಿಕ ಜನನ ಮೃತಿ ದೂರ
ನಿರವಧಿಕ ನಿರ್ಮಾಯ ನಿರ್ಮಲ
ನಿರತಿಶಯ ನಿರ್ದ್ವೇಷ ನಿಃಕ್ರಿಯ
ನಿರುಪಮಿತ ಚಿಜ್ಜ್ಯೋತಿಯೊಳು ತಾ ಬೆರದ ಶಿವಲಿಂಗ ॥ ೭೧ ॥

ನಂದಿವಾಹನ ನಾಗಭೂಷಣ
ಸಿಂಧುರಾನನ ದೈತ್ಯಮಾರಣ
ಚಂದ್ರಶೇಖರ ಕುಮುಗೊರಳನಗೇಂದ್ರಸುತೆ ರಮಣ
ಮಂದರಾಸನ ತಾತ ಮುನಿ ಜನ
ಸಾಂದ್ರ ಶಿವ ಸದ್ಭಕ್ತ ಚರಗಣ
ವೃಂದ ಸಜ್ಜನ ಶರಣರುಘೆ ಜಯತೆಂದು ಪೊಗಳಿದರು ॥ ೭೨ ॥

ಒಂದುಸಾವಿರದೆಂಟುನೂರರ
ಮುಂದೆ ವಿಂಶತಿಯಾರು ಶಕವಂ
ಹೊಂದಿದಾ ಸಂವತ್ಸರದವರ ಮಾಘ ಶುದ್ಧದಲಿ
ಬಂದ ಪಂಚಮಿ ಸುಗುರುವಾರದೊ
ಳಂದಮೆನೆ ಹನ್ನೊಂದು ಘಳಿಗೆಯು
ಸಂದ ಸಮಯದಿ ಶರಣಸಡಗಿದ ಜೋತಿರ್ಲಿಂಗನೊಳು ॥ ೭೩ ॥

ವಾಸಿದೇವಂಬರವನ್ನೈಯ್ದಾ
ಯಾಸವಾಗಲು ಬಂದು ಶರಣನ
ವಾಸದೊಳುಮವತರಿಸಿ ಕುಳಿತಿಹನೆಂಬ ತೆರದಿಂದ
ಶ್ರೀಶ ಶಿವಲಿಂಗೇಶನೊಪ್ಪಿರ
ಲಾ ಸಮಯದಲಿ ಪ್ರಮಥ ಪದ ಜಲ
ಮೀಸಿ ಕುಳ್ಳಿರಿಸಿದರ ವರ್ತವಕದಲಿ ಶೃಂಗರಿಸಿ ॥ ೭೪ ॥

ಬಸವ ದೇವಾಲಯದ ಮುಂಬಲಿ
ಕುಸುಮ ಶರಹರ ಭಕ್ತರೆಲ್ಲರು
ಸಸಿನೆ ಶಿವ ಮಹಾದೇವನೆನುತಂ ಭಜನೆಗೈಯ್ಯುತಿರೆ
ವಿಸರ ಜಂಗಮರೊಚಿಸುತೊಚನವ
ರಸಿಕ ಗೀತ ಪ್ರಬಂಧಗಳನಂ
ಕುಶಲತನದಿಂ ಪಾಡಿ ಮುಂಗಳ ಪದಗಳರ್ಥಿಯಲಿ ॥ ೭೫ ॥

ನೆರದರಾ ಚರಗುರುವರೇಣ್ಯರು
ಪರಮ ಸಾಧು ವಿಚಾರಶೀಲರು
ಪುರವನಾಳ್ವರು ನಾಡ ಗೌಡರು ಶೆಟ್ಟಿ ಶ್ರೀಯುತರು
ದೊರೆಗಳಧಿಕಾರಿಗಳು ದೇಸಾ
ಯರುಗಳಾ ವರ್ತಕರು ಮಾಸಿತ
ಶರಣ ಶಿವಲಿಂಗೇಶನಂತಿಮ ಸಮಯದಲಿ ಸೊಬಗಿಂ ॥ ೭೬ ॥

ದೂರದಿಂದೈತರುತಲಿರ್ದರು
ವೀರಶೈವಾದ್ಯಖಿಲ ಸುಮತಾ
ಚಾರ ಪರಸೀಮಂತಿನೀ ದಂಪತಿಗಳೊಗ್ಗಿನಲಿ
ಧೀರರುಂ ಗಾಯಕರು ಕೀರ್ತನ
ಕಾರರುಂ ವಾಖ್ಯಾನ ಸಂಭ್ರಮ
ಬೀರುವರು ಬಿಸದಲ್ಲಿ ಕೂಡಿದರ್ಕೊನೆಯ ವೇಳ್ಯಯೊಳು ॥ ೭೭ ॥

ಕೆಲರು ಕಾಯ್ಕರ್ಪುರಗಳಂ ಮೇ
ಣ್ಕೆಲರು ಪಣ್ಣೂವ್ವಮಾಲೆಗಳನುಂ
ಕೆಲರು ಧೂಪದ ಘಟ್ಟಿ ಗುಗ್ಗುಲ ವರದಶಾಂಗಗಳ
ಕೆಲರು ಪರಿಮಳ ಬತ್ತಿಗಳ ಕೆಲ
ಕೆರಬರರ್ಘ ವಿಭೂತಿ ಘುಟಿಕಾ
ವಳಿಗಳುಂ ತರುತಿರ್ದರೀಶ್ವತನ ವಿಜಯ ಕಾಲದೊಳು ॥ ೭೮ ॥

ಪುರದ ಸರ್ವ ಪ್ರಮುಖ ಭಕ್ತರು
ನೆರೆದು ಪರಮೋತ್ಸಾಹದಿಂದೀ
ಶರಣನ ಸಮಾಧಿಯನು ದಾವೆಡೆಗೆ ಸಗಬೇಕೆಂದು
ನೆರೆ ವಿಚಾರಿಸೆ ಹಿರಿಯನಾ ಧು
ತ್ತುರಿಗೆ ನುಡಿದನು ವೃಷಭ ಮುಂಗಡೆ
ಇರುವ ತಾಣದಿಯವರು ಗೈದಿಹರಾಜ್ಞೆವೆಂದೆನಲು ॥ ೯ ॥

ಕುಳಿತ ಹಿರಿಯರು ಕೇಳುತಲಿ ಮೂ
ಗೆಳಿಯಲದ ಶಿವಲಿಂಗ ಹಿರಿಯನು
ತಿಳಿದು ತತ್ಕಾಲದಲಿ ಸರಕಾರಪ್ಪಣೆಯನಾಂತು
ಆಳತೆ ಆಗಮ ಕ್ರಿಯೆಗಳನು ಮತಿ
ಯೊಳಗೆ ಭಿನ್ನಿಸದಾ ಸಮಾಧಿಯ
ತಳುವದಲೆ ತೆಗೆಸುತಲಿ ತುಂಬುತೆ ರಂಗವಾಲಿಗಳಂ ॥ ೨೦ ॥

ಅನಿತಕಾ ಪುಷ್ಪಕದಿ ಶರಣರ
ನನುಗೊಳಿಸಿ ಪುಷ್ಪಾಂಜಲಿಯ ಗೈ
ದನುವಿನಿಂದುಘೆ ಎಂಬ ರವದಿಂ ಬಸವನಾಲಯವ
ಬಿನದಿಸುತ ಪರತರ ಪ್ರದಕ್ಷಿಣೆ
ಯನುಗೈಸಿ ಪುಷ್ಪಕವ ಗೋಪಿಯ
ಕೊನೆಯೊಳಿರಿಸಿದರಾಗ ಶಿವಶಿವ ಎಂಬ ಸಂಭ್ರಮದಿ ॥ ೨೧ ॥

ಶರಣ ವಿಜಯ ಮಹೋತ್ಸವ ಮದೀ
ಪರಿಯೊಳುಂ ಜರುಗಿಸುತ ಗೋಪಿಯೊ
ಳಿರಿಸಿ ಶಾಸ್ತ್ರೋಕ್ತ ಪ್ರಕಾರಂ ಪ್ರಣಮಪೂರಿಸುತಾ
ಚರವರಂ ಶಿವಲಿಂಗ ಸಾಂಪ್ರತ
ಪುರದ ಭಕ್ತಾದಿಗಳ ಸಮ್ಮತಿ
ವೆರಸುತತುಲ ಸಮಾಧಿಕಾರ್ಯವ ತೀರ್ಚಿಸಿದರೊಲಿದು ॥ ೨೨ ॥

ಕುಳಿತನಲ್ಲೇ ಶಿಷ್ಯ ಗುರು ಮೂ
ರ್ತಿಳಸಿ ಮನ ಹೃತ್ಕಮಲ ಮಧ್ಯದಿ
ಪೊಳೆವ ಶರಣರ ಪಾದ ಪದ್ಮನೊಳಿರಿಸುತೊಳ ಹೊರಗಂ
ಚಲಿಸದಂದದಿ ದೃಷ್ಟಿ ಭ್ರುಕುಟಿಯು
ಸ್ಥಲದಿ ನಿಲಿಸುತ ಜೀವ ಪರಮನ
ಕಲಿಸುತೈಕ್ಯವನಾಂತುಮೇಕಾಕಾರದಲಿ ಮೆರೆದಂ ಶ್ರೀ ಶ್ರೀ ॥ ೨೩ ॥

ದೇವ ಶಿವಲಿಂಗೇಶ ವಿರತರ
ಪಾವನ ಪದದ್ವಯ ಕಮಲ ಮಧು
ಸೇವಿತಂ ಭೃಂಗೋಪಮಾನನು ರಸಿಕ ಮಡಿವಳನು
ಸಾವಧಾನದಿ ಶರಣ ಕುಲ ಸಂ
ಭಾವ್ಯ ನತುಲ ಮಹತ್ವಂ ಬರೆ
ದೀ ವಿಮಲ ಪೌರಾಣದೊಳು ಪದಿನೈದನೆಯ ಸಂಧಿ ॥ ೭೪ ॥

ಈ ಮಹಾತ್ಮನ ಸಚ್ಚರಿತವ
ಪ್ರೇಮದಿಂ ಕೇಳ್ದೋದಿದವರಿಗೆ
ಭೂಮಿ ಧನ ಕನಕಾದಿ ಸತಿ ಸಂತಾನ ಸಂಪದವು
ಸೋಮಧರ ಚಿದ್ವಿರತಿ ಭಕ್ತಿ
ಕ್ಷೇಮ ಕರಕೈವಲ್ಯ ಪದನಿ
ಸ್ಸೀಮವೆನೆದೊರೆಗುಂ ನಿರಂತರಮಿಹ ಪರಂಗಳೊಳು ॥ ೭೫ ॥

ಶಾಲಿವಾಹನ ಶಕ ವರುಷದೊಳು
ಕೀಲಿಸಿದ ಪದಿನೆಂಟು ನೂರರ
ಮೇಲಣರುವತ್ತಾರು ತಾರಣ ನಾಮವತ್ಸರದೆ
ಶೀಲಮಾಸವು ಮಾಘನಷ್ಟಮಿ
ಕಾಲ ಹರ ಶರಣನ ಪುರಾಣಂ
ಲೋಲದಿಂ ಲಿಖಿಸುವದು ಮುಗಿದುದು ಸೋಮವಾರದೊಳು ॥ ೭೬ ॥

ಮಂಗಲಂ ಭೂವಿನುತ ವಿಜಯ
ಮಂಗಲಂ ಸಂಹಾರಿ ಮಾಯಾ
ಮಂಗಲಂ ಮಲವನ ಧನಂಜಯ ಸುಕೃತಮಯ ಕಾಯಾ
ಮಂಗಲಂ ವರ ಪ್ರಮಥ ಸಹಾಯಾ
ಮಂಗಲಂ ಸರ್ವಾತ್ಮ ಕೃಪಯಾ
ಮಂಗಲಂ ಶಿವಲಿಂಗ ಚಿನ್ಮಯ ಶರಣಗುಣ ಸದಯಾ ॥ ೭೭ ॥

ಜಯತು ಜಯ ಮಹದೇವ ಶಂಕರ
ಜಯತು ಜಯ ಶುಭ ನೀಲ ಕಂಧರ
ಜಯತು ಜಯ ಮಂದಾರ ಗಿರಿಯಾಗಾರ ಭವದೂರ
ಜಯತು ಜಯ ಸುರಜಾನ್ಹವೀಧರ
ಜಯತು ಜಯ ವರ ರಾಜಶೇಖರ
ಜಯತು ಜಯ ಫಣಿಮಾಲ ಪುರಹರ ಭಕ್ತ ಕೈವಾರಾ ॥ ೭೮ ॥

ಅಂತು ಸಂಧಿ ೧೫ಕ್ಕಂ ಪದನು ೧೨೨೧ ಕ್ಕಂ ಮಂಗಲ ಮಹಾ ಶ್ರೀ ಶ್ರೀ



ಎದರು ಕಾಣುವ ಗವಿ ಶ್ರೀಗಳವರ ಸಮಾಧಿ ಸ್ಥಳ

## ಮಂಗಳಾರುತಿ

ಗುರು ಶಿವಲಿಂಗ ಶರಣ ಸಮರ್ಥಾ ಬೆಳಗುವೆನಾರುತಿಯಾ ।
ಗುರುವರಾ ಬೆಳಗುವೆನಾರುತಿಯಾ ॥
ಭಕ್ತೋದ್ಧಾರವತಾರಿಸಿ ಜಗದಿ ಶರಣ ಸುಪಥ ಹಿಡದೀ ।
ಗುರುವರಾ ಶರಣ ಸುಪಥ ಹಿಡದೀ ॥
ಭಕ್ತಿಜ್ಞಾನ ವಿರಕ್ತಿ ಬಲಿಸಿ ಸ್ಥಿರಮುಕ್ತಿಯ ಸುಖ ಪಡದೀ ।
ಗುರುವರಾ ಮುಕ್ತಿಯ ಸುಖಪಡದಿ ॥ ೧ ॥

ಕಾಮ, ಕ್ರೋಧ, ಮದ, ಮೋಹ, ಲೋಭವು ತಾಮಸವನು ತೊರದಿ ।
ಗುರುವರಾ ತಾಮಸವನು ತೊರದಿ ॥
ಕಾಮಿತದಾಯಕ ನೇಮಿತ ಭಕ್ತರ ಕಾಮಧೇನು ಮುದದಿ ।
ಗುರುವರಾ ಕಾಮಧೇನು ಮುದದಿ ॥ ೨ ॥

ಚರಣ ಭಜಿಪರಾ ಕರ್ಮಬಂಧವು ಹರಿಸುತ ನೀ ಜವದೀ ।
ಗುರುವರಾ ಹರಿಸುತ ನೀ ಜವದಿ ॥
ವರಮಾಧನಾ ಹಿಪ್ಪರಗೀಯ ಸ್ಥಳದಲಿ ಹರುಷದೀ ವಾಸಿಸಿದಿ ।
ಗುರುವರಾ ಹರುಷದೀ ವಾಸಿಸಿದಿ ॥ ೩ ॥

# ಕರ್ಪೂರಾರುತಿ

ಜಯು ಕರ್ಪೂರಾರುತಿ ಬೆಳಗಿರೆ ಶಿವಲಿಂಗ ಶರಣರಿಗೆ ।
ಗುರು ಶಿವಲಿಂಗ ಶರಣರಿಗೆ ॥ ಪ ॥

ಸತ್ತು ಚಿತ್ತ ನಿತ್ಯಾನಂದಾಪರ ಬ್ರಹ್ಮಸ್ವರೂಪನಿಗೇ ।
ಗುರುವರಾ ಬ್ರಹ್ಮಸ್ವರೂಪನಿಗೆ ॥
ಮೃತ್ಯಾ್ಯದೋಳುದ್ಭವಿಸೀ ಭವತಾರಕ ಮಂತ್ರವ ಭಜಿಪನಿಗೇ ।
ಗುರುವರಾ ಮಂತ್ರವ ಭಜಿಪನಿಗೆ ॥ ೧ ॥

ಅಕ್ಷಯ ಪದವನಘೇಕ್ಷಿಸಿ ಭಕ್ತರ ಇಚ್ಛಿಸಿದಾತನಿಗೆ ।
ಗುರುವರಾ ಇಚ್ಛಿಸಿದಾತನಿಗೆ ॥
ದಾಕ್ಷಿಣ್ಯಭಾವದಿ ರಕ್ಷಿಸಿ ಜನರಂ ಮೋಕ್ಷಪದಾಯಕಗೆ ।
ಗುರುವರಾ ಮೋಕ್ಷಪದಾಯಕನಿಗೆ ॥ ೨ ॥

ದೀನ ಜನರ ಪರಿಪಾಲಿಪ ಮಾಧನ ಪುರದೋಳು ನಿವಾಸನಿಗೆ ।
ಪಿಂಪುರಿ ಪುರದ ನಿವಾಸನಿಗೆ ॥
ಘನತೇಜ ಬ್ರಹ್ಮಾನಂದದೀ ಅವಿರಳ ಅನುಪಮ ಅದ್ವಯಗೆ ।
ಗುರುವರಾ ಅನುಪಮ ಚರಿತನಿಗೆ ॥ ೩ ॥

## ಪುರಾಣ ಪ್ರಕಟಣೆಗೆ ರೂ. ೨೫೦೧ ಕೊಟ್ಟ ಮಹಾದಾನಿಗಳು



ಕೈ. ಭೀಮಾಶಂಕರ ಬಸಲಿಂಗಪ್ಪ ಸರಸಂಬಿ ಇವರ ಸ್ಮರಣಾರ್ಥ
ಶ್ರೀ ಮಲ್ಲಪ್ಪ ಸಿದ್ಧಾರೂಢ ಯಳಮೇಲಿ, ಮಾ. ಹಿಪ್ಪರಗಾ ಇವರ ಕೊಡುಗೆ



ಕೈ. ಸಿದ್ದೇಶ್ವರ ಶಂಕ್ರಪ್ಪ ಭಾವಿ ಇವರ ಸ್ಮರಣಾರ್ಥ
ಶ್ರೀಮತಿ ಪಾರ್ವತಿಬಾಯಿ ಸಿದ್ದೇಶ್ವರ ಭಾವಿ, ಸೋಲಾಪೂರ ಇವರ ಕೊಡುಗೆ

# ಪುರಾಣ ಪ್ರಕಟಣೆಗೆ ರೂ. ೧೦೦೧ ಕೊಟ್ಟ ದಾನಿಗಳು



ಕೈ. ಶಿವಲಿಂಗಪ್ಪ ಮುಂದೇವಾಲಿ ಮೋರಟಗಿ
ಇವರ ಸ್ಮರಣಾರ್ಥ ಶ್ರೀ ಮಲ್ಲಣ್ಣ ಗುರಸಂಗಪ್ಪ
ಮುಂದೇವಾಲಿಯವರ ಕಾಣಿಕೆ



ಶ್ರೀ ಧೂಳಪ್ಪ ಗುರಸಿದ್ಧಪ್ಪ
ಕಲ್ಯಾಣಿ, ಔಸಾ



ಶ್ರೀ ಶಿವರಾಯ ಸಿದ್ರಾಮಪ್ಪ ಶೇಠಿ,
ಔಸಾ



ಶ್ರೀ ಮಲ್ಲಿಕಾರ್ಜುನ ಗಂಗಾಧರ ಸೇಠಿ,
ಔಸಾ



ಕೈ. ಮಲ್ಲಪ್ಪ ಬಸಮ್ಮಣ್ಣಪ್ಪ ಜೇವೂರ
ಇವರ ಸ್ಮರಣಾರ್ಥ ಶ್ರೀ ಶಿವಶರಣಪ್ಪ
ಜೇವೂರವರ ಕೊಡುಗೆ



ಕೈ. ಶಿವಲಿಂಗಪ್ಪ ವೀರಭದ್ರಪ್ಪ, ಶಿಂಗಶೆಟ್ಟಿ,
ಆಳಂದ ಇವರ ಸ್ಮರಣಾರ್ಥ
ಶ್ರೀ ಅಡವಿಸ್ವಾಮಿ ಶಿಂಗಶೆಟ್ಟಿಯವರ ಕೊಡುಗೆ

# ಪುರಾಣ ಪ್ರಕಟನೆಗೆ ರೂ. ೧೦೦೧ ಕೊಟ್ಟ ದಾನಿಗಳು



ಶ್ರೀ ಮಹಾದೇವಪ್ಪ ಶಂಕರೆಪ್ಪ
ಮುಂದೇವಾಲಿ, ಮು. ಮೋರಟಗಿ



ಕೈ. ಕಲ್ಲಪ್ಪ ನಾಗಪ್ಪ ಸಾತಲಗಾಂವ
ಇವರ ಸ್ಮರಣಾರ್ಥ ಶ್ರೀ ಬಸವಣ್ಣಪ್ಪ
ಸಾತಲಗಾಂವ ಅವರ ಕೊಡುಗೆ



ಶ್ರೀ ಶಿವಲಿಂಗಪ್ಪ ಈರಪ್ಪ ಧುತ್ತರಗಿ
ಕಿರಾಣ ದುಕಾನ, ಮಾ. ಹಿಪ್ಪರಗಾ



ಕೈ. ಷನ್ಮುಖಪ್ಪ ಗುಂಡಯ್ಯಾ ಧುತ್ತರಗಿ
ಇವರ ಸ್ಮರಣಾರ್ಥ ಶ್ರೀಮತಿ ಪಾರ್ವತಿಬಾಯಿ
ಷನ್ಮುಖಪ್ಪ ಧುತ್ತರಗಿಯವರ ಕಾಣಿಕೆ



ಶ್ರೀ ಸಿದ್ಧಾರೂಢ ಚೆಂದಯ್ಯ ಶಿಂಗಶೆಟ್ಟಿ
ಮಾದನ ಹಿಪ್ಪರಗಾ



ಕೈ. ರಾಜೇಂದ್ರ ಸಿದ್ಧರಾಮ ಕರಜಗಿ,
ಸೋಲಾಪೂರ ಇವರ ಸ್ಮರಣಾರ್ಥ

## ಪುರಾಣ ಪ್ರಕಟಣೆಗೆ ರೂ. ೧೦೦೧ ಕೊಟ್ಟ ದಾನಿಗಳು



ಶ್ರೀ ಈರಪ್ಪ ಸೋಮಣ್ಣಪ್ಪ ಧುತ್ತರಗಿ
ಮಾದನ ಹಿಪ್ಪರಗಾ



ಶ್ರೀಮತಿ ಅನ್ನಪೂರ್ಣಾಬಾಯಿ
ಸಿದ್ರಾಮಪ್ಪ ಉಟಗೆ, ಔಸಾ



ಕು.ಸೌ. ಕಮಲಾಬಾಯಿ ಚಂದ್ರಕಾಂತ
ಸೊನ್ನದ, ಮೈಂದರ್ಗಿ



ಶ್ರೀಮತಿ ಚೆಂಗಳೆವ್ವ ರೇವಣಸಿದ್ದಪ್ಪ
ಹಿಪ್ಪರಗಿ, ಸೋಲಾಪೂರ





# ಪುರಾಣ ಪ್ರಕಟಣೆಗೆ ರೂ. ೧೦೦೧ ಕೊಟ್ಟ ದಾನಿಗಳು



ಶ್ರೀ ಶಿವಶರಣಪ್ಪ ಚನ್ನಪ್ಪ ಗಡ್ಡದ,
ಮಾದನ ಹಿಪ್ಪರಗಾ



ಕೈ. ಗ್ಯಾನಪ್ಪ ಟೋಪಣ್ಣಪ್ಪ ನಂದರ್ಗಿ
ಸೋಲಾಪೂರ ಇವರ ಸ್ಮರಣಾರ್ಥ
ಶ್ರೀಮತಿ ಬಸವ್ವಬಾಯಿ ಗ್ಯಾನಪ್ಪ
ನಂದರ್ಗಿ ಇವರ ಕೊಡುಗೆ



ಕೈ. ರತ್ನಾಬಾಯಿ ಸಿದ್ರಾಮಪ್ಪ ಹಾದಿಮನಿ
ಇವರ ಸ್ಮರಣಾರ್ಥ ಶ್ರೀ ಸಿದ್ರಾಮಪ್ಪ
ಹಾದಿಮನಿಯವರ ಕಾಣಿಕೆ



ಕು.ಸೌ. ಚೌಡಾಬಾಯಿ ಶರಣಪ್ಪ
ಶಿಂಗಶೆಟ್ಟಿ, ಮಾದನ ಹಿಪ್ಪರಗಾ



ಶ್ರೀಮತಿ ಶಿವಮ್ಮ ಶರಣಪ್ಪ



ಕೈ. ನಾಗಬಾಯಿ ಭೀಮಣ್ಣಪ್ಪ ಗಡ್ಡದ
ಇವರ ಸ್ಮರಣಾರ್ಥ ಶ್ರೀ ಶಿವಶರಣಪ್ಪ
ಗಡ್ಡದ, [illegible]

## ಪುರಾಣ ಪ್ರಕಟಣೆಗೆ
## ಧನಸಹಾಯ ಸಲ್ಲಿಸಿದ ಸದ್ಭಕ್ತರು

| | | | |
|---|---|---|---|
| ೧. | ಶ್ರೀ ಮಲ್ಲಪ್ಪ ಗುರುಮೋರ್ತೆಪ್ಪ ಭದ್ರೆ | ಮಾದನ ಹಿಪ್ಪರಗಾ | ೫೦೧-೦೦ |
| ೨. | ಶ್ರೀ ಸುಭಾಷ್ಚಂದ್ರ ಗುರುಮೋರ್ತೆಪ್ಪ ಭದ್ರೆ | " | ೫೦೧-೦೦ |
| ೩. | ಶ್ರೀ ಮುತ್ತಣ್ಣಪ್ಪ ಬಾಳಪ್ಪ ಇಕ್ಕಳಕಿ | " | ೨೦೧-೦೦ |
| ೪. | ಶ್ರೀ ರೇವಣಸಿದ್ದಪ್ಪ ಶಿವಶರಣಪ್ಪ ಸೊನ್ನದ | " | ೨೦೧-೦೦ |
| ೫. | ಶ್ರೀ ಚೆನಬಸಪ್ಪ ಸಿದ್ರಾಮಪ್ಪ ಲೋಣಿ | " | ೨೦೧-೦೦ |
| ೬. | ಶ್ರೀ ಶಾಂತಮಲ್ಲಪ್ಪ ರೇವಣಸಿದ್ದಪ ಶಿಂಗಶೆಟ್ಟಿ | " | ೨೦೧-೦೦ |
| ೭. | ಶ್ರೀ ಸೋಮಶೇಖರ ಬಸವಣ್ಣಪ್ಪ ಘುತ್ತರಗಿ, ಜಿ.ಇ. ಆಳಂದ | | ೨೦೧-೦೦ |
| ೮. | ಕೈ. ಚನ್ನವೀರಪ್ಪ ಮಹಾಂತಪ್ಪ ಅತನೂರೆ | ಸೋಲಾಪೂರ | ೨೦೧-೦೦ |
| ೯. | ಶ್ರೀ ರೇವಣಸಿದ್ದಪ್ಪ ಸಂಗಣ್ಣಪ್ಪ ನಿಂಬಾಳ | ಮಾದನ ಹಿಪ್ಪರಗಾ | ೧೫೧-೦೦ |
| ೧೦. | ಶ್ರೀ ಬಸವಣ್ಣಪ್ಪ ಚಂದ್ರಾಮಪ್ಪ ಮೋತ್ರಿ | " | ೧೫೧-೦೦ |
| ೧೧. | ಶ್ರೀ ರಾಮಚಂದ್ರಪ್ಪ ಚನ್ನವೀರಪ್ಪ ಅಕ್ಕಾ | " | ೧೫೧-೦೦ |
| ೧೨. | ಶ್ರೀಮತಿ ಶಾಂತಾಬಾಯಿ ರುದ್ರಪ್ಪ ಮಾಸನಳ್ಳಿ | " | ೧೫೧-೦೦ |
| ೧೩. | ಶ್ರೀ ಶರಬನಗೌಡ ಎಸ್. ಪಾಟೀಲ ಕೆ.ಎಚ್.ಡಿ.ಸಿ. ರಸ್ತಾಪೂರ | | ೧೫೧-೦೦ |
| ೧೪. | ಕೈ. ಮಾತೋಶ್ರೀ ದಾನವ್ವ ಚನ್ನಪ್ಪ ಗಡ್ಡದ ಇವರ ಸ್ಮರಣಾರ್ಥ ಬಮನಿಂಗಪ್ಪ ನಾಗಪ್ಪ ರೂಗಿ,ಬಿ.ಎ., ಬಿ.ಎಡ್., ಕಡಗಂಚಿ ಇವರ ಕಾಣಿಕೆ | | ೧೫೧-೦೦ |
| ೧೫. | ಶ್ರೀ ರವಿಕುಮಾರ ಸುಭಾಷ್ಚಂದ್ರ ಹುಣಚಳಗಿ | ವಳಸಂಗ | ೧೧೧-೦೦ |
| ೧೬. | ಶ್ರೀ ಅಪ್ಪಾರಾವ ಶಿವಬಸಪ್ಪ ಮುನ್ನೋಳಿ | ಬಟ್ಟರಕಿ | ೧೦೫-೦೦ |
| ೧೭. | ಶ್ರೀ ನಿಂಗಣ್ಣಪ್ಪ ಶರಣಪ್ಪ ರೂಗಿ | ಮಾದನ ಹಿಪ್ಪರಗಾ | ೧೦೧-೦೦ |
| ೧೮. | ಶ್ರೀ ಶಿವಪುತ್ರಪ್ಪ ಚನ್ನಪ್ಪ ಶ್ರೀಗಣಿ | " | ೧೦೧-೦೦ |
| ೧೯. | ಶ್ರೀ ಮಡಿವಾಳಪ್ಪ ಸೋಮಣಪ್ಪ ಅಪ್ಪಗಿ | " | ೧೦೧-೦೦ |
| ೨೦. | ಶ್ರೀ ಶಿವಲಿಂಗಪ್ಪ ಗುರುಮೋರ್ತೆಪ್ಪ ನಿಂಬಾಳ | " | ೧೦೧-೦೦ |

೨೧. ಶ್ರೀ ವೇ. ಪರಯ್ಯಾ ಓಂಕಾರಯ್ಯಾ ಸ್ವಾಮಿಕಣ್ಣಿ ಮಾದನ ಹಿಪ್ಪರಗಾ ೧೦೧-೦೦
೨೨. ಶ್ರೀ ಸಿದ್ದಯ್ಯಾ ಪರಯ್ಯಾ ಕಣ್ಣಿ „ ೧೦೧-೧೦
೨೩. ಶ್ರೀ ಸುಭಾಷ ಮಾರುತಿ ಕಾಲೇಕರ „ ೧೦೧-೦೦
೨೪. ಶ್ರೀ ಮಲ್ಲಿಕಾರ್ಜುನ ಶಿವಶರಣಪ್ಪ ದುರ್ಗದ „ ೧೦೧-೦೦
೨೫. ಶ್ರೀ ಶರಣಪ್ಪ ಗುರಪ್ಪ ಮುನ್ನೋಳಿ „ ೧೦೧-೦೦
೨೬. ಶ್ರೀ ಸಿದ್ಧಾರೂಢ ರುದ್ರಪ್ಪ ಗುಳಗಿ „ ೧೦೧-೦೦
೨೭. ಶ್ರೀ ಮಲಕಾಜಪ್ಪ ಗುರುಬಸಪ್ಪ ಗುಳಗಿ „ ೧೦೧-೦೦
೨೮. ಶ್ರೀ ಗುರುಬಸಪ್ಪ ಮಲಕಾಜಪ್ಪ ಗುಳಗಿ „ ೧೦೧-೦೦
೨೯. ಶ್ರೀ ಶಿವಪುತ್ರಪ್ಪ ಅಡವೆಪ್ಪ ಗುಳಗಿ „ ೧೦೧-೦೦
೩೦. ಶ್ರೀ ಕರಬಸಪ್ಪ ಹೊನ್ನಪ್ಪ ಸಕ್ಕರಗಿ „ ೧೦೧-೦೦
೩೧. ಶ್ರೀ ಬಾಬುರಾವ ಗಿರಿಮಲ್ಲಪ್ಪ ಸಕ್ಕರಗಿ „ ೧೦೧-೦೦
೩೨. ಶ್ರೀ ಶಿವಶರಣಪ್ಪ ಹೊನ್ನಪ್ಪ ಸಕ್ಕರಗಿ „ ೧೦೧-೧೧
೩೩. ಶ್ರೀ ಶಿವಶರಣಪ್ಪ ಶಿವಲಿಂಗಪ್ಪ ನಿಂಬಾಳ „ ೧೦೧-೦೦
೩೪. ಶ್ರೀಮತಿ ಶಾಣಾಬಾಯಿ ತಂದೆ ಗುರುಶಾಂತಪ್ಪ ನಿಂಬಾಳ „ ೧೦೧-೧೦
೩೫. ಶ್ರೀ ಗಿರಿಮಲ್ಲಪ್ಪ ಹೊನ್ನಪ್ಪ ಸಕ್ಕರಗಿ „ ೧೦೧-೦೦
೩೬. ಶ್ರೀ ಶಿವಲಿಂಗಪ್ಪ ಶಾಂತಪ್ಪ ಸುತಾರ „ ೧೦೧-೦೦
೩೭. ಶ್ರೀ ಸಿದ್ದಪ್ಪ ಬಸಲಿಂಗಪ್ಪ ಜೇವೂರ „ ೧೦೧-೦೦
೩೮. ಶ್ರೀ ಮಲಕಾಜಪ್ಪ ಶಿವಲಿಂಗಪ್ಪ ಜೇವೂರ (ಗೌಳಿ) „ ೧೦೧-೦೦
೩೯. ಶ್ರೀ ಬಸವಣ್ಣಪ್ಪ ಬಮನಿಂಗಪ್ಪ ಜೇವೂರ „ ೧೦೧-೦೦
೪೦. ಶ್ರೀ ಮಲಕಾಜಪ್ಪ ಮಲ್ಲಯ್ಯ ಜೇವೂರ „ ೧೦೧-೦೦
೪೧. ಶ್ರೀ ಕಲ್ಯಾಣಪ್ಪ ಚಂದ್ರಾಮಪ್ಪ ಜೇವೂರ „ ೧೦೧-೦೦
೪೨. ಶ್ರೀ ಶಿವಪುತ್ರಪ್ಪ ಗುರುಪಾದಪ್ಪ ಜೇವೂರ „ ೧೦೧-೦೦
೪೩. ಶ್ರೀ ವೇ. ಪಂಚಯ್ಯ ಬಂಡೆಪ್ಪ ಸಿಂಗಶೆಟ್ಟಿ „ ೧೦೧-೦೦
೪೪. ಶ್ರೀ ಮಹಾಂತಪ್ಪ ಶಿವಲಿಂಗಪ್ಪ ಸಿಂಗಶೆಟ್ಟಿ „ ೧೦೧-೦೦
೪೫. ಶ್ರೀ ಮಲಕಾಜಪ್ಪ ಚೌಡಪ್ಪ ಧಡೂತಿ „ ೧೦೧-೦೦
೪೬. ಶ್ರೀ ಸೋಮಶೇಖರ ಮಾರುತಿ ಕಾಲೇಕರ „ ೧೦೧-೦೦

೪೭. ಶ್ರೀ ರೇವಣಸಿದ್ದಪ್ಪ ಶಿವಲಿಂಗಪ್ಪ ಅಷ್ಟಗಿ ಶಾಸ್ತ್ರೀ ಮಾದನ ಹಿಪ್ಪರಗಾ ೧೦೧-೦೦

೪೮. ಕೈ. ಕಲ್ಲೆಣಪ್ಪ ಬಸಪ್ಪ ಅಷ್ಟಗಿ ಇವರ ಸ್ಮರಣಾರ್ಥ
ಶ್ರೀ ಶಿವಪುತ್ರಪ್ಪ ಕಲ್ಲೆಣಪ್ಪ ಅಷ್ಟಗಿ ಇವರ ಕೊಡುಗೆ " ೧೦೧-೦೦

೪೯. ಶ್ರೀ ರಾಜಪ್ಪ ಗುಂಡಪ್ಪ ಅಷ್ಟಗಿ " ೧೦೧-೦೦

೫೦. ಶ್ರೀಮತಿ ಶಿವಮ್ಮ ಶಿವಲಿಂಗಪ್ಪ ಅಷ್ಟಗಿ " ೧೦೧-೦೦

೫೧. ಶ್ರೀ ಧೂಳಪ್ಪ ತಿಪ್ಪಣ್ಣಪ್ಪ ವಚ್ಚೆ " ೧೦೧-೦೦

೫೨. ಕೈ. ಶಿವಲಿಂಗಪ್ಪ ಮಲಕಪ್ಪ ಧುತ್ತರಗಿ ಇವರ ಸ್ಮರಣಾರ್ಥ
ಶ್ರೀ ಬಸವಣ್ಣಪ್ಪ ಶಿವಲಿಂಗಪ್ಪ ಧುತ್ತರಗಿ ಇವರ ಕೊಡುಗೆ " ೧೦೧-೦೦

೫೩. ಶ್ರೀಮತಿ ದಾನವ್ವ ಶಿವಲಿಂಗಪ್ಪ ಧುತ್ತರಗಿ " ೧೦೧-೦೦

೫೪. ಶ್ರೀ ಚೆನ್ನಪ್ಪ ಸಿದ್ದಪ್ಪ ಧುತ್ತರಗಿ " ೧೦೧-೦೦

೫೫. ಶ್ರೀ ವೀರಭದ್ರಪ್ಪ ವೀರಸಿದ್ದಪ್ಪ ಗೊಬ್ಬುರ " ೧೦೧-೦೦

೫೬. ಶ್ರೀ ಶಿವಶರಣಪ್ಪ ಬಸವಣ್ಣಪ್ಪ ಗುಂಡದ " ೧೦೧-೦೦

೫೭. ಶ್ರೀ ದೇವೀಂದ್ರಪ್ಪ ವೀರಭದ್ರಪ್ಪ ಅಕ್ಕಾ " ೧೦೧-೦೧

೫೮. ಶ್ರೀ ಚಂದ್ರಾಮಪ್ಪ ಗುರುಮೋರ್ತೆಪ್ಪ ನಿಂಬಾಳ,
ಅಪೇರಾ ಟೀ ಹೌಸ " ೧೦೧-೦೦

೫೯. ಶ್ರೀ ಶಿವಶಂಕರೆಪ್ಪ ಚಂದ್ರಾಮಪ್ಪ ಕಣ್ಣೆ " ೧೦೧-೦೦

೬೦. ಶ್ರೀಮತಿ ರತ್ನಾಬಾಯಿ ತಂದೆ ಸಿದ್ರಾಮಪ್ಪ ಕಣ್ಣೆ " ೧೦೧-೦೦

೬೧. ಶ್ರೀ ಗುರುಪಾದಪ್ಪ ಮಲ್ಲಯ್ಯ ಬಟ್ಟರಕಿ " ೧೦೧-೦೦

೬೨. ಶ್ರೀಮತಿ ಸುಗಲಾಬಾಯಿ ಬಸವಣ್ಣಪ್ಪ ಅಂಬಲಗಿ " ೧೦೧-೦೦

೬೩. ಶ್ರೀಮತಿ ಶೀತಾಬಾಯಿ ಭದ್ರೆ " ೧೦೧-೦೦

೬೪. ಶ್ರೀ ಮಲಕಪ್ಪ ಗುರುಬಸಪ್ಪ ಮೇತ್ರೆ " ೧೦೧-೦೦

೬೫. ಶ್ರೀ ಗುಂಡಪ್ಪ ಕಲ್ಲೆಣಪ್ಪ ಇಕ್ಕಳರೆ " ೧೦೧-೦೦

೬೬. ಶ್ರೀ ಸೋಮಲಿಂಗಪ್ಪ ಕಾಡಪ್ಪ ಕೊಳ್ಳೆ " ೧೦೧-೦೦

೬೭. ಶ್ರೀ ವಿಶ್ವನಾಥ ಗುರುಶಾಂತಪ್ಪ ಪುರಂತ " ೧೦೧-೦೦

೬೮. ಶ್ರೀ ದಾನಪ್ಪ ಚೆನ್ನಸೋಮಣಪ್ಪ ವಾಲೆ ಸೋಲಾಪುರ ೧೦೧-೦೦

೬೯. ಶ್ರೀ ಚಂದ್ರಕಾಂತ ಭೀಮಶಾ ನಾಗತಾಣ " ೧೦೧-೦೦

| | | | |
|---|---|---|---|
| ೨೦. | ಶ್ರೀ ಮಲಕಣಪ್ಪ ಬಂಡೆಪ್ಪ ಸಿಂಗಶೆಟ್ಟಿ | ಸೋಲಾಪುರ | ೧೦೧-೦೦ |
| ೨೧. | ಶ್ರೀ ಮಲ್ಲಿಕಾರ್ಜುನ ರೇವಣಸಿದ್ದಪ್ಪ ಬುಕ್ಕಾ | " | ೧೦೧-೦೦ |
| ೨೨. | ಶ್ರೀ ಚಂದ್ರಕಾಂತ ನಾಗನಾಥ ಔರಾದಿ | " | ೧೦೧-೦೦ |
| ೨೩. | ಶ್ರೀ ಮಲ್ಲಿನಾಥ ಗಂಗಣಪ್ಪ ಠಿಸ್ಕೇ | " | ೧೦೧-೦೦ |
| ೨೪. | ಶ್ರೀ ಬಸವರಾಜ ಅಪ್ಪಾರಾವ ಹೂಗಾರ | ಮುಂಬಯಿ | ೧೦೧-೦೦ |
| ೨೫. | ಶ್ರೀ ಪ್ರೇಮನಾಥ ಪ್ರಭು ಬನಸೋಡೆ,<br>ದಿ. ಟಾಟಾ ಆಯಿಲ್ ಮಿಲ್ಸ | " | ೧೦೧-೦೦ |
| ೨೬. | ಶ್ರೀ ಭೀಮರಾವ ಅರುಣೆ ಮಿಸ್ತ್ರೀ ವಡಲಾ ರೋಡ | " | ೧೦೧-೦೦ |
| ೨೭. | ಶ್ರೀ ಚಂದ್ರಕಾಂತ ಜಗನ್ನಾಥ ಹಿಂಗಮೀರೆ | ಪುಣೆ | ೧೦೧-೦೦ |
| ೨೮. | ಶ್ರೀ ಸುಭಾಷ ರಾಮಲಿಂಗಪ್ಪ ಕೋರೆ | ಲಾತೂರ | ೧೦೧-೦೦ |
| ೨೯. | ಶ್ರೀ ವಿಶ್ವನಾಥ ಏಕನಾಥ ಉಪಾಸೆ | " | ೧೦೧-೦೦ |
| ೩೦. | ಶ್ರೀ ಲಕ್ಷ್ಮಣ ಬಾಬುರಾವ ಆವಾಳೆ | " | ೧೦೧-೦೦ |
| ೩೧. | ಶ್ರೀ ಗೌರೀಶಂಕರ ಮಹಾದೇವಪ್ಪ ಸಾಕರೆ | ಉಸ್ಮಾನಾಬಾದ | ೧೦೧-೦೦ |
| ೩೨. | ಶ್ರೀ ಶ್ರೀಕಾಂತ ಪ್ರಭುಅಪ್ಪ ಮೇನಕೂದಳೆ | ಅಹಮದಪೂರ | ೧೦೧-೦೦ |
| ೩೩. | ಶ್ರೀ ವಿಜಯ ಶಿವಪ್ಪ ವಳಸಂಗೆ | ಔಸಾ | ೧೦೧-೦೦ |
| ೩೪. | ಕುಮಾರಿ ಸುನಿತಾ ಮಹಾದೇವ ನಕಾತೆ | ಬಾರ್ಸಿ | ೧೦೧-೦೦ |
| ೩೫. | ಶ್ರೀ ಉತ್ರೇಶ್ವರ ನಕಾತೆ | " | ೧೦೧-೦೦ |
| ೩೬. | ಶ್ರೀ ಶರದ ಧೊಂಡೀ ಖಡಕೆ | ಬಾರ್ಸಿ | ೧೦೧-೦೦ |
| ೩೭. | ಶ್ರೀ ನಾಗನಾಥ ಮಾರುತಿ ಗೋಟೆ | " | ೧೦೧-೦೦ |
| ೩೮. | ಶ್ರೀ ಶಂಕರರಾವ ಬಳವಂತ ಶೇಟೆ | ಸಾತಾರಾ | ೧೦೧-೦೦ |
| ೩೯. | ಶ್ರೀ ಕಮಲಾಕರ ದತ್ತಾತ್ರೇಯ ಮೋತೆ | " | ೧೦೧-೦೦ |
| ೪೦. | ಕೈ. ಪ್ರಭಾಕರ್ ಶಂಕರರಾವ ಶೇಟೆ ಇವರ ಸ್ಮರಣಾರ್ಥ<br>ಶ್ರೀಮತಿ ಮಂಗಲಾ ಪ್ರಭಾಕರ ಶೇಟೆ ಇವರ ಕೊಡುಗೆ | " | ೧೦೧-೦೦ |
| ೪೧. | ಶ್ರೀ ಶಂಕರಪ್ಪ ರೇವಣಸಿದ್ದಪ್ಪ ವಚ್ಚೆ | ಮೈಂದರ್ಗಿ | ೧೦೧-೦೦ |
| ೪೨. | ಶ್ರೀ ನಾಗಣ್ಣ ಶಿವಲಿಂಗಪ್ಪ ಇಕ್ಕಳಕಿ | " | ೧೦೧-೦೦ |
| ೪೩. | ಶ್ರೀ ಪರಮೇಶ್ವರ ಶಿವಲಿಂಗಪ್ಪ ಬಾಬಾ | ವಾಗದರಗಿ | ೧೦೧-೦೦ |

೯೪. ಶ್ರೀ ಖಂಡಪ್ಪ ತೇಜಪ್ಪ ಇತಲೆ, ಜೋತಿಷ್ಯ ಶಾಸ್ತ್ರೀ ವಾಗದರಗಿ ೧೦೧-೦೦
೯೫. ಡಾ. ಶಿವಶರಣಪ್ಪ ಶಿವಪ್ಪ ಹಾಲಗೇರಿ ವಳಸಂಗ ೧೦೧-೦೦
೯೬. ಶ್ರೀ ಕಾಶಿನಾಥ ಕಲ್ಯಾಣಿ ವೈರಾಗ ೧೦೧-೦೦
೯೭. ಶ್ರೀ ಹಮರಪ್ಪ ಸಿದ್ದಲಿಂಗಪ್ಪ ಸಂಗೇಕರ " ೧೦೧-೦೦
೯೮. ಕುಮಾರಿ ದಾನಮ್ಮ ಕಾಶೀನಾಥ ಕಲ್ಯಾಣಿ " ೧೦೧-೦೦
೯೯. ಶ್ರೀ ರಮೇಶ ರುದ್ರಪ್ಪ ಬಿರಾಜದಾರ ಜತ್ ೧೦೧-೦೦
೧೦೦. ಶ್ರೀ ಶಿವಶರಣಪ್ಪ ಬಸಪ್ಪ ಇಂಡೀ ಕರಜಗಿ ೧೦೧-೦೦
೧೦೧. ಶ್ರೀ ಈಶ್ವರ ಮಹಾಲಿಂಗಪ್ಪ ಲಿಗಾಡೆ ನಿಪ್ಪಾಣಿ ೧೦೧-೦೦
೧೦೨. ಶ್ರೀ ಮಲ್ಲಪ್ಪ ಅಲದಿ ತಾಂಬಾ ೧೦೧-೦೦
೧೦೩. ಶ್ರೀ ಸಂಗಪ್ಪ ಶಿವಶರಣಪ್ಪ ನಿಂಬಾಳ ಎರಮರಸ್ ೧೦೧-೦೦
೧೦೪. ಶ್ರೀ ಶಂಕರ ಸಿದ್ರಾಮಪ್ಪ ಪೂಜಾರಿ ಇಂಗಳೇಶ್ವರ ೧೦೧-೦೦
೧೦೫. ಶ್ರೀ ಮಲಕಾಜಪ್ಪ ಚನ್ನಮಲ್ಲಪ್ಪ ಹಿಪ್ಪರಗಿ ಹಿರೆಮಸಳಿ ೧೦೧-೦೦
೧೦೬. ಶ್ರೀ ಶೇಖರಪ್ಪ ಎಸ್. ತಡಕನಳ್ಳಿ
ಕೆ.ಎಚ್.ಡಿ.ಸಿ. ಮ್ಯಾನೇಜರ ತುಮ್ಮಿನಕಟ್ಟಿ ೧೦೧-೦೦
೧೦೭. ಶ್ರೀ ಧರ್ಮರಾವ ಸಿದ್ರಾಮಪ್ಪ ಬಿರಾಜದಾರ ನಿಂಬರ್ಗಾ ೧೦೧-೦೦
೧೦೮. ಶ್ರೀ ಶಿವರಾಜ ಎಸ್. ಭೂರೆ ಕೆ.ಎಚ್.ಡಿ.ಸಿ. ಭಾತಾಂಬ್ರಾ ೧೦೧-೦೦
೧೦೯. ಶ್ರೀ ಚಂದ್ರಕಾಂತ ಬಸವಣ್ಣಪ್ಪ ಮುನ್ನೋಳಿ, ಶಿಕ್ಷಕರು, ಆಳಂದ ೧೦೧-೦೦
೧೧೦. ಶ್ರೀ ಬಸವರಾಜ ಪ್ರಭಯ್ಯ ಶರಣಮಠ ಬೀದರ ೧೦೧-೦೦
೧೧೧. ಶ್ರೀ ಶ್ರೀಶೈಲಪ್ಪ ಶಂಕರಪ್ಪ ಎಣಗೂರೆ ಜವಳಿ ೧೦೧-೦೦

